# ಹೊಯ್ಸಳರ ಕಾಲದ ಸೋಮನಾಥಪುರ ಮುಖ್ಯ ನಗರದ ಕೇಂದ್ರ ಮತ್ತು ನಗರೀಕರಣ : ಒಂದು ಅಧ್ಯಯನ

(ಇತಿಹಾಸ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)


ಸಂಶೋಧಕ

**ಎಂ.ಕೆ. ನಾಗೇಶ**

ಮಾರ್ಗದರ್ಶಕರು

**ಡಾ. ರಾಜಯ್ಯ**





**ಕರ್ನಾಟಕ ಸಂಘ (ರಿ), ಮಂಡ್ಯ.**

**...ಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**

(ಕನ್ನಡ ವಿ:ವಿ: ಹಂಪಿ ಮಾನ್ಯತೆ ಪಡೆದಿದೆ)

**2007-2008**

# ಹೊಯ್ಸಳರ ಕಾಲದ ಸೋಮನಾಥಪುರ ಮುಖ್ಯ ನಗರ ಕೇಂದ್ರ ಮತ್ತು ನಗರೀಕರಣ : ಒಂದು ಅಧ್ಯಯನ

(ಇತಿಹಾಸ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)

**ಸಂಶೋಧಕ**
**ಎಂ.ಕೆ. ನಾಗೇಶ**

**ಮಾರ್ಗದರ್ಶಕರು**
**ಡಾ. ರಾಚಯ್ಯ**



**ಕರ್ನಾಟಕ ಸಂಘ (ರಿ), ಮಂಡ್ಯ.**
**ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ**
**(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)**
**2007-2008**

# ಮಾರ್ಗದರ್ಶಕರ ಪ್ರಮಾಣಪತ್ರ

"ಹೊಯ್ಸಳರ ಕಾಲದ ಸೋಮನಾಥಪುರ ಮುಖ್ಯ ನಗರ ಕೇಂದ್ರ ಮತ್ತು ನಗರೀಕರಣ: ಒಂದು ಅಧ್ಯಯನ" ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್. ಪದವಿಗಾಗಿ ಶ್ರೀ ಎಂ.ಕೆ.ನಾಗೇಶ್ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ಮಂಡ್ಯ

ದಿನಾಂಕ: 10-9-2008

(ಡಾ. ರಾಚಯ್ಯ)
ಉಪನ್ಯಾಸಕರು, ಇತಿಹಾಸ ವಿಭಾಗ,
ಮಹಾರಾಜ ಕಾಲೇಜು
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು

# ಸಂಶೋಧಕನ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2007-08 ನೇ ಸಾಲಿಗೆ ಇತಿಹಾಸ ಎಂ.ಫಿಲ್ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು "ಹೊಯ್ಸಳರ ಕಾಲದ ಸೋಮನಾಥಪುರ ಮುಖ್ಯ ನಗರ ಕೇಂದ್ರ ಮತ್ತು ನಗರೀಕರಣ : ಒಂದು ಅಧ್ಯಯನ" ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ. ರಾಚಯ್ಯರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತ ಕಾಲಿಕೆಗಳಲ್ಲಿ ಪ್ರಕಟಿಸಿರುವುದಿಲ್ಲ ಮತ್ತು ಕನ್ನಡ ವಿಶ್ವ ವಿದ್ಯಾಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸ್ಥಳ : ಮಂಡ್ಯ
ದಿನಾಂಕ : 10-04-2008

(ಎಂ.ಕೆ. ನಾಗೇಶ)
ಸಂಶೋಧಕ, ಚರಿತ್ರೆ ವಿಭಾಗ
ಕರ್ನಾಟಕ ಸಂಘ (ರಿ) ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ-ಮಾನ್ಯತೆ ಪಡೆದಿದೆ.)

# ವಿಷಯಸೂಚಿ

## ಅಧ್ಯಾಯ 1

### 1.1 ಪೀಠಿಕೆ

ಭಾರತದ ಇತಿಹಾಸ ರಂಗ ವೇದಿಕೆಯಲ್ಲಿ ಅನೇಕ ರಾಜ ಮನೆತನಗಳು ಆಳಿ-ಅಳಿದು ಹೋಗಿವೆ. ಆದರೆ ಇಂದಿಗೂ ಕೂಡ ಅವರು ಬೆಳೆಸಿ ಪೋಷಿಸಿದ ಧರ್ಮ, ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪಗಳು ತಮ್ಮ ಕಾಂತಿಯನ್ನು ಕಳೆದುಕೊಳ್ಳದೇ ಜನರ ಜೀವನದೊಂದಿಗೆ ಬೆರೆತು ಮುಂದುವರಿದುಕೊಂಡು ಬಂದಿವೆ. ರಾಜರು ರಾಜಕೀಯವಾಗಿ ಪ್ರಬಲವಾಗಿ ನೆಲೆಯೂರಲು ನಿರ್ಮಿಸಿ ಕೊಂಡ ಭದ್ರವಾದ ಕೋಟೆಗಳು ಪ್ರಮುಖ ನಗರಕೇಂದ್ರಗಳ ಬೆಳವಣಿಗೆಗೆ ಕಾರಣವಾಯಿತು. ಆ ನಿಟ್ಟಿನಲ್ಲಿ ಪ್ರಮುಖ ನಗರಗಳು ತಲೆಯೆತ್ತಿ ಸರ್ವತೋಮುಖವಾದ ಬೆಳವಣಿಗೆಯನ್ನು ಕಂಡವು. ಮುಂದೆ ಈ ನಗರ ಕೇಂದ್ರಗಳೇ ಆಯಾ ರಾಜ-ಮನೆತನಗಳ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ಸಾರಿಕೊಂಡು ಬಂದಿವೆ. ಇದೇ ರೀತಿ ಕರ್ನಾಟಕವನ್ನು ಆಳ್ವಿಕೆ ನಡೆಸಿದ ರಾಜ ಮನೆತನಗಳ ಇತಿಹಾಸದಲ್ಲಿ ಇದೇ ಅಂಶಗಳನ್ನು ಕಾಣುತ್ತೇವೆ.

ಕರ್ನಾಟಕವನ್ನು ಆಳ್ವಿಕೆ ನಡೆಸಿದ ರಾಜ ಮನೆತನಗಳಲ್ಲಿ ಹೊಯ್ಸಳರು ಪ್ರಸಿದ್ಧರಾಗಿದ್ದಾರೆ. ಹೊಯ್ಸಳರ ಇತಿಹಾಸಕ್ಕೆ ಸಂಬಂಧಿಸಿದಂತೆ ಬೇಲೂರು, ಹಳೇಬೀಡು, ತಲಕಾಡು, ಸೋಮನಾಥಪುರ ಮುಂತಾದ ಅನೇಕ ನಗರಗಳು ರಾಜಕೀಯ, ಐತಿಹಾಸಿಕ ಮತ್ತು ಸಾಂಸ್ಕೃತಿಕ ಕೇಂದ್ರಗಳಾಗಿ ಸರ್ವತೋಮುಖ ಬೆಳವಣಿಗೆಯನ್ನು ಹೊಂದಿದ್ದು ಹೊಯ್ಸಳರ ಕಾಲದಲ್ಲಿ ಇವುಗಳು ಶ್ರೇಷ್ಠ ಆಡಳಿತವನ್ನು ಹೊಂದಿ ಅರಸರ ಔನ್ನತ್ಯಕ್ಕೆ ಗಣನೀಯ ಸೇವೆಯನ್ನು ಸಲ್ಲಿಸಿವೆ ಎಂದರೆ ತಪ್ಪಾಗಲಾರದು.

ಈ ನಗರಗಳು ಕೇವಲ ರಾಜಕೀಯ ಚಟುವಟಿಕೆಗಳ ಕೇಂದ್ರಗಳಾಗಿರದೇ ಈ ನಗರಗಳ ಚಲುವು ಮತ್ತು ವೈಶಿಷ್ಟ್ಯಗಳು ಜನರನ್ನು ಧಾರ್ಮಿಕವಾಗಿ, ವ್ಯಾಪಾರ ಮತ್ತು ವಾಣಿಜ್ಯ ಕೇಂದ್ರಗಳಾಗಿ ಆಕರ್ಷಿಸಿದವು. ಇದರಿಂದ ನಗರಗಳ ಬೆಳವಣಿಗೆ ಹೊಯ್ಸಳರ ಕಾಲದಲ್ಲಿ ತ್ವರಿತವಾಗಿ ಉಂಟಾಯಿತು. ಇಂತಹ ಆಕರ್ಷಣೀಯ ಮತ್ತು ಶ್ರೀಮಂತಿಕೆಯನ್ನು ಹೊಂದಿದ್ದ ನಗರಗಳು ಅನೇಕ ಶತ್ರು ರಾಜ್ಯಗಳ ವಕ್ರದೃಷ್ಟಿಗೆ ಒಳಗಾಗಿ ಹಲವು ಸಂಕಷ್ಟಗಳನ್ನು ಎದುರಿಸಬೇಕಾಗಿ ಬಂದರೂ ಕೂಡ ಹೊಯ್ಸಳ ಅರಸರು ತಮ್ಮ ಪರಾಕ್ರಮಗಳಿಂದ ಶತ್ರುಗಳ ದಾಳಿಗಳಿಂದ ತಮ್ಮ ನಗರಗಳನ್ನು ಹೇಗೆ ರಕ್ಷಿಸಿ, ಪೋಷಿಸಿ ಇತಿಹಾಸದಲ್ಲಿ ಅವುಗಳ ಸ್ಥಾನಮಾನಗಳನ್ನು ಹೇಗೆ ಉನ್ನತ ಮಟ್ಟಕ್ಕೇರಿಸಿದರು

ಎಂಬುದನ್ನು ಸಮಗ್ರವಾಗಿ ಅಧ್ಯಯನ ಮಾಡುವುದೇ ಈ ಸಂಶೋಧನೆಯ ಮೂಲ ಉದ್ದೇಶವಾಗಿದೆ.

### 1.2 ಅಧ್ಯಯನದ ಸ್ವರೂಪ

ಹೊಯ್ಸಳರ ಕಾಲದಲ್ಲಿದ್ದ ಪ್ರಮುಖ ನಗರಗಳ ಐತಿಹಾಸಿಕ ಹಿನ್ನಲೆ ಮತ್ತು ಅವುಗಳ ಪ್ರಾಮುಖ್ಯತೆ ಮುಂತಾದವುಗಳ ಬಗ್ಗೆ ಮಾಹಿತಿಯು ದೊರಕದಿರುವುದು ಸೋಜಿಗದ ಸಂಗತಿಯಾಗಿದೆ. ಈ ಕಾಲದಲ್ಲಿ ಪ್ರಮುಖವಾಗಿ ಸೋಮನಾಥಪುರವು ರಾಜಧಾನಿಯಾಗಿ, ಧಾರ್ಮಿಕ ಸ್ಥಳಗಳಾಗಿ, ವ್ಯಾಪಾರ, ವಾಣಿಜ್ಯ ಕೇಂದ್ರಗಳಾಗಿ ಮತ್ತು ಕಲೆ ಮತ್ತು ವಾಸ್ತುಶಿಲ್ಪ ಕೇಂದ್ರಗಳಾಗಿ ಈ ನಗರದ ಪಾತ್ರವೇನು ಹೊಯ್ಸಳರ ಕಾಲದಲ್ಲಿ ಈ ನಗರವು ಹೊಂದಿದಂತಹ ಪಾತ್ರವೇನು ಮತ್ತು ಇದರ ಪ್ರಾಮುಖ್ಯತೆ ಏನು ಇದರಲ್ಲಿ ವಿಶಿಷ್ಟವಾದುದೇನಿದೆ ಎಂಬುದನ್ನು ವಿವರವಾಗಿ ಮತ್ತು ವಿಮರ್ಶಾತ್ಮಕವಾಗಿ ಅಧ್ಯಯನ ಮಾಡಬೇಕಾದದ್ದು ಅತ್ಯಗತ್ಯವಾಗಿದೆ. ಆದುದರಿಂದ ಈ ಸನ್ನಿವೇಶವನ್ನು ಮನಗಂಡು ಹೊಯ್ಸಳ ಕಾಲದ ಚೌಕಟ್ಟಿನಲ್ಲಿ ಪ್ರಸ್ತುತ ಅಧ್ಯಯನವನ್ನು ಆರಿಸಿಕೊಳ್ಳಲಾಗಿದೆ.

ಹೊಯ್ಸಳರ ಇತಿಹಾಸಕ್ಕೆ ಸಂಬಂಧಿಸಿದಂತೆ ಅನೇಕ ವಿದ್ವಾಂಸರು ಮತ್ತು ಸಂಶೋಧಕರು ಅನೇಕ ಗ್ರಂಥಗಳನ್ನು ಮತ್ತು ಸಂಶೋಧನ ಲೇಖನಗಳನ್ನು ಮಂಡಿಸಿದ್ದಾರೆ. ಆದರೆ ಅವುಗಳ ಹೊಯ್ಸಳರ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಇತಿಹಾಸಕ್ಕೆ ಸಂಬಂಧಿಸಿದವುಗಳಾಗಿವೆ. ಹೊಯ್ಸಳರ ರಾಜಕೀಯ ಇತಿಹಾಸದ ಉಜ್ವಲತೆಯಲ್ಲಿ ಆ ಕಾಲದ ನಗರಗಳ ಪಾತ್ರವೇನು ಅವು ಯಾವ ಮಾದರಿಯಲ್ಲಿದ್ದವು ಅವುಗಳ ವೈಶಿಷ್ಟ್ಯವೇನು, ಅವುಗಳ ಲಕ್ಷಣಗಳೇನು ಕರ್ನಾಟಕದ ಸಂಸ್ಕೃತಿ ಬೆಳವಣಿಗೆಯಲ್ಲಿ ಈ ನಗರಗಳ ಪ್ರಾಮುಖ್ಯತೆ ಏನು ಇವೇ ಮುಂತಾದ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಈ ಸಂಶೋಧನಾ ವಿಷಯವನ್ನು ಆರಿಸಿ ಕೊಳ್ಳಲಾಗಿದೆ.

### 1.3 ರಾಜಕೀಯ ಹಿನ್ನಲೆ

ಹೊಯ್ಸಳರ ಆಳ್ವಿಕೆಯ ಕಾಲ ಕರ್ನಾಟಕದ ಇತಿಹಾಸದಲ್ಲೇ ಅಲ್ಲದೇ ಇಡೀ ದಕ್ಷಿಣ ಭಾರತದ ಇತಿಹಾಸದಲ್ಲೇ ಪ್ರಮುಖ ಅಧ್ಯಾಯಗಳಲ್ಲೊಂದಾಗಿದೆ ಅವರ ರಾಜಕೀಯ ಇತಿಹಾಸ ಎಷ್ಟು ವೈಭವವೋ ಅಷ್ಟೇ ಭವ್ಯವಾದುದು ಅವರ ಸಾಂಸ್ಕೃತಿಕ ಇತಿಹಾಸ. ಇಂತಹ ಒಂದು

ಉಜ್ವಲ ಪರಂಪರೆಗೆ ಅನೇಕ ಪ್ರಮುಖ ಹೊಯ್ಸಳ ಅರಸರು ಕಾರಣರಾದರು. ಹತ್ತನೆಯ ಶತಮಾನದ ಅಂತ್ಯದ ವೇಳೆಗೆ ಅಂದರೆ ಸುಮಾರು ಕ್ರಿ.ಶ.1970 ರಲ್ಲಿ ಸ್ಥಾಪಿಸಿದ ಈ ಮನೆತನ ಸುಮಾರು ನಾನೂರು ವರ್ಷಗಳ ಕಾಲ ಆಳ್ವಿಕೆ ನಡೆಸಿ ಕ್ರಿ.ಶ. 1346ರ ವೇಳೆಗೆ ಕಣ್ಮರೆಯಾಯಿತು. ಇದು ದಕ್ಷಿಣ ಭಾರತದಲ್ಲೇ ಒಂದು ಪ್ರಮುಖ ರಾಜಮನೆತನವೆನಿಸಿಕೊಂಡು ರಾರಾಜಿಸಿತು ನೃಪಕಾಮ. ವಿನಯಾದಿತ್ಯ, ವಿಷ್ಣುವರ್ಧನ, ಎರಡೆಯ ವೀರಬಲ್ಲಾಳ, ಇಮ್ಮಡಿ ನರಸಿಂಹ, ಸೋಮೇಶ್ವರ ಮತ್ತು ಮುಮ್ಮಡಿ ವೀರಬಲ್ಲಾಳ ಮೊದಲಾದ ರಾಜರ ಕಾಲದಲ್ಲಿ ಹೊಯ್ಸಳ ಪ್ರಭುತ್ವ ಉತ್ತುಂಗ ಶಿಖರಕ್ಕೇರಿತು. ಹೊಯ್ಸಳ ಸಂತತಿಯ ಅರಸರು ಸಾಹಿತ್ಯ, ಕಲೆ ಮತ್ತು ಧರ್ಮಕ್ಕೆ ವಿಶೇಷ ಪ್ರಾಶಸ್ತ್ಯ ನೀಡಿ ಸಂಸ್ಕೃತಿಯ ಸಂವರ್ಧನೆಗೆ ಬಹುಮಟ್ಟಿಗೆ ಸಹಕಾರಿಯಾದರು.

ಹೊಯ್ಸಳರ ರಾಜಕೀಯ ಇತಿಹಾಸದಲ್ಲಿ ಮೂರು ಪ್ರಮುಖ ಹಂತಗಳನ್ನು ಗುರುತಿಸಬಹುದು. ಅದು ಪ್ರಾರಂಭಿಕ ಕಾಲ, ಉಚ್ಛ್ರಾಯ ಕಾಲ ಮತ್ತು ಅವನತಿಯ ಕಾಲ ಮೇಲೆ ವಿವರಿಸಿದಂತೆ ಸುಮಾರು ಕ್ರಿ.ಶ. 970 ರ ವೇಳೆಗೆ ಹೊಯ್ಸಳ ರಾಜ್ಯ ಸ್ಥಾಪನೆಯಾಯಿತೆಂದು ಇತಿಹಾಸಕಾರರು ಅಭಿಪ್ರಾಯ ಪಟ್ಟಿದ್ದಾರೆ. ಕ್ರಿ.ಶ. 10 ಮತ್ತು 11ನೇ ಶತಮಾನಗಳಲ್ಲಿ ಕಲ್ಯಾಣಿ ಚಾಲುಕ್ಯರಿಗೂ ಮತ್ತು ಚೋಳರಿಗೂ ದಕ್ಷಿಣ ಭಾರತದ ಸಾರ್ವಭೌಮತ್ವಕ್ಕಾಗಿ ನಿರಂತರವಾಗಿ ಹೋರಾಟಗಳು ನಡೆದವು. ರಾಜ ರಾಜ ಚೋಳರು ಕ್ರಿ.ಶ. 1004 ರಲ್ಲಿ ತಲಕಾಡಿನ ಗಂಗರನ್ನು ಪರಾಭವಗೊಳಿಸಿ ಗಂಗವಾಡಿಯ ಬಹುಭಾಗವನ್ನು ಚೋಳರ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು. ಆ ವೇಳೆಗೆ ಬಹುಶಃ ಗಂಗರ ಕೊನೆಗಾಲದಲ್ಲಿ ಮಲೆನಾಡಿನಲ್ಲಿ ಸಣ್ಣ ಸಂಸ್ಥಾನವೊಂದರ ಮಂಡಲಿಕನಾಗಿಯೇ ಅಥವಾ ಗಂಗರ ಆಡಳಿತ ವರ್ಗದಲ್ಲಿ ಚಿಕ್ಕ ಹುದ್ದೆಯಲ್ಲೋ ಇದ್ದ ಸಳನು ಕ್ರಮೇಣ ರಾಜ್ಯ ಸ್ಥಾಪನೆಗೆ ಅನುಕೂಲವಾಗಿದ್ದ ಪರಿಸ್ಥಿತಿಯನ್ನು ಉಪಯೋಗಿಸಿಕೊಂಡು ಹೊಯ್ಸಳ ಮನೆತನವನ್ನು ಸ್ಥಾಪಿಸಿದನು.

ಸಳನ ಉತ್ತರಾಧಿಕಾರಿಗಳು ಕಲ್ಯಾಣಿ ಚಾಲುಕ್ಯರ ಅಧೀನರಾಗಿಯೇ ತಮ್ಮ ಪ್ರಾಬಲ್ಯವನ್ನು ಹೆಚ್ಚಿಸಿಕೊಂಡರು. ಅವರು ಗಂಗರ ಬಿರುದುಗಳಾದ 'ರಾಜಮಲ್ಲ ಪೆರುಮಾಡಿ' ಹಾಗೂ 'ವಿಕ್ರಮ ಗಂಗ' ಮುಂತಾದ ಬಿರುದುಗಳನ್ನು ಹೊಂದಿದ್ದರು. ಚೋಳರು ಕ್ರಿ.ಶ. 1004 ರಲ್ಲಿ ತಲಕಾಡನ್ನು ಗೆದ್ದುಕೊಂಡ ನಂತರ ಹೊಯ್ಸಳರು ಗಂಗರ ಪರವಾಗಿ ಹೋರಾಟ ನಡೆಸಿದರೆಂದು ತಿಳಿದು ಬರುತ್ತದೆ. ಕ್ರಿ.ಶ. 1006ರ ಸುಮಾರಿನಲ್ಲಿ ಗಂಗರ ಪರವಾಗಿ ಹೊಯ್ಸಳ ಮಾಂಡಲಿಕನು ಕಲಿಯೂರು

ಎಂಬಲ್ಲಿ ಚೋಳರನ್ನು ಎದುರಿಸಿ ಚೋಳ ಪ್ರಾಂತಾಧಿಕಾರಿಯಾದ ಅಪ್ರಮೇಯನಿಂದ ಸೋಲನ್ನು ಅನುಭವಿಸಿದ ಸಂಗತಿಯು ಶಾಸನವೊಂದರಿಂದ ತಿಳಿದು ಬರುತ್ತದೆ.

ಹೊಯ್ಸಳರ ಮೂಲದ ಬಗ್ಗೆ ವಿದ್ವಾಂಸರು ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಅವರ ಮೂಲವನ್ನು ಕುರಿತ ದಂತಕಥೆಗಳು ಕ್ರಿ.ಶ. 11ನೇ ಶತಮಾನದಿಂದಲೂ ರೂಪುಗೊಳ್ಳುತ್ತಾ ಬಂದಿವೆ. ಅದು ಹೊಯ್ಸಳ ಇತಿಹಾಸದ ಸಂಘಟನೆಯ ಯುಗ. ಆದ್ದರಿಂದ ಈ ಕಥೆಗಳ ಉದ್ದೇಶ ಸಂದೇಹಾಸ್ಪದವಾಗುತ್ತದೆ. ಸಂಗ್ರಹವಾಗಿ ಹೇಳಬೇಕೆಂದರೆ ಈ ವಂಶದ ಮೂಲಪುರುಷ ಸಳ ಎನ್ನುವವನು ಒಬ್ಬ ವೀರ ಮತ್ತು ಕಟ್ಟಾ ಜೈನ ಒಂದು ಸಂದರ್ಭದಲ್ಲಿ ಅವನು ವಾಸಂತಿಕಾದೇವಿ ಯನ್ನು ಪೂಜಿಸುವ ಸಲುವಾಗಿ ದೇವಲಯಕ್ಕೆ ಹೋಗಿದ್ದನು. ದೇವಾಲಯವಿದ್ದುದು ಸೋಸೆವೂರು ಅಥವಾ ಶಶಕಪುರ ಎಂಬಲ್ಲಿ ತನ್ನ ಕುಲದೇವತೆ ವಾಸಂತಿಕಾ ದೇವಿಯನ್ನು ಪೂಜಿಸಿದ ನಂತರ ಅಲ್ಲೇ ಇದ್ದ ತನ್ನ ಗುರುವಾದ ವರ್ಧಮಾನ ಸುದತ್ತರ ಬಳಿಗೆ ಒಂದು ಅವನ ಆಶೀರ್ವಾದವನ್ನು ಮತ್ತು ಧರ್ಮ ಬೋಧನೆಯನ್ನು ಪಡೆಯಲು ಬಂದು ಕುಳಿತನು, ಆ ಕ್ಷಣದಲ್ಲಿ ಸಮೀಪದಲ್ಲಿದ್ದ ಕಾಡಿನಿಂದ ಒಂದು ಭಯಂಕರವಾದ ಹುಲಿಯು ಗರ್ಜಿಸುತ್ತಾ ಅವರ ಮೇಲೆ ಹಾರಿತು. ಆಗ ಗುರುಗಳು ಪೊಯ್ ! ಸಳ ! (ಸಳ ಹೊಡಿ) ಎಂದು ಕೂಗಿದರು. ವೀರನಾಗಿದ್ದ ಶಿಷ್ಯನು ತನ್ನ ಗುರುವಿನ ಆದೇಶದಂತೆ ಆ ಹುಲಿಯನ್ನು ಇರಿದು ಕೊಂದನು, ಅಲ್ಲದೆ ಹೊಯ್ಸಳ ಅಥವಾ ಹೊಯ್ ಸಳ ಎಂಬ ಹೆಸರನ್ನು ತನ್ನ ವಂಶನಾಮವನ್ನಾಗಿ ಮಾಡಿಕೊಂಡನು ಹುಲಿಯನ್ನು ವೀರನು ಕೊಲ್ಲುತ್ತಿರುವ ಚಿತ್ರವು ಅವನ ವಂಶದ ಚಿಹ್ನೆಯಾಯಿತು.[1] ಹೊಯ್ಸಳ ಇತಿಹಾಸದ ನಿರೂಪಣೆಗಳಲ್ಲೆಲ್ಲ ಈ ಕಥೆಯನ್ನೇ ಅಥವಾ ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಅದನ್ನು ಹೊಯ್ಸಳ ರಾಜವಂಶದ ಮೂಲವೆಂದು ಹೇಳಿದೆ. ಸಳನ ಆಳ್ವಿಕೆಯ ಕಾಲ ಮತ್ತು ಘಟನೆಗಳಿಗೆ ಸಂಬಂಧಿಸಿದ ಮಾಹಿತಿಗಳು ದೊರೆತಿಲ್ಲ. ಸಳನು ಪರಾಕ್ರಮದಿಂದ ತನಗೆದುರಾದ ಸಮಸ್ಯೆಗಳನ್ನು ನಿವಾರಿಸಿ ರಾಜ್ಯ ಸ್ಥಾಪನೆ ಮಾಡಿ ಹೊಯ್ಸಳ ಸಂತತಿಯ ಸ್ಥಾಪಕನಾದನು.

**ನೃಪಕಾಮ (ಕ್ರಿ.ಶ. 1006-1047)**

ಹೊಯ್ಸಳ ರಾಜವಂಶದಲ್ಲಿ ಪ್ರಾರಂಭ ಕಾಲದ ಅಸ್ಪಷ್ಟತೆಯ ಮಬ್ಬಿನಿಂದ ಸ್ಪಷ್ಟವಾಗಿ ಮೂಡಿ ಬರುವ ಮೊದಲನೆಯ ವ್ಯಕ್ತಿ ನೃಪಕಾಮ. ಅವನು ಬಹು ಸಮರ್ಥನಾಗಿದ್ದ ಆಶೋತ್ತರಗಳಿದ್ದ ನಾಯಕನು ರಾಜ್ಯವನ್ನಾಳಬೇಕೆಂದು ನಿರ್ಧಾರ ಅವನಲ್ಲಿತ್ತು ಗಣನೀಯ ರಾಜ

ನೀತಿಜ್ಞನು ಆಗಿದ್ದ ನೃಪಕಾಮನು ಗಂಗ ಮತ್ತು ಕದಂಬರೊಂದಿಗೆ ಮೈತ್ರಿ ಬೆಳೆಸಿಕೊಳ್ಳುವ ಅಗತ್ಯವನ್ನು ಮನಗಂಡಿದ್ದನು.

**ವಿನಯಾದಿತ್ಯ (ಕ್ರಿ.ಶ. 1047-1097)**

ನೃಪಕಾಮನ ನಂತರ ಅವನ ಮಗನಾದ ವಿನಯಾದಿತ್ಯನು ಕ್ರಿ.ಶ. 1047 ರಲ್ಲಿ ಅಧಿಕಾರಕ್ಕೆ ಬಂದನು. ಇವನು ಸುಮಾರು 50 ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ಈ ಕಾಲದಲ್ಲಿಯೇ ಹೊಯ್ಸಳರು ಕಲ್ಯಾಣದ ಚಾಲುಕ್ಯರೊಡನೆ ಮೈತ್ರಿಯನ್ನು ಬೆಳೆಸಿಕೊಂಡರು. ಕ್ರಿ.ಶ. 1068 ರಲ್ಲಿ ಒಂದನೆ ಸೋಮೇಶ್ವರ ಕಾಲವಾದ ಮೇಲೆ ಅವನ ಮಗನಾದ ಎರಡನೆಯ ಸೋಮೇಶ್ವರ ಮತ್ತು ಅವನ ಸಹೋದರನಾದ ವಿಕ್ರಮಾದಿತ್ಯನಿಗೂ ವೈಮನಸ್ಯ ಹುಟ್ಟಿತು. ಆಗ ವಿನಯಾದಿತ್ಯನ ತನ್ನ ಮಗನಾದ ಎರೆಯಂಗನ ನೇತೃತ್ವದಲ್ಲಿ ಬೃಹತ್ ಸೈನ್ಯವನ್ನು ಸೋಮೇಶ್ವರನ ನೆರವಿಗೆ ಕಳುಹಿಸಿದನು. ಕೆಲವು ವರ್ಷಗಳು ಕಳೆದ ನಂತರ ಎರಡನೆಯ ಸೋಮೇಶ್ವರ ಮರಣ ಹೊಂದಿದನು. ಆಗ ವಿಕ್ರಮಾದಿತ್ಯ ಚಾಲುಕ್ಯ ಸಿಂಹಾಸನದ ಸ್ಪರ್ಧಾರಹಿತ ಅಧಿಪತಿಯಾದನು. ಆಗ ವಿನಯಾದಿತ್ಯನು ವಿಕ್ರಮಾಧಿತ್ಯನ ಸಾರ್ವಭೌಮತ್ವವನ್ನು ಅಂಗೀಕರಿಸಲು ಶಂಕಿಸಲಿಲ್ಲ. ಎರೆಯಂಗ ಇನ್ನೂ ರಾಜಕುಮಾರನಾಗಿದ್ದಾಗಲೇ ಎರಡನೆಯ ಸೋಮೇಶ್ವರನ ಆಹ್ವಾನವನ್ನು ಅಂಗೀಕರಿಸಿ ತನ್ನ ಶೌರ್ಯವನ್ನು ತೋರಿಸಲು ಇನ್ನೊಂದು ಅವಕಾಶವನ್ನು ಹೊಂದಿದನು. ಅವನು ಮಾಲವ ರಾಜ್ಯದ ಪ್ರತಾಪಶಾಲಿ ಎನಿಸಿದ್ದ ಭೋಜರಾಜನ ದುರ್ಗ ಧಾರಾನಗರವನ್ನು ಮುತ್ತಿ ವಶಪಡಿಸಿಕೊಂಡನು.[2]

ಹಾಗೆಯೇ ಅವನು ಚಕ್ರಗೊಟ್ಟವನ್ನು ವಶಪಡಿಸಿಕೊಂಡುದಲ್ಲದೆ ಕಳಿಂಗ ರಾಜ್ಯದ ಸೈನ್ಯವನ್ನು ಸೋಲಿಸಿದನು ಇತರ ಸಾಮಂತ ಅರಸರಿಗಿಂತ ಎರೆಯಂಗನು ಹೆಚ್ಚು ಪ್ರಭಾವಶಾಲಿ ಯಾಗಿ ಮೆರೆದನು. ಇಪ್ಪತ್ತು ವರ್ಷಗಳ ಹಿಂದೆ ಎರೆಯಂಗ ಧಾರಾ ನಗರವನ್ನು ಮುತ್ತಿ ನಾಶಮಾಡಿದುದ್ದಕ್ಕೆ ಸೇಡನ್ನು ತೀರಿಸಿಕೊಳ್ಳಲು ಪರಮಾರರ ದಂಡನಾಯಕನಾದ ಜಗದ್ದೇವ ದೋರಸಮುದ್ರದ ಮೇಲೆ ದಂಡೆತ್ತಿ ಬಂದನು. ಜಗದ್ದೇವನು ಎರೆಯಂಗನಂತೆಯೇ ವಿಕ್ರಮಾದಿತ್ಯನ ಸಾಮಂತನಾಗಿದ್ದನು. ಆಗ ಎರೆಯಂಗನ ಮಕ್ಕಳಾದ ಬಲ್ಲಾಳ ಮತ್ತು ವಿಷ್ಣುವರ್ಧನರು ಈ ದಾಳಿಯನ್ನು ಹಿಮ್ಮೆಟ್ಟಿಸಲು ಯಶಸ್ವಿಯಾದರು.[3]

**ಒಂದನೇ ಬಲ್ಲಾಳ (ಕ್ರಿ.ಶ. 1102-1108)**

ಎರೆಯಂಗನ ಮರಣದ ನಂತರ ಕ್ರಿ.ಶ. 1102 ರಲ್ಲಿ ಒಂದನೇ ಬಲ್ಲಾಳ ಅಧಿಕಾರಕ್ಕೆ ಬಂದು ಹೊಯ್ಸಳ ರಾಜ್ಯವನ್ನು ವಿಸ್ತರಿಸಿ ರಾಜ್ಯವನ್ನು ಕಲ್ಯಾಣ ಚಾಲುಕ್ಯರ ಅಧೀನದಿಂದ ಸ್ವತಂತ್ರವಾಗಿಸಲು ಬಯಸಿದನು. ಇವನ ಕಾಲದಲ್ಲಿಯೇ ರಾಜಧಾನಿಯು ಸೊಸೇವೂರಿನಿಂದ ಬೇಲೂರಿಗೆ (ವೇಲಾಪುರ) ವರ್ಗಾಯಿಸಲ್ಪಟ್ಟಿತು. ಆಗ ದೋರಸಮುದ್ರ (ಹಳೇಬೀಡು) ಪರ್ಯಾಯ ರಾಜಧಾನಿಯಾಗಿ ಉಳಿಯಿತು.[4]

ಬಲ್ಲಾಳನು ಕ್ರಿ.ಶ. 1104 ರಲ್ಲಿ ಚೆಂಗಾಳ್ವರ ಮೇಲೆ ದಾಳಿ ಮಾಡಿದನು. ಜನಸಾಮಾನ್ಯರ ಮಟ್ಟದಲ್ಲಿ ಶೈವ ಧರ್ಮವು ಜನಪ್ರಿಯವಾಗಿರುವುದನ್ನು ಗಮನಿಸಿ. ಅವನು ಶೈವನಾಗಿ ಮತಾಂತರ ಗೊಂಡನು. ಆತನಿಗೆ ಮಕ್ಕಳಿರಲಿಲ್ಲವಾದ್ದರಿಂದ ನಂತರ ಅವನ ಸಹೋದರನಾದ ವಿಷ್ಣುವರ್ಧನನು ಅಧಿಕಾರಕ್ಕೆ ಬಂದನು.

**ವಿಷ್ಣುವರ್ಧನ (ಕ್ರಿ.ಶ. 1108-1142)**

ವಿಷ್ಣುವರ್ಧನ ಹೊಯ್ಸಳರ ಕೀರ್ತಿಯನ್ನು ನಿಜವಾಗಿ ಸ್ಥಾಪಿಸಿದವನು ಈತನು ಗಂಗವಾಡಿಯ ಪ್ರದೇಶವನ್ನು ತನ್ನ ಅಧೀನಕ್ಕೆ ಒಳಪಡಿಸಿ ವಿಸ್ತಾರವಾದ ಸಾಮ್ರಾಜ್ಯವನ್ನು ನಿರ್ಮಿಸಿದನು. ಒಂದನೇ ಬಲ್ಲಾಳನ ಮರಣ ನಂತರದ ಕ್ರಿ.ಶ. 1108 ರಲ್ಲಿ ಅಧಿಕಾರಕ್ಕೆ ಬಂದು ಕಲ್ಯಾಣ ಚಾಲುಕ್ಯರ ಅಧೀನದಿಂದ ಮುಕ್ತರಾಗುವುದು ಮತ್ತು ಸಾಮ್ರಾಜ್ಯದ ವಿಸ್ತರಣೆ ಮಾಡುವುದು ಈತನ ರಾಜಕೀಯ ಬೆಳವಣಿಗೆಗಳ ಪ್ರಮುಖ ಅಂಶಗಳಾಗಿದ್ದವು.[5]

ಇವರ ಕಾಲದಲ್ಲಿ ದೋರಸಮುದ್ರ ಅಥವಾ ಹಳೇಬೀಡು ರಾಜ್ಯದ ರಾಜಧಾನಿಯಾಗಿತ್ತು. ರಾಷ್ಟ್ರಕೂಟದ ರಾಜನಾದ ಧ್ರುವನು ಅಲ್ಲಿ ಕಟ್ಟಿಸಿದ ಕೆರೆಯ ಹೆಸರೇ ಅದಕ್ಕೆ ಬಂದಿದೆ.[6] ರಾಜ್ಯದ ಉತ್ತರದಲ್ಲಿ ಬಂಕಾಪುರ, ದಕ್ಷಿಣದಲ್ಲಿ ತಲಕಾಡು, ಪ್ರಾದೇಶಿಕ ರಾಜಧಾನಿಗಳಾದವು. ಅವನು ಹೊಂದಿದ್ದ 'ತಲಕಾಡುಗೊಂಡ' 'ಮಲೆ ಪರೊಳ್‌ಗಂಡ', 'ಗಂಡಗಿರಿನಾಥ', ಕದನ ಪ್ರಚಂಡ ಸತ್ಯ ರತ್ನಾಕರ ವಿವೇಕ ನಾರಾಯಣ ಸಾಹಸಭೀಮ ಮುಂತಾದ ಬಿರುದುಗಳು ಅವನ ಯುದ್ಧ ಸಾಮರ್ಥ್ಯವನ್ನು ಮಹಾ ವ್ಯಕ್ತಿತ್ವವನ್ನು ಹೊಗಳುತ್ತವೆ. ಗಂಗವಾಡಿಯು ಚೋಳರ ಪ್ರಧಾನ ಪ್ರಾಂತ್ಯವಾಗಿ ಇದ್ದುದು ವಿಷ್ಣುವರ್ಧನನಿಗೆ ಸರಿಯಾಗಿ ಕಾಣಲಿಲ್ಲ.

ಹೊಯ್ಸಳ ದಂಡನಾಯಕ ಗಂಗರಾಜನು ಕ್ರಿ.ಶ. 1116 ರಲ್ಲಿ ತಲಕಾಡನ್ನು ಚೋಳರಿಂದ ವಶಪಡಿಸಿಕೊಂಡನು.[7] ವಿಷ್ಣುವರ್ಧನನ ನಾಣ್ಯಗಳಲ್ಲಿ 'ತಲಕಾಡುಗೊಂಡ' ಎಂಬ ಬಿರುದು ಕಂಡು ಬರುತ್ತದೆ. ತಲಕಾಡಿನ ವಿಜಯದ ನಂತರ ಚೋಳ ರಾಜ್ಯದ ಮೇಲೆ ದಿಗ್ವಿಜಯ ಪ್ರಾರಂಭವಾಯಿತು. ವಿಷ್ಣುವರ್ಧನನ ಅನೇಕ ಶಾಸನಗಳಲ್ಲಿ ಅವನು ದಕ್ಷಿಣದಲ್ಲಿ ರಾಮೇಶ್ವರದವರೆಗೂ ದಿಗ್ವಿಜಯ ನಡೆಸಿದ ಉಲ್ಲೇಖವಿದೆ. ಅವನು 'ಕಾಂಚಿಗೊಂಡ' ಎಂದು ಬಿರುದನ್ನು ಹೊಂದಿದನೆಂದು ಒಂದು ಶಾಸನದಿಂದ ತಿಳಿದು ಬರುತ್ತದೆ. ಮಧುರೆಯು ಅವನ ಹಸ್ತಗತವಾಗಿ ನಾಶವಾಯಿತೆಂದು ಅವನ ದಂಡನಾಯಕನೋರ್ವನಿಂದ ಜನನಾಥಪುರವು ನಾಶವಾಯಿತೆಂದು ಕಾಂಚಿಯಲ್ಲಿ ಜಯಭೇರಿಯ ಮೂಲಕ ಪ್ರಸಿದ್ಧ ಪಡಿಸಿಲಾಯಿತೆಂದು ಹೇಳಲಾಗಿದೆ. ಸೇಲಂ, ಕೊಯಮತ್ತೂರು ಮುಂತಾದ ತಮಿಳುನಾಡಿನ ಭಾಗಗಳಲ್ಲಿ ದೊರಕುವ ವಿಷ್ಣುವರ್ಧನನ ಶಾಸನಗಳಲ್ಲಿ ಅವನು 'ಕಾಂಚಿಕೊಂಡ' ಬಿರುದನ್ನು ಹೊಂದಿದುಕ್ಕೆ ಅರ್ಹತೆಯನ್ನು ಸೂಚಿಸಲಾಗಿದೆ. ಅವನ ದಂಡನಾಯಕ ಗಂಗರಾಜನು ಯಶಸ್ವಿಯಾದ ಯುದ್ಧ ನಡೆಸಿದರೂ ಅವನು ಆರನೇ ವಿಕ್ರಮಾದಿತ್ಯನ ಸಾಮಂತನಾಗಿಯೇ ಇದ್ದು ಕ್ರಿ.ಶ. 1126 ರಲ್ಲಿ ವಿಕ್ರಮಾದಿತ್ಯನು ಮರಣ ಹೊಂದಿದ ಮೇಲೆಯೇ ತಾನು ಸ್ವತಂತ್ರ ರಾಜನೆಂದು ಘೋಷಿಸಿಕೊಂಡನು. ಅವನ ಸಾಮ್ರಾಜ್ಯವು ಕೊಂಡು (ಸೇಲಂ) ನಹ್ಗಲಿ (ಕೋಲಾರ ಜಿಲ್ಲೆಯ ಪೂರ್ವಭಾಗ) ತಲಕಾಡು (ಮೈಸೂರು ಜಿಲ್ಲೆ) ಗಂಗವಾಡಿ ನೊಳಂಬವಾಡಿ, ಬನವಾಸಿ ಹಾನಗಲ್, ಹುಲಿಗೆರೆ, ಹಲಸಿಗೆ ಮತ್ತು ಬೆಳವೊಲ ಈ ಪ್ರಾಂತಗಳಿಂದ ಕೂಡಿದ್ದಿತು. ಅವನು ಅಪ್ರತಿಮ ವೀರಯೋಧನೆಂದು ಕೀರ್ತಿ ಎಲ್ಲೆಲ್ಲಿಯೂ ಹರಡಿತ್ತು.

ವಿಷ್ಣುವರ್ಧನನ ಬಹುಮುಖ ಪ್ರತಿಭೆ ಯುದ್ಧದಲ್ಲು, ಶಾಂತಿಯಲ್ಲೂ ಅವನ ಸಮಾನವಾಗಿ ಶ್ರೇಷ್ಠನಾಗಿದ್ದನು. ಸೈನ್ಯ ಸಮೇತನಾಗಿ ಸಂಚರಿಸುತ್ತಲೇ ಇದ್ದು ಅವನಿಗೆ ವಿಶ್ರಾಂತಿಯೇ ಇರಲಿಲ್ಲ. ಅವನ ಆಳ್ವಿಕೆಯಲ್ಲಿ ಕರ್ನಾಟಕದಲ್ಲಿ ಶ್ರೀ ವೈಷ್ಣವ ಧರ್ಮದ ಜನಪ್ರಿಯತೆಯು ಪುನರುಜ್ಜೀವನ ಗೊಂಡಿತು. ಅದು ಜೈನ ಧರ್ಮದ ಉಚ್ಛ್ರಾಯ ಕಾಲವೂ ಆಗಿತ್ತು. ಜೈನಳಾಗಿದ್ದ ಅವನ ರಾಣಿ ಶಾಂತಲದೇವಿಯು ಸಂಗೀತ ನೃತ್ಯಗಳಲ್ಲಿ ಪ್ರವೀಣೆಯಾಗಿದ್ದಳು. ವಿಷ್ಣುವರ್ಧನನು ಜೈನ, ಶೈವ ಮತ್ತು ಶ್ರೀ ವೈಷ್ಣವ ಸಂಸ್ಥೆಗಳಿಗೆ ಸಮಾನವಾಗಿ ಆಶ್ರಯ ನೀಡಿದ್ದನು.[8] ಇವನು ಬೇಲೂರು, ತಲಕಾಡು, ಮೇಲುಕೋಟೆ, ತೊಣ್ಣೂರು, ಗದಗ, ಬಂಕಾಪುರಗಳಲ್ಲಿ ದೇವಾಲಯಗಳನ್ನು ನಿರ್ಮಿಸಿದನು.

**ಒಂದನೇ ನರಸಿಂಹ (ಕ್ರಿ.ಶ. 1142-1173)**

ವಿಷ್ಣುವರ್ಧನನ ನಂತರ ಅಧಿಕಾರಕ್ಕೆ ಬಂದ ಒಂದನೇ ನರಸಿಂಹನು ಕೇವಲ ಎಂಟು ವರ್ಷದ ಬಾಲಕನಾಗಿದ್ದನು. ಈತನ ಕಾಲದಲ್ಲಿ ಸಾಮಂತರ ನಿಷ್ಠೆ ಕಡಿಮೆಯಾಗಿ ಅವರು ಸ್ವತಂತ್ರರಾಗಲು ಹವಣಿಸುತ್ತಿದ್ದರು. ಕ್ರಿ.ಶ. 1154 ರಲ್ಲಿ ಕಲಚೂರಿ ಬಿಜ್ಜಳನು ಕಲ್ಯಾಣವನ್ನು ವಶಪಡಿಸಿಕೊಂಡನು. ಪರಿಣಾಮವಾಗಿ ಬನವಾಸಿ ಬೆಳವೊಲ, ನೊಳಂಬವಾಡಿ, ಪ್ರದೇಶಗಳು ಹೊಯ್ಸಳರಿಂದ ಕೈಬಿಟ್ಟು ಹೋದವು.[9] ಈತನು ವಿಲಾಸಿಯು ಬೋಗಜೀವಿಯು ಆಗಿದ್ದರಿಂದ ತನ್ನ ನಲವತ್ತನೆಯ ವಯಸ್ಸಿನಲ್ಲಿಯೇ ಮರಣ ಹೊಂದಿದನು.

**ಎರಡನೇ ಬಲ್ಲಾಳ (ಕ್ರಿ.ಶ. 1173-1220)**

ವಿಷ್ಣುವರ್ಧನನ ನಂತರ ಆಳ್ವಿಕೆ ನಡೆಸಿದವರಲ್ಲಿ ಎರಡನೇ ಬಲ್ಲಾಳ ಪ್ರಸಿದ್ಧನಾಗಿದ್ದಾನೆ. ಇವನ ಕಾಲದಲ್ಲಿ ಸಾಮ್ರಾಜ್ಯವು ವಿಸ್ತಾರವಾಯಿತು. ಇವನಿಂದ ಕೊಂಗಾಳ್ವರು, ಜೆಂಗಾಳ್ವರು ದಮನವಾದರು ರಾಜ್ಯದಲ್ಲಿ ಕಂಡುಬಂದ ಅವ್ಯವಸ್ಥೆ ಅಡಗಿಸಲ್ಪಟ್ಟಿತು. ಉಚ್ಚಂಗಿ ಕೋಟೆ ಕೈವಶವಾಯಿತು. ಬಲ್ಲಾಳನು "ಗಿರಿದುರ್ಗಮಲ್ಲ"ನೆಂಬ ಬಿರುದನ್ನು ಹೊಂದಿದನು, ಉಚ್ಚಂಗಿಯಲ್ಲಿ ಪಾಂಡ್ಯ ಮನೆತನದವರು ಆಳುತ್ತಿದ್ದರು. ಅದು ಅವನ ಕೈವಶವಾದುದು ಒಂದು ಶನಿವಾರವಾದುದರಿಂದ ಬಲ್ಲಾಳನು 'ಶನಿವಾರ ಸಿದ್ಧಿ' ಎಂಬ ಬಿರುದನ್ನು ಹೊಂದಿದನು. ಪಾಂಡ್ಯರ ನೆರೆಯ ರಾಜ ಹಂಜೇರು ಚೋಳನ ಮೇಲು ಉತ್ತರದಲ್ಲಿ ತುಂಗಭದ್ರೆಯ ಆಚೆಗೂ ದಿಗ್ವಿಜಯಗಳು ನಡೆದವು. ಇವುಗಳಲ್ಲಿ ಬಹಳ ಮುಖ್ಯ

**ಸೋಮೇಶ್ವರ (ಕ್ರಿ.ಶ. 1236-1254)**

ನರಸಿಂಹನ ನಂತರ ಅಧಿಕಾರಕ್ಕೆ ಬಂದ ಸೋಮೇಶ್ವರನು ತಂದೆಯ ಜೊತೆಯಲ್ಲಿ ದೋರ ಸಮುದ್ರದಲ್ಲೇ ಇದ್ದು ರಾಜ್ಯಾಡಳಿತದಲ್ಲಿ ತರಬೇತಿ ಪಡೆದನು. ಇವನಿಗೆ ಸೋವಿದೇವ ಅಥವಾ ಸೋಮೇಶ್ವರ ಎಂಬ ಹೆಸರಿತ್ತು. ಇವನು ತನ್ನ ತಂದೆ ನಡೆಸಿದ ಕೆಲವು ದಂಡಯಾತ್ರೆಗಳಲ್ಲಿ ಭಾಗವಹಿಸಿದ್ದನು. ಆಗ ಹೊಯ್ಸಳರ ದಂಡಯಾತ್ರೆ ಕಾಂಚಿಯವರೆಗೂ ಮುಂದುವರೆಯಿತು. ಸೋಮೇಶ್ವರನು ಫಲವತ್ತಾದ ಮಧುರೈ ಮತ್ತು ಗಂಗೈಕೊಂಡ ಚೋಳಪುರಂಗಳನ್ನು ವಶಪಡಿಸಿ ಕೊಂಡದ್ದು, ಚೋಳರಿಗೂ ಮತ್ತು ಪಾಂಡ್ಯರಿಗೂ ಸಹಿಸದಾಯಿತು. ಮೂರನೇ ರಾಜರಾಜನವರೆಗೂ ನಿಷ್ಟುರವಾಗಿದ್ದ ಚೋಳರು ಮೂರನೇ ರಾಜೇಂದ್ರನು ಅಧಿಕಾರಕ್ಕೆ ಬಂದ ಮೇಲೆ ಹೊಯ್ಸಳರ ವಿರೋಧಿಯಾಗಿ, ಅರಸನಾಗಿದ್ದ ಸೋಮೇಶ್ವರನನ್ನು ಕಾಲ್ದೆಗೆಯುವಂತೆ ಮಾಡಿದರು.[12]

ಜಟಾವರ್ಮ ಸುಂದರ ಪಾಂಡ್ಯನು ಕ್ರಿ.ಶ. 1251 ರಲ್ಲಿ ಅಧಿಕಾರಕ್ಕೆ ಬಂದನು. ಇದು ಪಾಂಡ್ಯರ ಇತಿಹಾಸದಲ್ಲಿ ಒಂದು ಗಣನೀಯ ಅಂಶವಾಯಿತು. ದಕ್ಷಿಣ ಭಾರತದ ಎಲ್ಲಾ ರಾಜರು ಅವನ ಸಾಮರ್ಥ್ಯವನ್ನು ಮನಗಂಡರು. ಈ ಸಾಮಾನ್ಯ ಅಪಾಯದಿಂದ ಹೊಯ್ಸಳರ ಮತ್ತು ಚೋಳರ ನಡುವಿನ ಭಿನ್ನಾಭಿಪ್ರಾಯಗಳು ದೂರವಾಗಿ ಅವರು ಒಪ್ಪಂದಕ್ಕೆ ಮುಂದಾಗಿ ತಮ್ಮ ಸರ್ವಸಾಮರ್ಥ್ಯವನ್ನು ಒಟ್ಟುಗೂಡಿಸಿ ಪಾಂಡ್ಯರ ವಿರುದ್ಧ ಕಾದಾಡಿದರು.[13]

**ಮೂರನೆಯ ನರಸಿಂಹ (ಕ್ರಿ.ಶ. 1254-1291)**

ಕ್ರಿ.ಶ. 1254 ಸಿಂಹಾಸನವನ್ನೇರಿದ ಮೂರನೇ ನರಸಿಂಹ ಕಾಲದಲ್ಲಿ ಹೊಯ್ಸಳ ಸಾಮ್ರಾಜ್ಯ ವಿಭಜನೆಯಾಯಿತು. ಆಗ ಸಾಮ್ರಾಜ್ಯವು ಹಿಡಿತಕ್ಕೆ ಬಾರದಷ್ಟು ದೊಡ್ಡದಾಗಿತ್ತು. ಕೇವಲ ಆಡಳಿತದ ಸೌಕರ್ಯಕ್ಕಾಗಿಯೇ ರಾಜ್ಯ ವಿಭಜನೆಯಾಯಿತು. ಪಿತ್ರಾರ್ಜಿತ ರಾಜ್ಯದ ಬಹುಭಾಗ ಎಂದರೆ ದೋರಸಮುದ್ರವನ್ನು ರಾಜಧಾನಿಯನ್ನಾಗಿ ಉಳ್ಳ ಅದರ ಸುತ್ತಮುತ್ತಲ ಪ್ರಾಂತ್ಯವು ನರಸಿಂಹನ ಭಾಗಕ್ಕೇ ಸೇರಿತು. ಸೋಮೇಶ್ವರನ ಎರಡನೇ ಮಗನಾದ ರಾಮನಾಥನ ವಶಕ್ಕೆ ತಮಿಳು ಪ್ರಾಂತ್ಯದ ಸೇಲಂ ಜಿಲ್ಲೆ. ಉತ್ತರ ಅರ್ಕಾಟ್ ಮತ್ತು ಚಿತ್ತೂರ್ ಜಿಲ್ಲೆಗಳ ಪಶ್ಚಿಮಾರ್ಧ ಮೈಸೂರು ದೇಶದ ಪೂರ್ವಭಾಗ ಇವೆಲ್ಲವು ಸೇರಿದವು ಕಣ್ಣಾನೂರು ಅವನ ರಾಜಧಾನಿಯಾಯಿತು. ನರಸಿಂಹನು ತನ್ನ ಸಾಮರ್ಥ್ಯದಿಂದ ಪಿತ್ರಾರ್ಜಿತ ರಾಜ್ಯವನ್ನು ಆಳುತ್ತಾ ದಂಡೆತ್ತಿ ಬಂದ ಯಾದವರನ್ನು ಹಿಮ್ಮೆಟ್ಟಿದನು.[14] ಕ್ರಿ.ಶ. 1279 ರಲ್ಲಿ ಚೋಳ ರಾಜೇಂದ್ರ ಚೋಳನ ಅವಸಾನದಿಂದ ಚೋಳ ಸಾಮ್ರಾಜ್ಯದ ಪತನ ಪ್ರಾರಂಭವಾಯಿತು. ಪಾಂಡ್ಯ ರಾಜನಾದ ಮಾರವರ್ಮನ್ ಕುಲಶೇಕರನು ಹೊಯ್ಸಳ ಸಮ್ರಾಜ್ಯಕ್ಕೆ ಸೇರಿ ರಾಮನಾಥನ ಆಡಳಿತಕ್ಕೆ ಸೇರಿದ್ದ ತಮಿಳು ಜಿಲ್ಲೆಗಳು ಮತ್ತು ಚೋಳ ದೇಶಗಳ ಮೇಲೆ ಪ್ರಭುತ್ವನ್ನು ಗಳಿಸಿದುದರಿಂದ ಹೊಯ್ಸಳರಿಗೆ ದಕ್ಷಿಣದಲ್ಲಿ ಭಾರಿಪೆಟ್ಟು ಬಿದ್ದಂತಾಯಿತು.[15]

**ಮೂರನೇ ಬಲ್ಲಾಳ (ಕ್ರಿ.ಶ. 1292-1342)**

ಮೂರನೇ ಬಲ್ಲಾಳನ ಆಳ್ವಿಕೆಯ ಕಾಲವು ದಕ್ಷಿಣ ಭಾರತದಲ್ಲಿ ಪ್ರಕ್ಷುಬ್ಧತೆಯ ಕಾಲವಾಗಿತ್ತು. ದಕ್ಷಿಣ ಭಾರತದ ಇತಿಹಾಸದಲ್ಲಿ ಪ್ರಥಮವಾಗಿ ಕ್ರಿ.ಶ. 1310 ರಲ್ಲಿ ಮುಸ್ಲಿಮರು ದಂಡೆಯಾತ್ರೆ ನಡೆಸಿ ದಾಳಿ ಮಾಡಿದರು. ಅಂತಃ ಕಲಹಗಳಿಂದ ಕೂಡಿದ್ದ ರಾಜ್ಯಗಳಿಗೆ ಮುಸ್ಲಿಮರ ಘೋರ ದಾಳಿಯನ್ನು ಎದುರಿಸಿ ರಕ್ಷಣೆ ಮಾಡಿಕೊಳ್ಳುವ ಸಿದ್ದತೆಯೇ ಇರಲಿಲ್ಲ. ಈ ರಾಜ್ಯಗಳಲ್ಲಿ

ಸೇವುಣರೆಂದು ಹೆಸರು ಪಡೆದ ದೇವಗಿರಿಯ ಯಾದವರು, ವಾರಂಗಲ್ಲಿನ ಕಾಕತೀಯರು, ಹೊಯ್ಸಳರು ಮತ್ತು ಪಾಂಡ್ಯರು ಮುಖ್ಯರಾದವರು. ಒಬ್ಬೊಬ್ಬರು ಪರಮಾಧಿಕಾರಕ್ಕಾಗಿ ಹೋರಾಡುತ್ತಿದ್ದರು. ಎಲ್ಲರೂ ಒಂದಾಗಿ ಹಿಂದೂ ಧರ್ಮವನ್ನು ರಕ್ಷಿಸಬೇಕೆಂಬ ಅವಶ್ಯಕತೆ ಇದರ ತರುವಾಯವೇ ಅವರಿಗೆ ಅರಿವಾದದ್ದು, ಮೂರನೆಯ ಬಲ್ಲಾಳನು ಮುಸ್ಲಿಮರ ದಾಳಿಯನ್ನು ಎದುರಿಸುವುದಕ್ಕಾಗಿ ಒಂದು ರೀತಿಯ ಸಂಘಟಿತ ರೂಪದ ಹೋರಾಟಕ್ಕೆ ಪ್ರಯತ್ನಿಸಿದರು. ಅನಾನುಕೂಲಗಳಿಂದ ಅವನ ಮಹಾಯೋಜನೆ ವಿಫಲವಾಯಿತು.

## ಅಧ್ಯಾಯ 2

### 2.1 ಹೊಯ್ಸಳರ ಇತಿಹಾಸಕ್ಕೆ ಸಂಬಂಧಿಸಿದ ಗ್ರಂಥಗಳ ಸಮೀಕ್ಷೆ

ಹೊಯ್ಸಳರ ಇತಿಹಾಸಕ್ಕೆ ಸಂಬಂಧಿಸಿದಂತೆ ಕೆಲವು ಗ್ರಂಥಗಳು ಮಾತ್ರ ಪ್ರಕಟವಾಗಿವೆ. ವಿಲಿಯಂ ಕೊಹಿಲೊ ಅವರು ಮೊಟ್ಟ ಮೊದಲನೆಯದಾಗಿ ಹೊಯ್ಸಳ ಸಂತತಿಯ ಸಾಧನೆಗಳನ್ನು ಕುರಿತಂತೆ 1950 ರಲ್ಲಿ Hoysala Vamsa ಎಂಬ ಗ್ರಂಥವನ್ನು ಪ್ರಕಟಿಸಿದರು ಅದೇ ವರ್ಷ ಕೆ.ಆರ್.ವೆಂಕಟರಾಮಯ್ಯ ಎಂಬುವವರು Hoysalas in the Tamil Country ಎಂಬ ಕಿರುಹೊತ್ತಿಗೆಯನ್ನು ಹೊರತಂದರು. 1957ರಲ್ಲಿ ಜೆ.ಡಂಕನ್ ಎಂ.ಡೆರ್ರೆಟ್ ಅವರು ರಚಿಸಿದ The Hoysalas-A Medieval Royal Family ಎಂಬ ಗ್ರಂಥವು ಪ್ರಕಟವಾಯಿತು. ಈ ಗ್ರಂಥವು ಹೊಯ್ಸಳರ ರಾಜಕೀಯ ಇತಿಹಾಸಕ್ಕೆ ಸಂಬಂಧಸಿದಂತೆ ಸಾಕಷ್ಟು ಮಾಹಿತಿಯನ್ನು ಒದಗಿಸುತ್ತದೆ. 1972 ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದಲ್ಲಿ ಹೊಯ್ಸಳರಿಗೆ ಸಂಬಂಧಿಸಿದ ಒಂದು ವಿಚಾರ ಸಂಕಿರಣ ನಡೆಯಿತು. ಈ ಸಂಕಿರಣದ ಸಂಶೋಧನ ಲೇಖನಗಳನ್ನು The Hoysalas Dynasty ಎಂಬ ಶೀರ್ಷಿಕೆಯ ಅಡಿಯಲ್ಲಿ ಪ್ರಕಟಿಸಲಾಗಿದೆ. ಇದರ ಸಂಪಾದಕರು ಪ್ರೊ.ಬಿ.ಷೇಕ್‌ಅಲಿ, ಹೊಯ್ಸಳರ ಆಡಳಿತಕ್ಕೆ ಸಂಬಂಧಿಸಿದಂತೆ ಪ್ರೊ.ಕೆ.ಎಸ್.ಶಿವಣ್ಣ A Critique of Hoysala Polity ಎಂಬ ಗ್ರಂಥವನ್ನು 1989ರಲ್ಲಿ ರಚಿಸಿದ್ದಾರೆ. ಹೊಯ್ಸಳರ ಕಲೆಯ ಇತಿಹಾಸಕ್ಕೆ ಸಂಬಂಧಿಸಿದಂತೆ ಪ್ರೊ.ಎಸ್.ಶೆಟ್ಟರ್ ಅವರು ರಚಿಸಿರುವ Hoysala Temples ಎಂಬ ಎರಡು ಸಂಪುಟಗಳು ಉಪಯುಕ್ತ ಗ್ರಂಥಗಳಾಗಿವೆ. ಇತ್ತೀಚೆಗೆ 1997 ರಲ್ಲಿ ಪ್ರಕಟವಾಗಿರುವ A Complete Guide to Hoysala Temples ಹೊಯ್ಸಳರ ಎಲ್ಲ ದೇವಾಲಯಗಳ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ಈ ಗ್ರಂಥದ ಕರ್ತೃ ಗೆರಾರ್ಡ್ ಪೋಕಮ (Gerard Foekama). ಹೊಯ್ಸಳರ ಇತಿಹಾಸಕ್ಕೆ ಸಂಬಂಧಿಸಿದಂತೆ ಇನ್ನು ಅನೇಕ ಸಂಶೋಧನ ಲೇಖನ ಮತ್ತು ಪ್ರೌಢ ಪ್ರಬಂಧಗಳಿವೆ. ಆದರೆ ಅವುಗಳು ಪ್ರಕಟವಾಗಿಲ್ಲ. ಆದರೆ ಹೊಯ್ಸಳರ ಕಾಲದ ನಗರೀಕರಣ ಬಗ್ಗೆ ಯಾವುದೇ ಸಂಶೋಧನೆ ನಡೆದಿಲ್ಲ.

### 2.2 ಅಧ್ಯಯನ ವಿಷಯದ ಮಹತ್ವ ಮತ್ತು ವ್ಯಾಪ್ತಿ

ಪಟ್ಟಣಗಳು ಮಾನವನ ಬದುಕಿನಲ್ಲಿ ಮಹತ್ವದ ಪಾತ್ರವನ್ನು ವಹಿಸಿವೆ. ಒಂದು ನಾಡಿನ ಚರಿತ್ರೆ ಎಂದರೆ ಆ ಭೂಪ್ರದೇಶಗಳನ್ನು ಆಳ್ವಿಕೆ ನಡೆಸಿ ಮರೆಯಾದ ರಾಜ ಮಹಾರಾಜರ ಕತೆಯಷ್ಟೇ

ಅಲ್ಲ. ಆ ನಾಡಿನ ಜನರ ಸಮಷ್ಟಿಯ ಚರಿತ್ರೆ. ಆ ಜನಾಂಗದ ಒಟ್ಟು ಜೀವನವನ್ನು ಕುರಿತ ಇತಿಹಾಸವಾಗಿದೆ. ಅದು ಒಂದು ನೆಲೆಯ ಜನಪದರ ಆಶೋತ್ತರಗಳು, ನಂಬುಗೆಗಳು ಜೀವನ ಸಿದ್ಧಾಂತಗಳು, ಬದುಕಿನ ಮೌಲ್ಯಗಳು ಮೊದಲಾದವನ್ನು ಪರಿಚಯಿಸುತ್ತದೆ. ಒಂದು ಜನಾಂಗದ ಸಾಂಸ್ಕೃತಿಕ ಅಭಿವೃದ್ಧಿಗೆ ಪಟ್ಟಣವೊಂದು ಮೂಲ ನೆಲೆಯಾಗಲು ಸಾಧ್ಯ. ಕಾಶಿ, ರೋಮ್, ಮೆಕ್ಕಾ ನಗರಗಳು ಆಯಾ ಜನಾಂಗದ ಪ್ರತಿನಿಧಿಗಳಾಗಿ ಕಾರ್ಯ ನಿರ್ವಹಿಸಿವೆ. ಹಾಗೆಯೇ ಕರ್ನಾಟಕದ ಸಂಸ್ಕೃತಿಯ ಹಿರಿಮೆಯನ್ನು ಮೆರೆದ ಪ್ರಮುಖ ಪಟ್ಟಣಗಳಲ್ಲಿ ಸೋಮನಾಥಪುರದ ಅಧ್ಯಯನವು ಇಡಿಯಾಗಿ ನಾಡಿನ ಚರಿತ್ರೆಯನ್ನು ರೂಪಿಸುತ್ತವೆ.

ಒಂದು ದೇಶದ ಇತಿಹಾಸ ರೂಪುಗೊಳ್ಳುವಲ್ಲಿ ಪಟ್ಟಣಗಳ ಪಾತ್ರ ಹಿರಿದಾದುದು. ದೇಶವೆಂಬ ದೇಹಕ್ಕೆ ಪಟ್ಟಣಗಳೇ ಹೃದಯ, ಅದರ ಹೃದಯ ಬಡಿತವೇ ದೇಶದ ನಾಡಿ, ಆದ್ದರಿಂದ ರಾಜಧಾನಿಗಳಾಗಿ ಮೆರೆದ ಪಟ್ಟಣಗಳ ಐತಿಹಾಸಿಕ ಅಧ್ಯಯನವು ಆ ನಾಡಿನ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಜೀವನವನ್ನು ತಿಳಿದುಕೊಳ್ಳಲು ಹೆಚ್ಚು ಸಹಾಯಕಾರಿಯಾಗಿದೆ. ಇಂಥ ಪಟ್ಟಣಗಳು ತಲೆಯೆತ್ತಿದ ಬಗೆ ಮತ್ತು ರಾಜಕೀಯ ಏರಿಳಿತಗಳನ್ನು ಅನುಭವಿಸಿದ ಸ್ಥಿತಿ. ತನ್ನ ಸಾಂಸ್ಕೃತಿಕ ಕ್ಷಿತಿಜವನ್ನು ಹಿಗ್ಗಿಸಿದ ರೀತಿ ಸಾಮಾಜಿಕ ಜೀವನವನ್ನು ವಿಕಸನಗೊಳಿಸಿದ ಪರಿ. ಧಾರ್ಮಿಕ ಬೆಳಕು ಪ್ರಸರಿಸಿದ ವಿಧಾನ ಮೊದಲಾದವುಗಳ ಅಧ್ಯಯನವು ಸ್ವಾರಸ್ಯಪೂರ್ಣ ಹಾಗೂ ಅರ್ಥಪೂರ್ಣವಾಗಿದೆ.

ಸೋಮನಾಥಪುರ ಕ್ರಿ.ಶ. 11 ಮತ್ತು 12ನೇ ಶತಮಾನಗಳಲ್ಲಿ ವೈಭವದ ಜೌನ್ನತ್ಯವನ್ನು ಅನುಭವಿಸಿ ಹೊಯ್ಸಳರ ಕಾಲದಲ್ಲಿ ಈ ಪಟ್ಟಣಗಳು ಸಾಂಸ್ಕೃತಿಕ ನೆಲೆಯಾಗಿದ್ದವು. ಈ ಪಟ್ಟಣ ಹೊಯ್ಸಳ ಸಾಮ್ರಾಜ್ಯದ ರಾಜಧಾನಿಯಾಗಿ ರಾಜರ ಮತ್ತು ಮಂತ್ರಿ ವರ್ಗದವರ ರಾಜಕೀಯ ಶಕ್ತಿಯಾಗಿ ಯೋಧರ ವೀರಶ್ರೀಯ ಸೆಲೆಯಾಗಿ ಹಾಗೂ ವ್ಯಾಪಾರಿ ಸಂಸ್ಥೆಗಳ ಪ್ರೇರಣೆಯಾಗಿ ಭಕ್ತರ ಧಾರ್ಮಿಕ ಕೇಂದ್ರವಾಗಿ ಮತ್ತು ಜನರ ಜೀವನದ ಕನ್ನಡಿಯಾಗಿ ಕರ್ನಾಟಕದ ಸಾಂಸ್ಕೃತಿಕ ಕೇಂದ್ರಗಳೆನಿಸಿದ್ದವು. ಇಂಥ ಪಟ್ಟಣವು ಸಾಮ್ರಾಜ್ಯದ ಜೀವನಾಡಿಯಾಗಿದೆ. ಈ ಎಲ್ಲ ಕಾರಣಗಳಿಂದ ನಗರ ಕೇಂದ್ರಗಳು ಮತ್ತು ನಗರೀಕರಣದ ಬಗ್ಗೆ ಅಧ್ಯಯನ ನಡೆಸುವುದು ಬಹಳ ಮುಖ್ಯವಾದ ವಿಷಯವಾಗಿದೆ.

## 2.3 ಆಧಾರಗಳು

ಹೊಯ್ಸಳರ ಕಾಲದ ನಗರೀಕರಣದ ಇತಿಹಾಸವನ್ನು ರಚಿಸಬೇಕಾದರೆ ಪ್ರಮುಖವಾಗಿ ಶಾನಸಗಳನ್ನೇ ಅವಲಂಬಿಸಬೇಕಾಗಿದೆ. ಶಾಸನಗಳ ಜೊತೆಗೆ ಆ ಕಾಲದಲ್ಲಿ ನಿರ್ಮಿಸಲ್ಪಟ್ಟ ದೇವಾಲಯಗಳು ಆ ಕಾಲದ ಧಾರ್ಮಿಕ, ಸಾಮಾಜಿಕ, ಆರ್ಥಿಕ ವಿಷಯಗಳ ಬಗ್ಗೆ ಅಧ್ಯಯನ ಮಾಡಲು ಅನುಕೂಲವಾಗಿದೆ. ಆದರೆ ಹೊಯ್ಸಳರ ಕಾಲದಲ್ಲಿ ರಚಿತವಾದ ಗ್ರಂಥಗಳು ನಗರೀಕರಣದ ಬಗ್ಗೆ ಹೆಚ್ಚು ಮಾಹಿತಿಯನ್ನು ನೀಡುವುದಿಲ್ಲ. ಜೈನ ಕವಿಯಾದ ನೇಮಿಚಂದ್ರನು ಲೀಲಾವತಿ ಮತ್ತು ನೇಮಿನಾಥ ಪುರಾಣ ಎಂಬ ಎರಡು ಕೃತಿಗಳನ್ನು ರಚಿಸಿದ್ದಾನೆ. ನೇಮಿಚಂದ್ರನು ಅಂದಿನ ವ್ಯಾಪಾರದ ಬಗ್ಗೆ ತಿಳಿಸುತ್ತಾ ಚೀನಾ ದೇಶದೊಡನೆ ವ್ಯಾಪಾರ ಸಂಬಂಧವಿತ್ತೆಂದು ಹಾಗೂ ಪಟ್ಟಣ, ಗ್ರಾಮ, ನಗರ, ಪುರ ಮುಂತಾದ ಶಬ್ಧಗಳ ಬಳಕೆ ಮತ್ತು ವಿವಿಧ ವಿಸ್ತೀರ್ಣದ ಊರುಗಳನ್ನು ತಿಳಿಸುತ್ತಾನೆ. ಸಂಸ್ಕೃತ ಗ್ರಂಥವಾದ ರುಕ್ಮಿಣೀ ಕಲ್ಯಾಣದಲ್ಲಿ ರಾಜಧಾನಿ ದೋರಸಮುದ್ರವನ್ನು ಕೃಷ್ಣನ ರಾಜಧಾನಿಯಾಗಿದ್ದ ದ್ವಾರಕೆಗೆ ಹೋಲಿಸಲಾಗಿದೆ.

ಹೊಯ್ಸಳರ ಕಾಲದ ನಗರೀಕರಣದ ಬಗ್ಗೆ ಸಾಹಿತ್ಯಾಧಾರಗಳು ಹೆಚ್ಚು ಬೆಳಕನ್ನು ಚೆಲ್ಲದೇ ಇರುವುದರಿಂದ ಅವುಗಳಿಂದ ಹೆಚ್ಚಿನ ಮಾಹಿತಿ ದೊರಕುವುದಿಲ್ಲ. ಆದ್ದರಿಂದ ನಾವು ಪ್ರಾಕ್ತನಾಧಾರ ಗಳನ್ನೇ ವಿಶೇಷವಾಗಿ ಅವಲಂಬಿಸಬೇಕಾಗಿದೆ. ಪ್ರಾಕ್ತನಾಧಾರಗಳಲ್ಲೂ ಮುಖ್ಯವಾಗಿ ಶಾಸನಗಳೇ ಪ್ರಮುಖ ಆಧಾರಗಳಾಗಿವೆ. ಅನೇಕ ಶಾಸನಗಳು ಹೊಯ್ಸಳರ ನಗರೀಕರಣದ ಬಗ್ಗೆ ವಿವರ ನೀಡುತ್ತವೆ. ಕೆಲವು ಪ್ರಮುಖ ಶಾಸನಗಳನ್ನು ಇಲ್ಲಿ ವಿವರಿಸಲಾಗಿದೆ.

ಕ್ರಿ.ಶ. 1260 ರ ಅರ್ಜುನವಾಡ (ಬೆಳಗಾಂವ್) ಶಾಸನವೊಂದು ನಾಲ್ಕು ಪಟ್ಟಣಗಳು ಎಂದು ಉಲ್ಲೇಖಿಸಿರುವುದಲ್ಲದೆ ಸಂತೆಗಳ ಬಗ್ಗೆಯೂ ತಿಳಿಸುತ್ತದೆ. ಕ್ರಿ.ಶ. 1090 ರ ಬೇಲೂರು ಶಾಸನ ವಿನಯಾದಿತ್ಯನು ತನ್ನ ರಾಜಧಾನಿಯನ್ನು ಸೊಸೆವೂರಿನಿಂದ ಬೇಲೂರಿಗೆ ವರ್ಗಾಯಿಸಿದ್ದನ್ನು ತಿಳಿಸುತ್ತದೆ. ದೋರಸಮುದ್ರದ ಗುಮ್ಮಟೀರ ತಿಟ್ಟಿನಲ್ಲಿರುವ ಶಾಸನವು ಮೂರು ಪ್ರಮುಖ ನೆಲೆಗಳಾದ ದೋರಸಮುದ್ರ, ಬೇಲೂರು ಮತ್ತು ವಿಷ್ಣುಸಮುದ್ರಗಳ ಬಗ್ಗೆ ತಿಳಿಸುತ್ತದೆ.[17] ಬೇಲೂರಿನ ಶಾಸನವು ರಾಜ್ಯದ ಎಲ್ಲ ವ್ಯಾಪಾರಿಗಳ ಸಾರ್ವಭೌಮ ಕೇಂದ್ರವಾಗಿ ದೋರಮುದ್ರವು ಪರಿಣಮಿಸಿತ್ತು ಎಂದು ತಿಳಿಸುತ್ತದೆ.[18] ದೋರಸಮುದ್ರದ ಹಳೇಕೋಟೆಯ ಶಾಸನವು ಚಿಪ್ಪಿಗ ಗೊತ್ತುವಳಿಗಳು ಸುಮಾರು ಐದು ಪಟ್ಟಣಗಳ ಸಂಘವನ್ನು ರಚಿಸಿಕೊಂಡಿದ್ದರೆಂದು ತಿಳಿಉತ್ತದೆ.

ಬಸ್ತಿ ಹಳ್ಳಿ ಪಾರ್ಶ್ವನಾಥ ಬಸದಿಯ ಶಾಸನವು ತಾಂಬೂಲಿಗ ಸಾಸಿರ್ವರ ಸಂಘವನ್ನು ಮತ್ತು ಅದು ದಾನ ನೀಡಿದ ವಿವರಗಳನ್ನು ತಿಳಿಸುತ್ತದೆ. ಕ್ರಿ.ಶ.1218 ರ ಒಂದು ಶಾಸನದ ಪ್ರಕಾರ ಹೊಯ್ಸಳರ ಎರಡನೇ ಬಲ್ಲಾಳನ ರಾಣಿಯಾದ ಅಭಿನವ ಕೇತಲ ದೇವಿಯ ಆಜ್ಞೆಯ ಮೇರೆಗೆ ಕುಂದವಾಡದ 'ಗೌಡು'ಗಳು 'ಸೆಟ್ಟಿ'ಗಳು ಸೇರಿ ಊರಿನಲ್ಲಿ ಪ್ರತಿ ಬುಧವಾರದಂದು ಸಂತೆ ನಡೆಯುವಂತೆ ಏರ್ಪಾಡು ಮಾಡಿದ್ದರು. ಮತ್ತೊಂದು ಶಾಸನದ ಪ್ರಕಾರ ಮೂರನೇ ನರಸಿಂಹ ಆಳ್ವಿಕೆಯ ಕಾಲದಲ್ಲಿ ಮೂಗೂರು (ತಿ.ನರಸೀಪುರ ತಾ. ಮೈಸೂರು ಜಿಲ್ಲೆ) ಗ್ರಾಮದ ಪ್ರಭುಗಳು ಮತ್ತು ಗೌಡರು ಸೇರಿ ಆ ಸ್ಥಳದಲ್ಲಿ ಒಂದು ಸಂತೆಯನ್ನು ನಡೆಸುವಂತಾಗಿ ಆ ಗ್ರಾಮವನ್ನು ಪಟ್ಟಣವನ್ನಾಗಿ ಪರಿವರ್ತಿಸಬೇಕೆಂದು ತೀರ್ಮಾನಿಸುತ್ತಾರೆ. ಅಲ್ಲದೆ ಅವರು ಆ ಹೊಸ ಪಟ್ಟಣಕ್ಕೆ ಒಂದು ಸನ್ನದನ್ನು ಕೊಟ್ಟರೆಂದು ತಿಳಿದು ಬರುತ್ತದೆ.

ದೋರಸಮುದ್ರದ ಬೆಣ್ಣೆಗುಡ್ಡ ಶಾಸನವು ಎಣ್ಣೆ ಉತ್ಪಾದಕರಾದ ತೆಲ್ಲಿಗರನ್ನು ಮತ್ತು ಎಣ್ಣೆಗಾಣಗಳನ್ನು ದಾನ ಮಾಡಿದ ವಿವರಗಳನ್ನು ತಿಳಿಸುತ್ತದೆ.[19] ಪಾರ್ಶ್ವನಾಥ ಬಸದಿಯ ಶಾಸನಗಳು ಜೈನ ಮತ್ತು ಶೈವ ಧರ್ಮಗಳಿಗೆ ಸೇರಿದ ವ್ಯಾಪಾರಿಗಳಾದ ಶೆಟ್ಟಿ ಮತ್ತು ಬಣಂಜಿಗರ ಬಗ್ಗೆ ತಿಳಿಸುತ್ತದೆ. ನಗರೇಶ್ವರ ದೇವಾಲಯದ ಶಾಸನ ತಯಾರಿಸಿದ ಉಪ್ಪನ್ನು ಮಾರುವ ಮಳಿಗೆಗಳ ಬಗ್ಗೆ ತಿಳಿಸುತ್ತದೆ.[20] ಬೆಣ್ಣೆಗುಡ್ಡದ ಶಾಸನ ದೋರಸಮುದ್ರವು ಬಟ್ಟೆ ತಯಾರಿಕೆಯ ಕೈಗಾರಿಕೆಗೆ ಪ್ರಸಿದ್ಧವಾಗಿತೆಂದು ಇದರ ಜೊತೆಗೆ ಅರಸೀಕೆರೆ ಕಲ್ಲಂಗೆರೆಗಳು ಈ ಕೈಗಾರಿಕೆಗೆ ಪ್ರಸಿದ್ಧವಾಗಿದೆಯೆಂದು ಮತ್ತು ಹತ್ತಿಯ ವರ್ತಕರ, ಚಿಪ್ಪಿಗರ ಬಗ್ಗೆ ತಿಳಿಸುತ್ತದೆ.[21] ಗುಮ್ಮತೀರ ತಿಟ್ಟವಿನಲ್ಲಿರುವ ಶಾಸನವು ನಾನಾ ದೇಶಿ ವರ್ತಕರು ಬೇರೆ ಬೇರೆ ಸ್ಥಳಗಳಿಂದ ಸರಕುಗಳನ್ನು ಹೇರಿಕೊಂಡು ಬಂದರೆಂದು ಆಗ ಹೊಯ್ಸಳರು ಚೋಳರ ಮತ್ತು ಪಾಂಡ್ಯರ ಪ್ರದೇಶಗಳನ್ನು ಗೆದ್ದುಕೊಂಡಿದ್ದ ಪರಿಣಾಮವಾಗಿ ಉಭಯ ನಾನಾ ದೇಶಿ ವರ್ತಕರು ರಾಜಧಾನಿಗೆ ವ್ಯಾಪಾರಕ್ಕಾಗಿ ಬಂದು ಹೋಗುತ್ತಿದ್ದರೆಂದು ತಿಳಿಸುತ್ತದೆ.[22]

ಕ್ರಿ.ಶ. 1062 ರ ಹಳೇಬೀಡಿನ ಶಾಸನವು ವಿನಯಾದಿತ್ಯನು ದೋರಸಮುದ್ರದ ಕೆರೆಗೆ ಜಲದ್ವಾರಗಳನ್ನು ನಿರ್ಮಿಸಿದುದರ ಬಗ್ಗೆ ತಿಳಿಸುತ್ತದೆ. ಶ್ರವಣ ಬೆಳಗೊಳದ ಶಾಸನವು ವಿನಯಾದಿತ್ಯನು ತನ್ನ ರಾಜಧಾನಿಯಾಗಿದ್ದ ಬೇಲೂರಿನ ಜೊತೆಗೆ ದೋರಸಮುದ್ರದಲ್ಲಿ ಹೊಸ ಕೆರೆಗಳನ್ನು ನಿರ್ಮಿಸಿದ್ದಲ್ಲದೆ ಅದಕ್ಕೆ ನಗರದ ರೂಪವನ್ನು ನೀಡಿದ್ದಾಗಿ ತಿಳಿಸುತ್ತದೆ.

ಗುಮ್ಮತೀರ ತಿಟ್ಟು ಮತ್ತು ಬಸ್ತಿಹಳ್ಳಿಯ ಶಾಸನಗಳು ದೋರಸಮುದ್ರದಲ್ಲಿ ವ್ಯಾಪಾರದ ಸರಕುಗಳನ್ನು ಚಕ್ಕಡಿ, ಎತ್ತು, ಎತ್ತಿನ ಬಂಡಿ, ಕತ್ತೆ, ಕುದುರೆ ಮತ್ತು ಆನೆಗಳ ಮೂಲಕ ಹೇರಿಕೊಂಡು ಗುಂಪುಗುಂಪಾಗಿ ಸಂಚರಿಸುತ್ತಿದ್ದರೆಂದು ತಿಳಿಸುತ್ತದೆ.[23] ಕ್ರಿ.ಶ. 1142ರ ಶಾಸನದ ಪ್ರಕಾರ ಹಳೇಬೀಡಿನಲ್ಲಿ ಇಬ್ಬರು ಪಟ್ಟಣ ಸ್ವಾಮಿಗಳಿದ್ದರು ಎಂದು ತಿಳಿದು ಬರುತ್ತದೆ. ಅವರು ಹೊಯ್ಸಳ ಶೆಟ್ಟಿ ಮತ್ತು ಗುಮಿ ಶೆಟ್ಟಿಗಳಾಗಿದ್ದರು.[24] ಕ್ರಿ.ಶ. 1125ರ ಶಾಸನದ ಪ್ರಕಾರ ಪಟ್ಟಣಸ್ವಾಮಿ ಪೊಯ್ಸಳ ಶೆಟ್ಟಿಯನ್ನು ನೋಳಬಿ ಶೆಟ್ಟಿಯಂತಲು ಸಹ ಕರೆಯಲಾಗುತ್ತಿತ್ತು. ಇವನು ರಾಜ ವಿಷ್ಣುವರ್ಧನನ ಅಧೀನದಲ್ಲಿ ವಾಸಿಸುತ್ತಿದ್ದನು.[25] ಕ್ರಿ.ಶ. 1178ರ ಮತ್ತೊಂದು ಶಾಸನದ ಪ್ರಕಾರ ಪಟ್ಟಣಸ್ವಾಮಿ ಸೋವಿಶೆಟ್ಟಿಯು ರಾಜ ಸಾಮಂತ ನರಸಿಂಗರಾಯ ನಾಯಕನ ಕೈ ಕೆಳಗೆ ಕೆಲಸ ಮಾಡುತ್ತಿದ್ದನೆಂದು ತಿಳಿದು ಬರುತ್ತದೆ.[26] ಶ್ರವಣ ಬೆಳಗೊಳದ ಮತ್ತೊಂದು ಶಾಸನದ ಪ್ರಕಾರ ನಾಗದೇವನು ರಾಜ ಎರಡನೇ ವೀರಬಲ್ಲಾಳನ ಆಳ್ವಿಕೆಯಲ್ಲಿ ಪಟ್ಟಣಸ್ವಾಮಿಯಾಗಿದ್ದನು. ಕ್ರಿ.ಸ. 1328 ರ ಶಾಸನದಿಂದ ಮದ್ದೂರು ಗ್ರಾಮ (ಯಳಂದೂರು ತಾಲ್ಲೂಕು ಚಾಮರಾಜನಗರ ಜಿಲ್ಲೆ) ಪಟ್ಟಣವನ್ನು ಕಟ್ಟುವುದಕ್ಕೋಸ್ಕರ ಉಪೇಂದ್ರಪುರ ಮಹಾಜನರಿಂದ ಆರು ಬಾಡಿಗೆ ರಹಿತ ಮನೆಗಳನ್ನು ಉಚಿತವಾಗಿ ಪಟ್ಟಣಸ್ವಾಮಿಗೆ ಕೊಡಲಾಗಿತ್ತೆಂದು ತಿಳಿದು ಬರುತ್ತದೆ.[27] ಕ್ರಿ.ಶ. 1278ರ ನಂಜನಗೂಡಿನ ಉಪ್ಪಿನ ಹಳ್ಳಿ ಶಾಸನದಿಂದ ಸಂಕಶೆಟ್ಟಿಯೆಂಬ ಪಟ್ಟಣಸ್ವಾಮಿಯು ಮನಾಲಿ ಎಂಬಲ್ಲಿ ಸಂತೆಗಳನ್ನು ಕಟ್ಟುತ್ತಿದ್ದನೆಂದು ತಿಳಿದು ಬರುತ್ತದೆ. ಕ್ರಿ.ಶ.1332 ರ ಬೆಂಗಳೂರು ತಾಲ್ಲೂಕಿನ ಶಾಸನದ ಪ್ರಕಾರ ಚಿಕ್ಕಹುಂಡಿ[28] ಎಂಬಲ್ಲಿ ಮುಕ್ತಿಶೆಟ್ಟಿ ಎಂಬ ಪಟ್ಟಣ ಸ್ವಾಮಿಯಿಂದ ಸಂತೆ ನಿಯೋಜಿಸಲ್ಪಡುತ್ತಿತೆಂದು ತಿಳಿದು ಬರುತ್ತದೆ.

ಕ್ರಿ.ಶ. 1178ರ ನಂಜನಗೂಡಿನ ಒಂದು ಶಾಸನದಿಂದ ಪಟ್ಟಣಸ್ವಾಮಿಯಾದ ಸೋಮಿಶೆಟ್ಟಿ ಮೂರು ಕೆರೆಗಳನ್ನು ಕಟ್ಟಿಸಿದನೆಂದು ತಿಳಿದು ಬರುತ್ತದೆ. ಮೊಸಳೆಯ ವಡ್ಡ ವ್ಯವಹಾರಿ ಬಸವಶೆಟ್ಟಿ ಚತುರ್ವಿಂಶತಿ. ತೀರ್ಥಂಕರರ ಪ್ರತಿಮೆಗಳನ್ನು ಮಾಡಿಸಿದಾಗ (ಸುಮಾರು ಕ್ರಿ.ಶ. 1185) ಮೊಸಳೆಯ ವರ್ತಕರೆಲ್ಲ ಸೇರಿ ಪ್ರಜಾದತ್ತಿಗಳನ್ನು ಕೊಟ್ಟರು.

## 2.4 ಸಂಶೋಧನಾ ವಿಧಾನ

ಪ್ರಸ್ತುತ ಸಂಶೋಧನೆಯಲ್ಲಿ ಸಂಶೋಧನಾ ಮಾರ್ಗದ ತತ್ವಗಳನ್ನು ಅಳವಡಿಸಿ ಕೊಳ್ಳಲಾಗಿದೆ. ಇತಿಹಾಸ ಸಂಶೋಧನೆಯ ಮಾರ್ಗದರ್ಶನ ಮಾಡುವುದಕ್ಕಾಗಿ ಪ್ರತ್ಯೇಕವಾದ ಒಂದು

ಶಾಸ್ತ್ರವೇ ಬೆಳೆದು ಬಂದಿದೆ. ಅದನ್ನು ಇತಿಹಾಸ ಸಂಶೋಧನಾ ಮಾರ್ಗ ಎಂದು ಕರೆಯುತ್ತಾರೆ. ಈ ಮಾರ್ಗದ ಸೂತ್ರಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಅಳವಡಿಸಿ ಕೊಳ್ಳಲಾಗಿದೆ. ವಿಷಯ ಸಂಗ್ರಹಣೆ ಬಾಹ್ಯ ಮತ್ತು ಆಂತರಿಕ ವಿಮರ್ಶೆಯ ಸೂತ್ರಗಳು ವಿಶ್ಲೇಷಣಾ ಕ್ರಮಗಳು ಮತ್ತು ನಿರೂಪಣಾ ತತ್ವಗಳನ್ನು ಸಂಶೋಧನೆಯಲ್ಲಿ ಅಳವಡಿಸಲಾಗಿದೆ. ಪ್ರಸ್ತುತ ಮಹಾ ಪ್ರಬಂಧದಲ್ಲಿ ವಸ್ತು ವಿಷಯವನ್ನು ವಿಷಯಾನುಕ್ರಮವಾಗಿ ಅಭ್ಯಾಸ ಮಾಡಲಾಗಿದೆ. ಹಾಗೂ ಕಾಲಾನುಕ್ರಮವಾಗಿ ವಿವರಿಸಲಾಗಿದೆ. ಎಲ್ಲಕ್ಕಿಂತ ಮಿಗಿಲಾಗಿ ಬೇರೆ ಬೇರೆ ಪೂರಕ ಶಾಸ್ತ್ರಗಳ ಪರಿಕಲ್ಪನೆಗಳನ್ನು ಸಂಶೋಧನೆಯಲ್ಲಿ ಬಳಸಿಕೊಳ್ಳಲಾಗಿದೆ.

### 2.5 ಅಧ್ಯಯನಗಳ ವಿಭಾಗೀಕರಣ

**ಅಧ್ಯಾಯ 1**

ಈ ಅಧ್ಯಾಯವು ಪೀಠಿಕಾ ರೂಪದಲ್ಲಿದೆ. ಇದರಲ್ಲಿ ಅಧ್ಯಯನದ ಸ್ವರೂಪ ಮತ್ತು ರಾಜಕೀಯ ಹಿನ್ನಲೆಯನ್ನು ವಿವರಿಸಲಾಗಿದೆ.

**ಅಧ್ಯಾಯ 2**

ಈ ಅಧ್ಯಾಯದಲ್ಲಿ ಅಧ್ಯಯನದ ವಿಷಯದ ಮಹತ್ವ ಮತ್ತು ವ್ಯಾಪ್ತಿ ಮತ್ತು ಅಧ್ಯಯನದ ಆಕರಗಳು, ಹೊಯ್ಸಳರ ಕಾಲದಲ್ಲಿ ದೊರೆತಂತಹ ಶಾಸನಗಳ ಸಮೀಕ್ಷೆ, ಸಾಹಿತ್ಯಿಕ ಆಧಾರಗಳ ಬಗ್ಗೆ ಕೂಲಂಕುಷ ಚರ್ಚೆಯನ್ನು ಮಾಡಲಾಗಿದೆ. ಹೊಯ್ಸಳರ ಕಾಲದ ನಗರೀಕರಣದ ಬಗ್ಗೆ ಬೆಳಕು ಚೆಲ್ಲುವ ಯಾವ ಗ್ರಂಥಗಳು ಇದುವರೆಗೂ ಲಭ್ಯವಾಗಿಲ್ಲ. ಈ ಅಧ್ಯಾಯದಲ್ಲಿ ಹೊಯ್ಸಳರ ಕಾಲದ ಬಗ್ಗೆ ಪ್ರಕಟಿತವಾಗಿರುವ ಹಾಗೂ ಅಪ್ರಕಟಿತ ಗ್ರಂಥಗಳ ಪರಿಚಯವನ್ನು ಮಾಡಲಾಗಿದೆ. ಈ ಪ್ರಬಂಧವನ್ನು ರಚಿಸಲು ಉಪಯೋಗಿಸಿದ ಮೂಲಾಧಾರಗಳ ಬಗ್ಗೆಯೂ ಹಾಗೂ ಈ ಪ್ರಬಂಧವನ್ನು ಸಿದ್ಧಪಡಿಸಲು ಅನುಸರಿಸಿದ ಸಂಶೋಧನಾ ವಿಧಾನದ ಬಗ್ಗೆಯೂ ಕೂಡ ಚರ್ಚಿಸಲಾಗಿದೆ ಮತ್ತು ಅಪ್ರಕಟಿತ ಗ್ರಂಥಗಳ ಪರಿಚಯವನ್ನು ಮಾಡಲಾಗಿದೆ.

**ಅಧ್ಯಾಯ 3**

ನಗರ ಅಧ್ಯಯನಗಳು ಮೂರನೆಯ ಅಧ್ಯಾಯದಲ್ಲಿ ನಗರ ಅಧ್ಯಯನಗಳು ನಗರ ಕೇಂದ್ರಗಳು ಹಾಗೂ ಅವುಗಳ ವರ್ಗೀಕರಣವನ್ನು ವಿವರಿಸಲಾಗಿದೆ.

**ಅಧ್ಯಾಯ 4**

ಈ ಅಧ್ಯಾಯದಲ್ಲಿ ನಗರೀಕರಣದ ಅಂಶಗಳು, ನಗರ ಕೇಂದ್ರಗಳ ಉದಯ, ರಾಜಕೀಯ ಅಂಶ ಮತ್ತು ಧಾರ್ಮಿಕ ಅಂಶಗಳನ್ನು ವಿವರಿಸಲಾಗಿದೆ.

**ಅಧ್ಯಾಯ 5**

ಈ ಅಧ್ಯಾಯದಲ್ಲಿ ನಗರದ ಬೆಳವಣಿಗೆಯ ಲಕ್ಷಣಗಳು, ದಕ್ಷಿಣ ಭಾರತದಲ್ಲಿ ನಗರ ಬೆಳವಣಿಗೆಗೆ ಅನುಕೂಲಕಾರಿಯಾದ ಸನ್ನಿವೇಶ, ನಗರ ಸ್ವರೂಪ ಹಾಗೂ ವರ್ಗೀಕರಣ, ಪಟ್ಟಣಗಳ ಹುಟ್ಟು ಹಾಗೂ ಬೆಳವಣಿಗೆ, ನಗರ ಕೇಂದ್ರಗಳ ಗಾತ್ರ, ಹಂಚಿಕೆ ಹಾಗೂ ರಚನೆಯನ್ನು ವಿವರಿಸಲಾಗಿದೆ.

**ಅಧ್ಯಾಯ 6**

ಈ ಅಧ್ಯಾಯದಲ್ಲಿ ಮಧ್ಯಮ ಶ್ರೇಣಿಯ ಪಟ್ಟಣಗಳು, ನಗರ ಆಡಳಿತ, ಪಟ್ಟಣ ಸಭೆ, ಮಧ್ಯಕಾಲೀನ ಕರ್ನಾಟಕದಲ್ಲಿ ಪಟ್ಟಣ ಸಭೆ, ಪಟ್ಟಣಸ್ವಾಮಿ, ಹುದ್ದೆಯ ನೇಮಕ, ಹಾಗೂ ಅವರ ಸ್ಥಾನ ಮತ್ತು ಕಾರ್ಯಗಳು, ವ್ಯಾಪಾರಿ ಸಂಘಗಳು ಮತ್ತು ಅವುಗಳ ಪ್ರಾಮುಖ್ಯತೆ, ನಗರ ಸಮಾಜದ ಸ್ವರೂಪ ಮತ್ತು ಪಟ್ಟಣಗಳಲ್ಲಿ ಜೀವನ ಮುಂತಾದ ವಿಷಯಗಳ ಬಗ್ಗೆ ವಿವರಣೆ ನೀಡಲಾಗಿದೆ.

**ಅಧ್ಯಾಯ 7**

ಈ ಅಧ್ಯಾಯದಲ್ಲಿ ಸೋಮನಾಥಪುರದ ಐತಿಹಾಸಿಕ ಹಿನ್ನಲೆ, ಸೋಮನಾಥಪುರದ ಆಡಳಿತ, ಕೃಷಿ ವ್ಯವಸ್ಥೆ, ಕೈಗಾರಿಕೆಗಳು, ದೇವರ ವಸ್ತ್ರ ವಿನ್ಯಾಸ, ಪುತ್ರಿಯ ಪಟ್ಟೆರೇಷ್ಮೆ ಬಟ್ಟೆ, ಶಿವದೇವಲಯದ ಸಿಬ್ಬಂದಿ ಹಾಗೂ ವಿಷ್ಣು ದೇವಾಲಯದ ಸಿಬ್ಬಂದಿಯ ಬಗ್ಗೆ ವಿವರಣೆ ನೀಡಲಾಗಿದೆ.

**ಅಧ್ಯಾಯ 8**

ಈ ಅಧ್ಯಾಯದಲ್ಲಿ ಸೋಮನಾಥಪುರ ಶಾಸನಗಳಲ್ಲಿ ನಾಣ್ಯಗಳ ಉಲ್ಲೇಖವನ್ನು ನೋಡುತ್ತೇವೆ.

**ಅಧ್ಯಾಯ 9**

ಈ ಅಧ್ಯಾಯದಲ್ಲಿ ಸೋಮನಾಥಪುರ ಶಾಸನಗಳಲ್ಲಿ ಅಲಂಕಾರಿಕ ವಸ್ತುಗಳು, ಸಂತೆಗಳು, ವ್ಯಾಪಾರ, ದೇವಾಲಯ ನಗರವಾಗಿ ಸೋಮನಾಥಪುರವನ್ನು ವಿವರಿಸಲಾಗಿದೆ. ಸೋಮನಾಥಪುರದ ಕಲೆ ಮತ್ತು ವಾಸ್ತುಶಿಲ್ಪಗಳ ಬಗ್ಗೆ ಮತ್ತು ಸೋಮನಾಥಪುರದ ಅವನತಿಯ ಬಗ್ಗೆ ವಿವರಣೆ ನೀಡಲಾಗಿದೆ.

**ಅಧ್ಯಾಯ 10**

ಈ ಅಧ್ಯಾಯದಲ್ಲಿ ಪ್ರಸ್ತುತ ಪ್ರಬಂಧದಿಂದ ಪಡೆದ ಪ್ರಮುಖ ಬೆಳಕರು ಚೆಲ್ಲುವ ವಿವರಗಳನ್ನು ನೀಡಲಾಗಿದೆ. ಪ್ರಸ್ತುತ ನಗರ ಕೇಂದ್ರಗಳ ಸಮೀಕ್ಷೆಯು ಹೊಯ್ಸಳ ಸಾಮ್ರಾಜ್ಯದ ಸುಮಾರು ಕ್ರಿ.ಶ. 10 ರಿಂದ 13ನೇ ಶತಮಾನದಲ್ಲಿನ ನಗರೀಕರಣದ ಪ್ರಮುಖ ಅಂಶಗಳನ್ನು ಒಳಗೊಂಡಿದೆ. ಹಲವು ಮುಖಗಳಾದ ಪಟ್ಟಣಗಳ ಹುಟ್ಟು ಬೆಳವಣಿಗೆ ಹಾಗೂ ರಚನೆ ಮತ್ತು ಪಟ್ಟಣಗಳಲ್ಲಿನ ಆಡಳಿತ ಆರ್ಥಿಕ ಮತ್ತು ಸಾಮಾಜಿಕ ಜೀವನಗಳನ್ನು ಅಧ್ಯಯನ ಮಾಡಲಾಗಿದೆ.

ಪಟ್ಟಣಗಳಲ್ಲಿ ಸೇನಾಡಳಿತವೂ ಸೇರಿದಂತೆ ಹಲವು ಆಡಳಿತ ಕಾರ್ಯಗಳಿದ್ದವು. ಅಲ್ಲಿ ಮಾರುಕಟ್ಟೆಗಳು ಹಾಗೂ ಕರಕುಶಲ ವಸ್ತುಗಳ ತಯಾರಿಕೆಯೂ ಇತ್ತು. ಇದರ ಜೊತೆಗೆ ಕೋಟೆಯನ್ನು ಹೊಂದಿದ ನಗರ ಕೇಂದ್ರಗಳೊಳಗೆ ಆಡಳಿತ ಕಾರ್ಯದ ಕೇಂದ್ರೀಕರಣವಿತ್ತು. ಪಟ್ಟಣಗಳು ಹಳ್ಳಿಗಳಿಗಿಂತ ಭಿನ್ನವಾಗಿದ್ದವು ಹಾಗೂ ಹಳ್ಳಿಗಳಿಗೆ ಹೋಲಿಸಿದರೆ ಅಲ್ಲಿನ ಜೀವನ ಹೆಚ್ಚು ಸಂಕೀರ್ಣವೂ ಹಾಗೂ ವೈವಿಧ್ಯಮಯವಾಗಿತ್ತು.

## ಒಂದನೇ ಅಧ್ಯಾಯದಿಂದ ಎರಡನೇ ಅಧ್ಯಾಯದವರೆಗಿನ ಅಡಿಟಿಪ್ಪಣಿಗಳು

1) ಎ.ಕೆ.2 ಶ್ರವಣ ಬೆಳಗೊಳ 132

2) ಎಂ.ಎ.ಆರ್. 1916 ಪು 50

3) ಡೆರೆಟ್ – ಜೆ.ಡಿ.ಎಂ.ದಿ ಹೊಯ್ಸಳಾಸ್ ಪು 36

4) ಕರ್ನಾಟಕ ಪರಂಪರೆ ಸಂ 1–1970 ಪು 469

5) ಟೆರೆಡ್ ಜೆ.ಡಿ.ಎಂ. – ಅದೇ ಪು 45

6) ಡೆರೆಟ್ ಜೆ.ಡಿ.ಎಂ. – ಅದೇ ಪು 221

7) ಎ.ಕ.ಸಂ. IX ಪು 191

8) E.C. IV Yd., 1: EC IV Sr. 34

9) ಕರ್ನಾಟಕ ಚರಿತ್ರೆ ಸಂ.2 ಪು 119

10) ಕರ್ನಾಟಕ ಪರಂಪರೆ ಸಂ 1 – ಪು 470

11) ಕರ್ನಾಟಕ ಪರಂಪರೆ ಸಂ 1 – ಪು 471

12) ಕರ್ನಾಟಕ ಪರಂಪರೆ ಸಂ 1 – ಪು 124

13) ಎ.ಇ.ಸಂ.– VII ಪು 176

14) ಕರ್ನಾಟಕ ಪರಂಪರೆ – ಅದೇ ಪು 472

15) ಎ.ಕ.ಸಂ. IX ಹಳೇ ಪು 164

16) ಕರ್ನಾಟಕ ಪರಂಪರೆ – ಅದೇ ಪು 474

17) ಕರ್ನಾಟಕ ಪರಂಪರೆ – ಅದೇ ಪು 475

18) ಎ.ಕ.ಸಂ. IX ಹಳೇ ಪು – 328

19) ಎ.ಕ.ಸಂ. IX ಹಳೇ ಪು 332

20) ಎ.ಕ.ಸಂ. IX ಹಳೇ ಪು 317

21) ಎ.ಕ.ಸಂ. IX ಹಳೇ ಪು 209

22) ಎ.ಕ.ಸಂ. IX ಹಳೇ ಪು 333

23) ಶೇಕ್.ಅಲಿ.ಬಿ.– ದಿ ಹೊಯ್ಸಳ ಡೈ ನಾಸ್ಟಿ, ಮೈಸೂರು 1972 ಪು 164

24) ಎ.ಕ.ಸಂ IX ಹಳೇ ಪು 330

25) ಎ.ಕ.ಸಂ XV ಬಿ.ಎಲ್. 332 ಪು 86

26) ಎ.ಕ.ಸಂ. IV ಹಳೇ ಪು 277

27) ಎ.ಕ.ಸಂ. VII ಹಳೇ ಪು 278

28) ಎ.ಕ.ಸಂ. VI ಹಳೇ ಪು 406

# ಅಧ್ಯಾಯ 3

## 3.1 ನಗರ ಅಧಯ್ಯನ

ನಗರ ಹಾಗೂ ನಗರೀಕರಣಗಳು ನವೀನ ಯುಗದ ವಿಶಿಷ್ಟ ವಸ್ತುಗಳಲ್ಲ. ತಮ್ಮ ಎಲ್ಲಾ ವೈವಿಧ್ಯತೆಗಳು ಹಾಗೂ ಸಂಕೀರ್ಣತೆಗಳೊಂದಿಗೆ ಪ್ರಾಚೀನ ಹಾಗೂ ಮಧ್ಯಕಾಲೀನ ಯುಗದಲ್ಲೇ ಅಸ್ಥಿತ್ವದಲ್ಲಿದ್ದವು. ಸ್ವಲ್ಪ ಮಟ್ಟಿಗೆ ಆಧುನಿಕ ನಗರಗಳು ಪೂರ್ವದ ಮುಂದುವರಿಕೆಯಾಗಿದೆ.[1] ಆದ್ದರಿಂದ ನಗರೀಕರಣವು ನಾಗರೀಕತೆಯಷ್ಟೇ ಪುರಾತನವಾದುದ್ದು ಎಂದು ಹೇಳಬಹುದು. ಈ ಪ್ರಕ್ರಿಯೆಯು ಹಿಂದೆ ಗ್ರಾಮೀಣ ಜನತೆ ಹಲವಾರು ಸ್ವರೂಪಗಳಾಗಿ ಮಾರ್ಪಾಡಾಗುವುದಕ್ಕೆ ಹೊರಟಾಗಲೇ ಪ್ರಾರಂಭವಾಯಿತು. ಹಾಗೂ ಕೃಷಿ ಕೇಂದ್ರಗಳು ಕೇವಲ ಉತ್ಪಾದಕತೆಯ ಭೂಮಿಗಳಾಗಿ ಉಳಿಯದೆ ಹತ್ತು ಹಲವಾರು ಚಟುವಟಿಕೆಗಳ ಕೇಂದ್ರವಾಗಿ ಮಾರ್ಪಟ್ಟಾಗಲೇ ಪ್ರಾರಂಭಗೊಂಡಿತು.[2] ದೇಶದಲ್ಲಿನ ಈ ಪ್ರಕ್ರಿಯೆಯು ಕ್ರಮೇಣವಾಗಿ ಗ್ರಾಮೀಣ ವಸಾಹತುಗಳನ್ನು ನಗರ ಕೇಂದ್ರಗಳನ್ನಾಗಿ ಪರಿವರ್ತಿಸಿತು ಈ ಕಾರಣದಿಂದಾಗಿ ನಗರ ಬೆಳವಣಿಗೆ ಉಂಟಾಯಿತು. ಅದರ ಗಾತ್ರ ಹಾಗೂ ಸಂಖ್ಯೆಗಳೆರಡು ಬೆಳೆದವು. ಈ ಪರಿವರ್ತನೆ ಹಾಗೂ ಬೆಳವಣಿಗೆ ಚಲನೆ ಮತ್ತು ಚಲನಾಶಕ್ತಿಗಳು ನಗರ ಪ್ರದೇಶಗಳಲ್ಲಿ ವಿಶಿಷ್ಟ ಜೀವನ ಹಾಗೂ ಒಂದು ರೀತಿಯ ಸನ್ನಿವೇಶವನ್ನು ಸೃಷ್ಟಿಸಿದವು. ಇದನ್ನೇ 'ನಗರೀಕರಣ' ಎಂದು ಕರೆಯಬಹುದು. ನಗರೀಕರಣ, ನಗರ ಬೆಳವಣಿಗೆ ಹಾಗೂ ನಗರತ್ವಗಳು ಪರಸ್ಪರ ಒಂದನ್ನೊಂದರ ಕಾರಣ ಪರಿಣಾಮಗಳಾದರು ಅವುಗಳು ಅಂತರ ಸಂಪರ್ಕವನ್ನು ಬೆಸೆದುಕೊಂಡಿವೆ.

ನಗರಗಳು ನಾಗರೀಕತೆಯ ಉದಯದ ಪ್ರಾಚೀನ ಮಾನವ ನಿರ್ಮಿತ ವಸ್ತುಗಳಾದರು ನಗರ ಅಧ್ಯಯನವು ಸಾಪೇಕ್ಷವಾಗಿ ವಿದ್ವಾಂಸರ ಆಯ್ಕೆಯ ಇತ್ತೀಚಿನ ಕ್ಷೇತ್ರವಾಗಿದೆ. ಇದು ಯಾಕಾಗಿತೆಂದರೆ ಸಂಶೋಧನಾ ವಿದ್ವಾಂಸರು ನಗರವು ಸಮಾಜದ ಪ್ರತಿಬಿಂಬ ಹಾಗೂ ಸಮಾಜ ಜೀವನದ ವಿಶಿಷ್ಟ ರೂಪವಲ್ಲ ಎಂಬ ಅಭಿಪ್ರಾಯವನ್ನು ಹೊಂದಿದ್ದರು. ಆದರೆ ಕೈಗಾರಿಕ ಕ್ರಾಂತಿಯ ನಂತರ ನಗರಗಳು ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಬಲಿಷ್ಟ ಶಕ್ತಿಗಳಾದಂತೆ ಸಮಾಜ ಹಾಗೂ ನಗರವನ್ನು ಈ ರೀತಿ ಗುರುತಿಸುವುದು ಬದಲಾಯಿತು.[3] ನಗರೀಕರಣದ ಸಂಕೀರ್ಣ ಪ್ರಕ್ರಿಯೆ ಹಾಗೂ ನಗರಗಳಲ್ಲಿನ ವಿಶಿಷ್ಟ ಜೀವನ ರೀತಿಯು ಸಂಶೋಧಕರು ನಗರ ಅಧ್ಯಯನಗಳ ಗಂಭೀರವಾದ ಕೃಷಿಯನ್ನು ನಡೆಸುವಂತೆ ಪ್ರೇರೇಪಿಸಿದವು. ನಗರ ಹಾಗೂ ನಗರೀಕರಣ ಅಧ್ಯಯನಕ್ಕೆ ಒಂದು ವ್ಯವಸ್ಥಿತ ಮಾರ್ಗವನ್ನು ಒದಗಿಸಿಕೊಟ್ಟ ಹರಿಕಾರರೆಂದರೆ ಪಾರ್ಕ್, ಬರ್ಗೆಸ್,

ಮತ್ತು ಮೆಕೆಂಜಿ, ಆಗಿದ್ದಾರೆ.[4] ವಾರ್ಕ್ ನಗರದ ಪರಿಸರ ಸಿದ್ಧಾಂತಕ್ಕೆ ಸಾಮಾನ್ಯ ಚೌಕಟ್ಟನ್ನು ಒದಗಿಸಿದನು. ಅವನ ಪ್ರಕಾರ ನಗರವು ತನ್ನದೇ ಆದ ನಿಯಮಗಳಿಂದ ನಿರ್ಮಿಸಿದ ಸ್ಥಳದಲ್ಲಿನ ಆಳವಾದ ಸಂಘಟಿತ ಕೇಂದ್ರವಾಗಿದೆ.

**3.2 ನಗರ ಇತಿಹಾಸಕ್ಕೆ ಸಂಬಂಧಿಸಿದ ಅಧ್ಯಯನಗಳು**

ಪಟ್ಟಣಗಳ ಚಾರಿತ್ರಿಕ ನವೀನತೆಗಳು ಅವುಗಳ ವೈಶಿಷ್ಟತೆಗಳು ಅವುಗಳ ವಿಶೇಷ ಸಾಮಾಜಿಕ ಒರೆಕೋರೆಗಳು, ವೈವಿಧ್ಯ, ಆರ್ಥಿಕ, ಸಾಮಾಜಿಕ, ಹಾಗೂ ರಾಜಕೀಯ ಚಟುವಟಿಕೆಗಳ ಮೇಲಿನ ಅವುಗಳ ಆಸಕ್ತಿಯೆಲ್ಲವು ಸಂಶೋಧಕರು ನಗರ ಇತಿಹಾಸದ ಬಗ್ಗೆ ಆಳವಾದ ಅಧ್ಯಯನವನ್ನು ಮಾಡುವಂತೆ ಪ್ರೇರೇಪಿಸಿದವು. ಈ ವಿಷಯವಾಗಿ ಪಿರಿನ್ ಹಾಗೂ ವೆಬರ್ ನೀಡಿರುವ ಮಾದರಿಗಳು ಮಧ್ಯಕಾಲೀನ ಯುಗಕ್ಕೆ ನಗರ ಅಧ್ಯಯನಗಳಿಗೆ ಬಹಳ ಉಪಯುಕ್ತವಾಗಿದೆ.[5] ಗಿಡನ್ ಸ್ಜೆಬರ್ಗ್ ಎಂಬ ಇನ್ನೊಬ್ಬ ಲೇಖಕ ಕೈಗಾರಿಕಾ ಪೂರ್ವ ಹಾಗೂ ಕೈಗಾರಿಕೇತರ ನಗರದ ಸಾಮಾಜಿಕ ಹಾಗೂ ಪರಿಸರ ರಚನೆಗಳನ್ನು ವಿವರಿಸಿ ವಿಶ್ಲೇಷಿಸಲು ಪ್ರಯತ್ನಿಸಿದ್ದಾನೆ.[6]

ಲೇಖಕನು ನೀಡಿರುವ ಸಂಕೇತ ನಿರೂಪಣಾ ಶಾಸ್ತ್ರವು ಬಹಳ ಕುತೂಹಲಕಾರಿಯಾಗಿದೆ. ಲೇಖಕನು ತಾಂತ್ರಿಕತೆಯನ್ನು ಪ್ರಮುಖವಾದ ವ್ಯಯಕ್ತಿಕ ಪರಿವರ್ತನೀಯ ಸಾಧನವನ್ನಾಗಿ ತೆಗೆದುಕೊಳ್ಳುತ್ತಾನೆ. ಇತ್ತೀಚಿನ ವರ್ಷಗಳಲ್ಲಿ ನಗರ ಮಾನವಶಾಸ್ತ್ರಜ್ಞರುಗಳಾದ ಐಡನ್, ಸಾದಾಲ್ ಮತ್ತು ರಿಚರ್ಡ್ ಜಿ. ಫಾಕ್ಸ್ ನಗರೀಕರಣದ ವಿಭಿನ್ನ ಸಂಸ್ಕೃತಿಗಳ ಅಧ್ಯಯನ ನಡೆಸಿದ್ದಾರೆ. ಹಾಗೂ ನಗರಗಳನ್ನು ಅವುಗಳ ಸಾಂಸ್ಕೃತಿಕ ಹಿನ್ನಲೆಯಲ್ಲಿ ವಿಶ್ಲೇಷಿಸಿದ್ದಾರೆ.[7] ಈ ರೀತಿಯಾದ ಸಾಹಿತ್ಯವು ಇತಿಹಾಸ ಪೂರ್ವದ ನಗರಗಳ ಉತ್ತಮವಾದ ಹಾಗೂ ಸ್ಪಷ್ಟವಾದ ಚಿತ್ರಣವನ್ನು ನೀಡುವಲ್ಲಿ ಸಹಾಯಕಾರಿಯಾಗಿದೆ. ಆದಾಗ್ಯೂ ನಗರವನ್ನು ನಿರ್ದಿಷ್ಟವಾಗಿ ಸಂಜ್ಞೆಗಳಲ್ಲಿ ವಿವರಿಸಲು ಹಾಗೂ ಅದರ ಅರ್ಥವನ್ನು ಸಂಪೂರ್ಣವಾಗಿ ಗ್ರಹಿಸಲು ಕಷ್ಟವಾಗಿದೆ. ಈ ಸಂಬಂಧ ಸ್ಟ್ಯಾನ್ಲಿ ಕೆ. ಶುಲ್ಟ್ಸ್ ಈ ರೀತಿ ಹೇಳುತ್ತಾನೆ. ನಗರವು ವಿವಿಧ ಐತಿಹಾಸಿಕ ಹಾಗೂ ಪ್ರಾದೇಶಿಕ ಸನ್ನಿವೇಶಗಳಲ್ಲಿ ಹಲವಾರು ಅರ್ಥಗಳನ್ನು ನೀಡುತ್ತದೆ. ನಗರ ಇತಿಹಾಸದ ಸಂಶೋಧಕರಾಗಿ ನಾವು "ನಗರ" ಎಂಬ ಪದವು ಕಾಲ್ಪನಿಕ ಅಸ್ಥಿತ್ವವಾಗಿ ಬಹಳ ಸೂಕ್ಷ್ಮವಸ್ತುವಾಗಿ ಕಂಡುಬರುತ್ತದೆ.[8]

### 3.3 ಭಾರತದಲ್ಲಿ ನಗರ ಅಧ್ಯಯನ

ಇತ್ತೀಚಿನ ವರ್ಷಗಳಲ್ಲಿ ಭಾರತದಲ್ಲಿ ಎಲ್ಲಾ ಸಾಮಾಜಿಕ ವಿಜ್ಞಾನಗಳಲ್ಲಿ ನಗರ ಅಧ್ಯಯನಗಳ ಬಗ್ಗೆ ಆಸಕ್ತಿಯು ಬೆಳೆಯುತ್ತಾ ಸಾಗುತ್ತಿದೆ. ಆದಾಗ್ಯೂ ಈಗಿನ ಸಮಕಾಲೀನ ನಗರ ಅಧ್ಯಯನವು ಪ್ರಮುಖವಾಗಿ ಸ್ವಲ್ಪ ಪ್ರಮಾಣದ ಇತಿಹಾಸದ ಹಿನ್ನಲೆಯನ್ನು ಹೊಂದಿದೆ. ಸಾಮಾಜಿಕ ವಿಜ್ಞಾನಿಗಳು ಅಧ್ಯಯನ ಮಾಡುವ ವಸ್ತುಗಳು ಸಾಪೇಕ್ಷಕವಾಗಿ ಐತಿಹಾಸಿಕವಾಗಿದೆ ಅವುಗಳು ಬಹಳ ಇತ್ತೀಚಿನ ಮೂಲದ್ದಾಗಿವೆ.[9] ಆದ್ದರಿಂದ ಭಾರತದಲ್ಲಿ ನಗರ ಇತಿಹಾಸದ ಕ್ಷೇತ್ರವು ಸಾಪೇಕ್ಷವಾಗಿ ಭೇದಿಸಲಾಗದ ಹಾಗೂ ಸ್ವಲ್ಪವೇ ಕಾರ್ಯವಾಗಿರುವ ವಸ್ತುವಾಗಿ ಉಳಿದಿದೆ ಅದರೆ ಸಾಮಾಜಿಕ ಹಾಗೂ ಆರ್ಥಿಕ ಇತಿಹಾಸದ ವಿದ್ಯಾರ್ಥಿಯು ಪೂರ್ವಾತಿಹಾಸವನ್ನು ಅರ್ಥ ಮಾಡಿಕೊಳ್ಳಲು ನಗರ ಅಧ್ಯಯನವನ್ನು ಕಡೆಗಾಣಿಸಲಾಗುವಂತಿಲ್ಲ. ನಗರ ಇತಿಹಾಸದ ಹಲವು ಅಂಶಗಳನ್ನು ನಿರ್ಲಕ್ಷಿಸಿ ಜನರ ಜೀವನದ ಅರ್ಥಪೂರ್ಣವಾದ ಹಾಗೂ ವಿಚಾರಪೂರ್ಣವಾದ ವಿವರಣೆಯನ್ನು ನೀಡುವುದು ಬಹಳ ಕಷ್ಟದ ಕಾರ್ಯ. ಭಾರತೀಯ ನಗರ ಸಾಹಿತ್ಯದಲ್ಲಿ ಗಮನಾರ್ಹವಾದ ಸಂಖ್ಯೆಯಲ್ಲಿ ಜೀವನ ಚರಿತ್ರೆಗಳೆಂದು ಕರೆಯಲಾಗುವ ಅಂದರೆ ಪಟ್ಟಣದ ಜೀವನ ಚರಿತ್ರೆ ಅಧ್ಯಯನಗಳಿರುವುದು ಎಂಬುದು ಸತ್ಯದ ಮಾತಾಗಿದೆ. ಈ ರೀತಿಯಾದ ಸಾಹಿತ್ಯವು ಪ್ರಾಥಮಿಕವಾಗಿ ನಿರೂಪಣಾತ್ಮಕ ಹಾಗೂ ವಿವರಣಾತ್ಮಕವಾಗಿಯೂ ಇದೆ. ಕಾಲಾಧಾರದ ಮೇಲೆ ಪಟ್ಟಣದ ಇತಿಹಾಸವನ್ನು ಶೋಧಿಸುತ್ತಾ ಸಾಗುತ್ತದೆ. ಈ ಪ್ರಮುಖ ಘಟನೆಗಳ ಮೇಲೆ ಬೆಳಕು ಚೆಲ್ಲುತ್ತದೆ. ಚಾರಿತ್ರಿಕವಾಗಿ ಪ್ರಮುಖವಾದ ವ್ಯಕ್ತಿಗಳ ಸ್ಥಳಗಳ ಉಲ್ಲೇಖವನ್ನು ಮಾಡುತ್ತಾ ಸಾಗುತ್ತದೆ.[10] ಆದ್ದರಿಂದ ನಗರ ಇತಿಹಾಸದಲ್ಲಿನ ಅಧ್ಯಯನವು ನಗರೀಕರಣವನ್ನು ಸಾಮಾನ್ಯವಾಗಿ ಹಾಗೂ ನಗರ ಕೇಂದ್ರಗಳನ್ನು ವಿಶೇಷ ವಸ್ತುವಾಗಿ ಗಣನೆಗೆ ತೆಗೆದುಕೊಳ್ಳಬೇಕು.[11]

### 3.4 ಪೂರ್ವ ಮತ್ತು ಮಧ್ಯಕಾಲೀನ ಭಾರತಕ್ಕೆ ಸಂಬಂಧಿಸಿದ ನಗರ ಅಧ್ಯಯನಗಳು

ಸಾಮಾಜಿಕ ಹಾಗೂ ಆರ್ಥಿಕ ಇತಿಹಾಸದ ಹರಿಕಾರರು ಭಾರತದ ಪ್ರಾಗ್ಯೆತಿಕ ಇತಿಹಾಸದ ಯುಗದ ನಗರ ಜೀವನದ ಹಲವಾರು ಅಂಶಗಳ ಮೇಲೆ ಅಧ್ಯಯನ ಮಾಡಿದರು ನಗರ ಅಧ್ಯಯನಗಳಿಗೆ ಸಂಬಂಧಿಸಿದಂತೆ ಹೆಚ್ಚು ಪಾಲು ಗ್ರಂಥಗಳು ಸಾಕಷ್ಟಿರಲಿಲ್ಲ. ಉದಾಹರಣೆಗೆ ದತ್.ಬಿ.ಬಿ. ಇವರು ಪ್ರಾಚೀನ ಭಾರತದ ನಗರಗಳ ಬಗ್ಗೆ ಬರೆದವರಲ್ಲಿ ಮೊದಲ ಇತಿಹಾಸಕಾರ ರಾಗಿದ್ದಾರೆ.[12] ಆದರೆ ಅವರ ಗ್ರಂಥವು ನಗರ ಯೋಜನೆಗೆ ಹೆಚ್ಚು ಕೇಂದ್ರೀಕೃತವಾಗಿದೆ. ಸ್ಟುವರ್ಟ್ ಪಿಗಟರ್ ಏಕವಿಷಯ ಪ್ರಬಂಧವು ಪ್ರವಾಸಿಗಳಿಗೆ ಮಾರ್ಗದರ್ಶಿಯಿದ್ದಂತಿದೆ.[13] ಭಾರತದ ನಗರಗಳ

ಮೇಲಿನ ಪಾರೆಸ್ಸರ್ ಚಿತ್ರಣಗಳು ಪ್ರವಾಸಿಗರನ್ನು ಗಮನದಲ್ಲಿಟ್ಟುಕೊಂಡು ಅಭಿಮಾನ ಬೆವರಿನ ಪರಮಾತ್ರವಾಗಿದೆ.[14] ಬಿ.ಎನ್.ಪೂರಿಯಾ ಪಿಗಟ್‌ರ ಗ್ರಂಥವನ್ನು ತನ್ನ ಗ್ರಂಥದಲ್ಲಿ ಪ್ರಾಚೀನ ಭಾರತದ ಹೆಚ್ಚಿನ ನಗರಗಳನ್ನು ಸೇರಿಸುವುದರ ಮೂಲಕ ಪುನರ್ ವಿಮರ್ಶಿಸಿದ್ದಾನೆ.[15] ಅಮಿತಾ ರಾಯ್‌ರವರ ಗ್ರಂಥವು ಪ್ರಾಚ್ಯ ಇತಿಹಾಸ ಮಾಹಿತಿಯನ್ನು ಬಳಸಿಕೊಂಡು ನಗರ ಯೋಜನೆಯ ಮೇಲೆ ಬರೆದ ಗ್ರಂಥವಾಗಿದೆ.[16]

ಜಿ.ಎಸ್.ಘರಿಯೇ ರವರು ಭಾರತದ ನಗರಗಳ ಸಾಮಾಜಿಕ ವಿಶ್ಲೇಷಣೆಯನ್ನು ಮಾಡಿದ್ದರೆ ಹಾಗೂ ಇವರು ಟಾಯ್ನಬಿಯ ರಾಜಧಾನಿಗಳ ಮೇಲಿನ ಅಭಿಪ್ರಾಯಗಳನ್ನು ಚರ್ಚೆ ಮಾಡುವುದರಲ್ಲಿ ತಮ್ಮ ಗಮನವನ್ನು ಕೇಂದ್ರೀಕರಿಸಿದ್ದಾರೆ. ಪ್ರಾಚೀನ ಪಟ್ಟಣದ ಅಧ್ಯಯನಕ್ಕೆ ಹೆಚ್ಚಿನ ಪ್ರಮಾಣದ ಕೊಡುಗೆಯನ್ನು ನೀಡಿರುವೆಂದರೆ ಎ.ಘೋಷ್[17] ಆದರೆ ಈ ಗ್ರಂಥಗಳೆಲ್ಲವು ಹಾಗೂ ನಗರತ್ವದ ಹಲವಾರು ಅಂಶಗಳನ್ನು ನಿರ್ಲಕ್ಷಿಸಿವೆ.[18] ನಗರೀಕರಣದ ಮೇಲೆ ಪ್ರಮುಖವಾದ ಗ್ರಂಥವನ್ನು ರಚಿಸಿದವರೆಂದರೆ ವಿ.ಕೆ.ಥಾಕೂರ್ ವ್ಯಯಕ್ತಿಕ ನಗರಗಳನ್ನು ಅಧ್ಯಯನ ಮಾಡುವ ಗಣನೀಯ ಪ್ರಮಾಣದ ಸಾಹಿತ್ಯವು ಅಸ್ತಿತ್ವದಲ್ಲಿದೆ.[19]

### 3.5 ದಕ್ಷಿಣ ಭಾರತಕ್ಕೆ ಸಂಬಂಧಿಸಿದ ಅಧ್ಯಯನ

ಸಾಮ್ರಾಜ್ಯಗಳ ಹುಟ್ಟು ಬೆಳವಣಿಗೆಗೆ ಹಾಗೂ ಪತನದ ರಾಜಕೀಯ ಇತಿಹಾಸವನ್ನು ನಿರೂಪಿಸುವ ದಕ್ಷಿಣ ಭಾರತದ ಸಾಹಿತ್ಯವು ಬಹಳ ವಿಶಾಲವು ಸಮೃದ್ಧಿಯು ಆಗಿದೆ. ಈ ಅಧ್ಯಯನಗಳಲ್ಲಿ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗಳು ಧಾರ್ಮಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ವಿಶ್ಲೇಷಿಸಲಾಗಿದೆ. ಆದರೆ ಇವುಗಳು ಕೇವಲ ಅನುಬಂಧವಾಗಿ ಕಂಡುಬರುತ್ತದೆ. ಹಾಗೂ ಸಂಶೋಧನೆಯ ವ್ಯಯಕ್ತಿಕ ಕ್ಷೇತ್ರವಾಗಿ ಕಂಡುಬರುವುದಿಲ್ಲ. ನಗರ ವಸ್ತುವಿನ ಅಧ್ಯಯನಕ್ಕೆ ಸಂಬಂಧಿಸಿದಂತೆ ಇದು ಸತ್ಯವೆಂದು ಕಾಣುತ್ತದೆ. ಇದಕ್ಕೆ ಅಪವಾದವೆಂಬಂತೆ ಅಪ್ಪಾದೊರೈ ರವರ "ಏಕನಾಮಿಕ್ ಕಂಡಿಷನ್ ಆಫ್ ಸದರನ್ ಇಂಡಿಯಾ", ದೀಪಕ್ ರಾಜಂದಾಸ್ ರವರ "ದ ಏಕನಾಮಿಕ್ ಹಿಸ್ಟರಿ ಆಫ್ ಡೆಕನ್" ಸತ್ಯನಾರಾಯಣರವರ ದ ಹಿಸ್ಟರಿ ಆಫ್ ಆಂಧ್ರ ಮತ್ತು ತಪನ್ ರಾಯಚೌಧುರಿ ಹಾಗೂ ಇರ್ಫಾನ್ ಹಬೀಬ್‌ರವರ ದ ಕೇಂಬ್ರಿಡ್ಜ್ ಏಕಾನಮಿಕ್ ಹಿಸ್ಟರಿ ಗ್ರಂಥಗಳು ಪ್ರಮುಖವಾಗಿದೆ.[20]

ದಕ್ಷಿಣ ಭಾರತದ ವಿಶ್ವವಿದ್ಯಾನಿಲಯಗಳಲ್ಲಿನ ಪ್ರಕಟಿತ ಹಾಗೂ ಅಪ್ರಕಟಿತ ಪಿಹೆಚ್.ಡಿ. ಪ್ರಬಂಧಗಳ ಸಮೀಕ್ಷೆಯು ಜನರ ಸಾಮಾಜಿಕ, ಆರ್ಥಿಕ ಸ್ಥಿತಿಯನ್ನು ಅಧ್ಯಯನ ಮಾಡುವಲ್ಲಿ ಸಂಶೋಧಕರು ತೋರಿಸುತ್ತಿರುವ ನಿರಂತರ ಕಾಳಜಿಯನ್ನು ತೋರಿಸುತ್ತದೆ. ಇಂತಹ ಹಲವು ಪ್ರಬಂಧಗಳಲ್ಲಿ ಐತಿಹಾಸಿಕ ದೃಷ್ಟಿಕೋನದ ನಿರ್ದಿಷ್ಟದಲ್ಲಿನ ನಿರ್ದಿಷ್ಟ ಪ್ರದೇಶದ ಸಾಮಾಜಿಕ ಹಾಗೂ ಆರ್ಥಿಕತೆಯನ್ನು ನೀಡುವ ಪ್ರಯತ್ನಗಳನ್ನು ಮಾಡಲಾಗಿದೆ. ಆದರೂ ಯಾವುದೇ ಕಾಲ್ಪನಿಕ ಸಹಿತ್ಯದ ಬದಲಾಗಿ ಕೇವಲ ಸಮೃದ್ಧಿಯಾದ ಪ್ರಮಾಣದಲ್ಲಿ ನಿರೂಪಣಾ ಹಾಗೂ ವಿವರಣಾತ್ಮಕ ಗ್ರಂಥಗಳನ್ನು ನೋಡಬಹುದಾಗಿದೆ. ಇತ್ತೀಚಿನ ಹಾಗೂ ಒಂದು ವಿಶಿಷ್ಟ ದೃಷ್ಟಿಕೋನವನ್ನು ಹೊಂದಿರುವ ದಕ್ಷಿಣ ಭಾರತದ ಇತಿಹಾಸದ ಅಧ್ಯಯನವನ್ನು ಬರ್ಟನ್ ಸ್ಪೈನ್ ಮಾಡಿದ್ದಾರೆ. ಇದು ಮುಂದಿನ ಸಂಶೋಧನೆಗೆ ಅಡಕವಾಗುವಂತಹ ಹೊಸ ಆಯಾಮದೆಡೆಗಿನ ವಿವಿಧ ಮಾದರಿ ಹಾಗೂ ಅಂಶಗಳನ್ನು ಒದಗಿಸುತ್ತದೆ.[21]

ಆದರೆ ವ್ಯಯಕ್ತಿಕ ಪಟ್ಟಣಗಳನ್ನು ಅಧ್ಯಯನ ಮಾಡುವಲ್ಲಿ ಸಂಶೋಧಕರು ನೀಡಿರುವ ಮಹತ್ವಪೂರ್ಣವಾದ ಕೊಡುಗೆಯನ್ನು ನಿರ್ಲಕ್ಷಿಸುವಲ್ಲಿ ಇದು ಆಸಕ್ತಿಯನ್ನು ಹೊಂದಿಲ್ಲ. ಈ ಮೊದಲೇ ಹೇಳಿದಂತೆ ಇಂತಹ ಅಧ್ಯಯನಗಳು ಸಾಮಾನ್ಯವಾಗಿ ಪಟ್ಟಣಗಳ ಜೀವನ ಚರಿತ್ರೆಯ ವರ್ಗೀಕರಣದ ಅಡಿಯಲ್ಲಿ ಬರುತ್ತದೆ. 19ನೇಯ ಶತಮಾನದ ದ್ವಿತಿಯಾರ್ಧದಲ್ಲಿ ಹಾಗೂ 20ನೆಯ ಶತಮಾನದ ಆರಂಭದಲ್ಲಿ ಮದ್ರಾಸ್ ನಗರದ ಮೇಲೆ ಎರಡು ಗ್ರಂಥಗಳು ಹೊರಹೊಮ್ಮಿದವು. ಒಂದು ಟೆಲ್‌ಬಾಯ್ ವ್ಹೀಲರ್‌ನಿಂದ ಬರೆಯಲ್ಪಟ್ಟಿದ್ದರೆ ಮತ್ತೊಂದು ಹೆನ್ರಿ ಡವಿಸ್ಮನ್ ನವ್‌ನಿಂದ ಬರೆಯಲ್ಪಟ್ಟಿತು.[22]

ಮೊದಲ ಗ್ರಂಥವಾದ “ಮದ್ರಾಸ್ ಇನ್ ದ ಓಲ್ಡ್ ಟೈಮ್ಸ್” ಎಂಬ ಆಯ್ದ ಬರಹಗಳ ದೀರ್ಘ ಸರಣಿಗಳಲ್ಲಿ ವಿಷಯ ಹೇಳಲಾದ ಪಟ್ಟಣಗಳ ಇತಿಹಾಸವಾಗಿದೆ. ಹಾಗೂ ಈ ಸರಣಿಗಳನ್ನು ಕಾಲಗಣನೆಯ ಕ್ರಮದಲ್ಲಿ ಜೋಡಿಸಲಾಗಿದೆ. “ವೆಸ್ಟೀಜಿಸ್ ಆಫ್ ಓಲ್ಡ್ ಮದ್ರಾಸ್” ಎಂಬ ಇನ್ನೊಂದು ಗ್ರಂಥವು ನಗರದ ಬೆಳವಣಿಗೆ ಮತ್ತು ಕೋಟೆಯ ನಿರ್ಮಾಣ ಸ್ಥಳೀಯ ಸಂಸ್ಥೆಗಳ ಹುಟ್ಟು ಹಾಗೂ ಬೆಳವಣಿಗೆ ಮತ್ತು ನಿವಾಸಿಗಳ ಜೀವನ ರೀತಿನೀತಿಗಳನ್ನು ವಿವರಿಸುತ್ತದೆ. ಮುಂದೆ ಕೆಲವು ರಾಜಕೀಯ ರಾಜಧಾನಿಗಳು ಕೋಟೆಗಳು ಮತ್ತು ಧಾರ್ಮಿಕ

ಕೇಂದ್ರಗಳು ಅಲ್ಲಿನ ನಗರ ಕೇಂದ್ರಗಳ ಐತಿಹಾಸಿಕ ಬೆಳವಣಿಗೆಯನ್ನು ತಮ್ಮದೇ ದೃಷ್ಟಿಕೋನಗಳಲ್ಲಿ ನೋಡಲು ಸಂಶೋಧಕರನ್ನು ಆಕರ್ಷಿಸಿದವು.[23]

ಇತ್ತೀಚಿನ ಒಂದು ಗ್ರಂಥವು ಪಟ್ಟಣ ನಿವೇಶನ ಇತಿಹಾಸದ ಪ್ರತೀ ನಮೂನೆ ಅಥವಾ ಅವಲೋಕಿಸಿದ ಭಾಗ ಹಾಗೂ ನಿರ್ಮಾಣದ ರೀತಿ ಮತ್ತು ಇದರ ಮೇಲ್ವಿಚಾರಣೆಯಲ್ಲಿರುವ ಮನುಷ್ಯನನ್ನು ಸಾದರಪಡಿಸುವ ಪ್ರಯತ್ನ ಮಾಡುತ್ತದೆ. ಈ ಗ್ರಂಥವು 6 ಅಥವಾ 7 ರಿಂದ 17ನೇ ಶತಮಾನಗಳನ್ನೊಳಗೊಂಡಂತೆ ದಕ್ಷಿಣ ಭಾರತದ ಒಂದು ನಿರ್ದಿಷ್ಟ ಪ್ರದೇಶದಲ್ಲಿನ ಪಟ್ಟಣದ ನಿವೇಶನದ ಒಂದು ವ್ಯಾಪಕ ಅಧ್ಯಯನವಾಗಿದೆ.[24]

### 3.6 ನಗರ ಕೇಂದ್ರಗಳು ಹಾಗೂ ಅವುಗಳ ವರ್ಗೀಕರಣ

ನಗರ ಯೋಜನೆಯ ವಿಜ್ಞಾನವಾದ ವಾಸ್ತುಶಾಸ್ತ್ರದಲ್ಲಿ ವಿವಿಧ ಬಗೆಯ ನಗರಗಳ ವರ್ಗೀಕರಣವನ್ನು ಅವುಗಳು ನಿರ್ವಹಿಸುವ ಕಾಯಗಳಾದ ವ್ಯಾಪಾರ, ವಾಣಿಜ್ಯ ಉತ್ಪಾದನೆ, ಆಡಳಿತ ಹಾಗೂ ಸೇನಾ ಕಾರ್ಯಾಚರಣೆಯ ಆಧಾರದ ಮೇಲೆ ಮಾಡಲಾಗಿದೆ. ಒಂದು ನಗರವು ಸಾಮಾನ್ಯವಾದ ಕೋಟೆಯನ್ನು ಹೊಂದಿದ ಪಟ್ಟಣ ಇಲ್ಲಿ ವ್ಯಾಪಾರವು ಒಂದು ಪ್ರಮುಖವಾದ ಚಟುವಟಿಕೆಯಾಗಿತ್ತು. ಪಟ್ಟಣವು ದೊಡ್ಡ ವ್ಯಾಪಾರ ಬಂದರಾಗಿದ್ದು ನದಿ ಅಥವಾ ಸಮುದ್ರದ ದಂಡಯ ಮೇಲೆ ನೆಲೆಸಿತ್ತು. ಧೋಣಮುಖವೂ ಕೂಡ ನದೀ ತೀರದ ಅಥವಾ ಸಮುದ್ರ ತೀರದ ಮೇಲೆ ನೆಲೆಸಿದ್ದ ಮಾರುಕಟ್ಟೆ ಪಟ್ಟಣವಾಗಿತ್ತು. ಈ ನಗರಕ್ಕೆ ವ್ಯಾಪಾರಿಗಳು ಭೇಟಿ ನೀಡುತ್ತಿದ್ದರು. ಖೇತವೂ ಕೂಡ ನದಿಯ ಹತ್ತಿರದ ಒಂದು ಬಯಲು ಪ್ರದೇಶ ಅಥವಾ ಅರಣ್ಯದಲ್ಲಿ ನೆಲೆಸಿದ್ದ ಗೋಡೆಗಳನ್ನು ಹೊಂದಿದ್ದ ಸಣ್ಣ ಪಟ್ಟಣವಾಗಿತ್ತು. ನಿಗಮವೂ ಕೂಡ ಮಾರುಕಟ್ಟೆ ಪಟ್ಟಣವಾಗಿತ್ತು. ಆದರೆ ಅದು ಪ್ರಮುಖವಾಗಿ ಕುಶಲಕರ್ಮಿಗಳನ್ನು ಹೊಂದಿತ್ತು. ರಾಜಧಾನಿಯ ಇನ್ನೊಂದು ಜಿಲ್ಲೆಯ ಮಾದರಿಯ ಪಟ್ಟಣವಾಗಿದ್ದು ವಿಸ್ತಾರವಾದ ಯೋಜನೆಯನ್ನು ಒಳಗೊಂಡಿತ್ತು. ಇದಕ್ಕೆ ಗೋಡೆಗಳು ಹಾಗೂ ಕೊತ್ತಲುಗಳ ಪಟ್ಟಿಯಿದ್ದು ಕಂದಕಗಳು ಹಾಗೂ ಸೇನಾ ಹೊರನೆಲೆಗಳು ಇವುಗಳನ್ನು ಸುತ್ತುವರೆದಿದ್ದವು. ರಾಜಧಾನಿಯ ಒಳಗೆ ಅರಮನೆ ಉನ್ನತ ಅಧಿಕಾರಿಗಳು, ಸೈನಿಕರ ವಸತಿ ನೆಲೆಗಳು ಮತ್ತು ಅಂಗಡಿಗಳಿಗಾಗಿ ಪ್ರತ್ಯೇಕವಾದ ಸ್ಥಳಗಳನ್ನು ನೀಡಲಾಗಿತ್ತು.

ಇದು ಕೆರೆಗಳು ಕೋಟೆಗಳು, ದೇವಾಲಯಗಳು, ಮಧ್ಯದಂಗಡಿಗಳು ಹಾಗೂ ವೇಶ್ಯಾಗೃಹಗಳನ್ನು ಹೊಂದಿತ್ತು. ದುರ್ಗವು ಕೋಟೆಯನ್ನು ಹೊಂದಿದ ಪಟ್ಟಣವಾಗಿದ್ದು, ಯುದ್ಧ ಸಾಮಗ್ರಿಗಳನ್ನು ಶೇಖರಿಸಿಡುವ ಶಾಲೆಯನ್ನು ಹೊಂದಿತ್ತು. ಹಾಗೆಯೇ ಆಹಾರ ಪದಾರ್ಥಗಳಿಂದ ತುಂಬಿತ್ತು. ಇದು ಮಂತ್ರಿಗಳು ಹಾಗೂ ರಾಜರಿಬ್ಬರ ಕೇಂದ್ರಸ್ಥಾನವಾಗಿದ್ದಿತು ಹಾಗೂ ಸೇನಾ ಪಟ್ಟಣವೂ ಆಗಿತ್ತು. ಕೋಟೆಗಳನ್ನು ಮೊದಲು ಎಂಟು ವರ್ಗಗಳಾಗಿ ವರ್ಗೀಕರಿಸಲಾಗುತ್ತದೆ. ಈ ಕೋಟೆಗಳನ್ನು ಅವುಗಳ ಸ್ಥಾನಕ್ಕೆ ತಕ್ಕಂತೆ ಮತ್ತಷ್ಟು ವಿಭಾಗಗಳಾಗಿ ವಿಂಗಡಿಸಲಾಗಿದೆ. ಹಲವು ಸೇನಾ ವಸಾಹತುಗಳೂ ಕೂಡ ಬಹಳ ಪ್ರಸಿದ್ಧವಾಗಿದ್ದವು. ಈ ರೀತಿಯಾಗಿ ಶಿಬಿರ ಎಂಬುದು ರಾಜನ ಸೇನೆಯ ವಿಜಯದ ಶಿಬಿರವಾಗಿತ್ತು. ಸೇನ ಮುಖ ಎಂಬುದು ಒಂದು ಸೇನಾ ನೆಲೆಯಾಗಿದ್ದು ಇದೂ ಒಂದು ಉಪನಗರ ಪಟ್ಟಣವಾಗಿತ್ತು. ಇದು ಮುಖ್ಯ ನಗರಕ್ಕಿಂತ ಸ್ವಲ್ಪ ದೂರದಲ್ಲಿತ್ತು ಹಾಗೂ ಅದನ್ನು ರಕ್ಷಿಸುತ್ತಿತ್ತು. ಸ್ಥಾನಿಯವು ಸ್ಥಳೀಯ ಕೋಟೆಯ ನಗರವಾಗಿದ್ದು ರಾಜನ ಕ್ಷೇತ್ರವಾಗಿದ್ದಿತು ಹಾಗೂ ಕಾವಲು ಪಡೆ ಮತ್ತು ಕೋಟೆಯ ರಕ್ಷಣಾಪಡೆಯನ್ನು ಹೊಂದಿತ್ತು. ಆದರೆ ಇದು ಶಾಶ್ವತವಾದ ರಾಜಧಾನಿಯಾಗಿರಲಿಲ್ಲ. ಇನ್ನೊಂದು ರೀತಿಯ ಪಟ್ಟಣವು ಶಿಕ್ಷಣದ ಉದ್ದೇಶವನ್ನು ಹೊಂದಿ ನಿರ್ಮಿಸಿದ್ದುದಾಗಿತ್ತು. ಇದರಲ್ಲಿ ಗುರುಗಳು ಹಾಗೂ ಶಿಷ್ಯರಿದ್ದರು. ಇನ್ನೊಂದು ವರ್ಗದಲ್ಲಿ ದೇವಾಲಯ ಪಟ್ಟಣಗಳಿದ್ದವು. ಇವುಗಳು ತಮ್ಮದೇ ಆದ ವೈಶಿಷ್ಟ್ಯತೆಗಳನ್ನು ಹೊಂದಿದ್ದವು. ದೇವಾಲಯ ಪಟ್ಟಣಗಳ ಜೊತೆಗೆ ಯಾತ್ರಿಕರನ್ನು ಆಕರ್ಷಿಸುವ ಪವಿತ್ರ ನಗರಗಳೂ ಇದ್ದವು. "ಮಾಯಾಮಾತಾ" ಪ್ರಕಾರ ಹದಿನಾಲ್ಕು ವಿವಿಧ ಹಳ್ಳಿಗಳು, ಪಟ್ಟಣಗಳು ಹಾಗೂ ಕೋಟೆಗಳು ಇದ್ದವು. ಕೆಲವೊಮ್ಮೆ ಈ ವರ್ಗೀಕರಣವನ್ನು ಧ್ವಜ ಅಥವಾ ಆ ಸ್ಥಳದ ಬ್ರಾಹ್ಮಣ ನಿವಾಸಿಗಳ ಸಂಖ್ಯೆಯ ಆಧಾರದ ಮೇಲೆ ಅಥವಾ ಇನ್ನೂ ಕೆಲವೊಮ್ಮೆ ಅಲ್ಲಿನ ಸ್ಥಳದ ಆಧಾರದ ಮೇಲೆ ಅಥವಾ ಆ ಜಾಗದ ಪರಿಧಿಯ ಮೇಲೆ ಮಾಡಲಾಗುತ್ತಿತ್ತು.[25]

### 3.7 ಮಧ್ಯಕಾಲೀನ ನಗರ

ಮಧ್ಯಕಾಲೀನ ಯುಗದಲ್ಲಿ ಸಾಮಾನ್ಯವಾಗಿ ನಗರಗಳು ದೇವಾಲಯ ಮಾರುಕಟ್ಟೆ ಹಾಗೂ ಬಗೆ ಬಗೆಯ ವೃತ್ತಿಗಳ ಜನಸಮೂಹವನ್ನು ಹೊಂದಿದ್ದವು. ಗ್ರಾಮೀಣ ವಸಾಹತುಗಳಿಗಿಂತ ಗಾತ್ರ, ಜನಸಾಂಧ್ರತೆ ಹಾಗೂ ವೈವಿಧ್ಯತೆಯಲ್ಲಿ ಭಿನ್ನವಾಗಿದ್ದ ಈ ಸ್ಥಳಗಳು ತಮ್ಮ ಸುತ್ತಮುತ್ತಲ ವಾತಾವರಣಕ್ಕಿಂತ ವಿಭಿನ್ನವಾದ ತಮ್ಮದೇ ಆದ ವಿಶಿಷ್ಟ ಲಕ್ಷಣಗಳನ್ನು ಬೆಳೆಸಿಕೊಂಡಿದ್ದವು. ಆದ ಕಾರಣ ಈ ಸ್ಥಳಗಳು ನಗರ ಕೇಂದ್ರಗಳಾಗಿ ಗುರುತಿಸಿಕೊಳ್ಳುವ ಅರ್ಹತೆಯನ್ನು ಪಡೆದವು.

ಮಧ್ಯಕಾಲೀನ ಭಾರತೀಯ ನಗರವು ಹೆಚ್ಚು ಜನವಸತಿ ಹೊಂದಿದ ಬಹಳ ಕಿರಿದಾದ ಸ್ಥಳದೊಂದಿಗೆ ಒಂದು ಆಡಳಿತ ಅಂಗ ಹಾಗೂ ವ್ಯಾಪಾರ ಮತ್ತು ಕೈಗಾರಿಕೆಯನ್ನು ತಮ್ಮ ಆರ್ಥಿಕ ಉತ್ಪಾದಕ ಚಟುವಟಿಕೆಗಳು ಎಂದು ತಿಳಿದಿದ್ದ ಸ್ಥಳ ಎಂದು ಹೇಳಬಹುದು.[26] ಸಮಕಾಲೀನ ಆಧಾರಗಳನ್ನು ಅಧ್ಯಯನ ಮಾಡುವುದರಿಂದ ನಗರ ಕೇಂದ್ರಗಳ ಹುಟ್ಟು ಹಾಗೂ ಬೆಳವಣಿಗೆಗೆ ಕಾರಣವಾಗುತ್ತಿರುವ ಕೆಲವು ಕ್ಷೇತ್ರಗಳಲ್ಲಿ ಸಾಮಾಜಿಕ ಹಾಗೂ ಆರ್ಥಿಕ ಶಕ್ತಿಗಳ ಪಾತ್ರವನ್ನು ಗುರುತಿಸುವುದು ಬಹಳ ಸುಲಭವಾಗುತ್ತದೆ. ಇಂತಹ ಸನ್ನಿವೇಶದಲ್ಲಿ ನಗರೀಕರಣವು ಚಲನೆಯ ಪ್ರಕ್ರಿಯೆಯಾಗಿ ಹಲವು ಪರಿವರ್ತನೆಗಳನ್ನು ಉಂಟು ಮಾಡಿತು. ಕೃಷಿಯಲ್ಲಿನ ಅಭ್ಯುದಯ, ಬೆಳೆಯುತ್ತಿರುವ ವ್ಯಾಪಾರ ಹಾಗೂ ವಾಣಿಜ್ಯ ನಾಣ್ಯಗಳ ಚಲಾವಣೆಯಲ್ಲಿನ ಏರಿಕೆ, ಸಾರಿಗೆ ಹಾಗೂ ಸಂಪರ್ಕಗಳ ಉತ್ತಮ ನಿರ್ವಹಣೆ, ಗ್ರಾಮಗಳನ್ನು ನಗರಗಳನ್ನಾಗಿ ಪರಿವರ್ತಿಸುವುದು, ಜನವಲಸೆ, ಸಮಾಜದಲ್ಲಿ ಸಂಘರ್ಷ ಹಾಗೂ ಉದ್ವೇಗ ಇವುಗಳೆಲ್ಲವೂ ನಗರೀಕರಣದ ಸೂಚಿಗಳಾಗಿವೆ. ಇದಕ್ಕೆ ಪ್ರತಿಯಾಗಿ ಇವುಗಳು ಅಭಿವೃದ್ಧಿ ಹೊಂದಿದ ಸಾಮಾಜಿಕ ಆರ್ಥಿಕ ಸ್ಥಿತಿಯನ್ನು ಸೂಚಿಸುತ್ತವೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ನಗರಗಳು ಅಭಿವೃದ್ಧಿಯ ಒಂದು ನಿರ್ದಿಷ್ಟ ಹಂತವನ್ನು ತಲುಪಿರುವ ಒಂದು ಜನಸಮೂಹದ ಸಾಮಾಜಿಕ ಹಾಗೂ ಆರ್ಥಿಕ ಜೀವನದಲ್ಲಿನ ಕೇಂದ್ರ ಬಿಂದು ಹಾಗೂ ಉತ್ಪಾದಕ ವಸ್ತುಗಳಾಗಿ ಅಸ್ಥತ್ವಕ್ಕೆ ಬಂದಿವೆ ಮತ್ತು ನಗರೀಕರಣ ಪ್ರಕ್ರಿಯೆಯು ಅಭಿವೃದ್ಧಿಯ ಸ್ಥಿತಿಯನ್ನು ತಲುಪುತ್ತದೆ.

### 3.8 ನಗರೀಕರಣ ಒಂದು ಪ್ರಕ್ರಿಯೆ

ಈ ನಗರೀಕರಣ ಪ್ರಕ್ರಿಯೆಯು ವಿವಿಧ ಸ್ಥರಗಳಲ್ಲಿ ಸಂಭವಿಸಬಹುದು. ಆಡಳಿತ, ರಾಜಕೀಯ, ವಾಣಿಜ್ಯ, ಧಾರ್ಮಿಕ ಇತ್ಯಾದಿ ಕೆಲವು ವರ್ಷಗಳ ಕಾಲ ಸಣ್ಣ ಹಾಗೂ ಮಧ್ಯಮ ಗಾತ್ರದ ನಗರಗಳ ಬೆಳವಣಿಗೆ ಸಾಗಿತ್ತು. ಅರಸರು ಅನೇಕ ಆಡಳಿತ ಹಾಗೂ ರಾಜಕೀಯ ಕೇಂದ್ರಗಳನ್ನು ಸ್ಥಾಪಿಸಿದರು. ರಾಜಕೀಯ ಕೇಂದ್ರಗಳ ಜಾಲವೇ ಇತ್ತು. ಇವುಗಳನ್ನು ರಾಜರು ಹಾಗೂ ಮುಖ್ಯಸ್ಥರ ನಡುವೆ ವೈವಾಹಿಕ ಸಂಬಂಧಗಳನ್ನು ಏರ್ಪಡಿಸುವ ಮೂಲಕ ಬಲಪಡಿಸಲಾಗಿತ್ತು. ಸಣ್ಣ ರಾಜಧಾನಿಗಳು ಹಾಗೂ ಸಣ್ಣ ಸಂಸ್ಥಾನಗಳೂ ಇದ್ದವು. ಇವುಗಳ ರಾಜಧಾನಿಯು ಗಾತ್ರದಲ್ಲಿ ಮಧ್ಯಮ ಗಾತ್ರದಿಂದ ಹಿಡಿದು ಸಣ್ಣ ನಗರಗಳೂ ಆಗಿದ್ದವು. ಈ ನಗರಗಳ ಸಾಮಾಜಿಕ ರಚನೆ ಹಾಗೂ ಸಂಘಟನೆಯನ್ನು ಸಾಮ್ರಾಜ್ಯದ ರಾಜಧಾನಿಗಳ ಸಾಲಿನಲ್ಲಿ ವಿನ್ಯಾಸಗೊಳಿಸಲಾಗಿತ್ತು. ಹಾಗೂ ಸಣ್ಣ ಪುಟ್ಟ ಅರಸರು, ಮಂತ್ರಿಗಳು ಮುಖ್ಯಸ್ಥರು ಮತ್ತು

ಭೂಮಾಲೀಕರು ರಾಜರು ಹಾಗೂ ಸಾಮ್ರಾಟರ ಉನ್ನತ ಜೀವನ ಶೈಲಿಯನ್ನು ಅಳವಡಿಸಿ ಕೊಂಡಿದ್ದರು.[27] ಸಂತೆಗಳ (ಮಾರುಕಟ್ಟೆ ನಗರಗಳು) ಬೆಳವಣಿಗೆಯು ವ್ಯಾಪಾರ, ವಾಣಿಜ್ಯಗಳು ವರ್ತಕರಿಗೆ ಹೆಚ್ಚು ರಕ್ಷಣೆ ಸಿಗುವ ರಾಜಧಾನಿಗಳಲ್ಲಿ ಕೇಂದ್ರೀಕೃತಗೊಳ್ಳಲು ಇಚ್ಛಿಸಿದರೂ ಒಂದು ಭಿನ್ನವಾದ ವಿಧಾನವನ್ನು ಅನುಸರಿಸಿತು. ಅವುಗಳನ್ನು ಸೂಕ್ತವಾದ ಹಿನ್ನಾಡು ಹಾಗೂ ಸಂಪರ್ಕ ಮಾರ್ಗಳ ಲಭ್ಯತೆಯ ಆಧಾರದ ಮೇಲೆ ಸಂಘಟಿಸಲಾಯಿತು. ಒಳನಾಡು ಸಂತೇಪೇಟೆಗಳು (ಮಾರುಕಟ್ಟೆ ನಗರಗಳು) ಹಾಗೂ ಸಮುದ್ರ ಬಂದರುಗಳೆರಡೂ ಇದ್ದವು. ಸಂತೆಪೇಟೆಗಳ ಉಳಿವು ಹಾಗೂ ಅಳಿವು, ರಾಜಕೀಯ ಭದ್ರತೆ ದೊರಕಿದರೂ, ಹಿನ್ನಾಡಿನ ಪದಾರ್ಥಗಳು, ಸಾರಿಗೆ ದೊಡ್ಡ ನಗರಗಳ ವ್ಯಾಪಾರ ಮತ್ತು ವಾಣಿಜ್ಯ ಹಾಗೂ ಸಮುದ್ರ ವ್ಯಾಪಾರದ ಮಾರ್ಗಗಳನ್ನು ಕಂಡು ಹಿಡಿಯುವುದರ ಆಧಾರದ ಮೇಲೆ ಇತ್ತು. ಆದರೂ ಕಾಳು ಪದಾರ್ಥಗಳು ಹಾಗೂ ಕೆಲವು ವಾಣಿಜ್ಯ ಸರಕಿನ ಒಳನಾಡಿನ ವ್ಯಾಪಾರದ ಮೇಲೆ ಅವಲಂಬಿತವಾಗಿದ್ದ ಅನೇಕ ಸಂತೆಪೇಟೆಗಳು ರಾಜಕೀಯ ಅಸ್ಥಿರತೆ ಹಾಗೂ ಅಂತರರಾಷ್ಟ್ರೀಯ ಮಾರುಕಟ್ಟೆಯ ಬದಲಾವಣೆಯ ಮಧ್ಯೆಯೂ, ನಿರಂತರವಾಗಿ ಕಾರ್ಯ ಸಾಗಿಸುತ್ತಾ ಹೋದವು. ವಿವಿಧ ವಲಯದ ಶ್ರೇಣಿಯ ವಾಣಿಜ್ಯ ಕೇಂದ್ರಗಳ ಒಂದು ಜಾಲವಿತ್ತು. ಸಂತೇಪೇಟೆಗಳು ಹಳ್ಳಿಗಳಿಗಿಂತ ಹೆಚ್ಚಿನ ಸಂಖ್ಯೆಯ ವರ್ತಕರು ಹಾಗೂ ಕುಶಲಕರ್ಮಿಗಳನ್ನು ಹೊಂದಿದ್ದವು. ಹೆಚ್ಚಿದ ಹಣದ ಚಲಾವಣೆಯಿಂದಾಗಿ ಕೆಲವು ನಗರ ಸರಕುಗಳ ಬಳಕೆ ಹಾಗೂ ನಗರ ಜೀವನ ಶೈಲಿಯನ್ನು ಅಳವಡಿಸಿಕೊಳ್ಳುವುದಕ್ಕೆ ನಾಂದಿಯಾಯಿತು. ಸಣ್ಣ ದೇವಾಲಯಗಳು ಹಾಗೂ ಪವಿತ್ರ ಪಟ್ಟಣಗಳ ಪುನರುತ್ಥಾನವೂ ನಡೆಯಿತು. ಇದರಂತೆಯೇ ವಿವಿಧ ಮತಧರ್ಮಗಳ ಪವಿತ್ರ ಭೂಗೋಳದ ಪುನರುತ್ಥಾನವೂ ಸಾಗಿತು. ಈ ನಗರಗಳು ವಿವಿಧ ಬಗೆಯ ಧಾರ್ಮಿಕ ಶರಣರನ್ನು ಹೊಂದಿದ ಚಿಕ್ಕ ಪ್ರದೇಶದ ಪವಿತ್ರ ಕೇಂದ್ರಗಳಾಗಿ ಕಾರ್ಯ ನಿರ್ವಹಿಸಿದವು. ಶ್ರೇಣಿ ವ್ಯವಸ್ಥೆಯ ಪವಿತ್ರ ಕೇಂದ್ರಗಳ ಹಾಗೂ ಗ್ರಾಮೀಣ ಜಾಲಗಳ ಭಾಗವಾಗಿ ನಿಪುಣರ ಒಂದು ಜಾಲವು ನಿರ್ಮಾಣವಾಯಿತು. ರಾಜಾಶ್ರಯದಲ್ಲಿ ದೊಡ್ಡ ಪವಿತ್ರ ನಗರಗಳು ಹಾಗೂ ರಾಜಧಾನಿಗಳಲ್ಲಿ ವಿಸ್ತಾರಗೊಂಡಿದ್ದ ಶ್ರೇಷ್ಠ ಸಂಪ್ರದಾಯಗಳ ಲಕ್ಷಣಗಳನ್ನು ಇದು ತನ್ನಲ್ಲಿ ಮೇಳೈಸಿಕೊಂಡಿತ್ತು.

ಈ ರೀತಿಯಾಗಿ ನಗರೀಕರಣವು ವಿವಿಧ ರೀತಿಗಳ ಹಾಗೂ ಹಂತಗಳಲ್ಲಿ ನಗರ ಕೇಂದ್ರಗಳ ಜಾಲದಲ್ಲಿ ಕಾರ್ಯೋನ್ಮುಖವಾಗಿದ್ದ ಒಂದು ಸಂಕೀರ್ಣ ಪ್ರಕ್ರಿಯೆಯಾಗಿತ್ತು. ಸಣ್ಣ ನಗರಗಳ ಬೆಳವಣಿಗೆಯು ದೊಡ್ಡ ನಗರಗಳಿಂದ ಸಣ್ಣ ನಗರಗಳಿಗೆ ನಗರ ಪ್ರಭಾವವನ್ನು ಬೀರಲು

ಸೂಕ್ತವಾದ ಅಡಿಪಾಯವನ್ನು ಒದಗಿಸಿಕೊಟ್ಟಿತು. ಸಣ್ಣ ನಗರಗಳ ಮೂಲಕ ಹಳ್ಳಿಗರು ನಗರ ಜೀವನ ಶೈಲಿಗಳ ರುಚಿಯನ್ನು ಕಂಡರು. ಈ ತೆರನದ ಜಾಲದಿಂದಾಗಿ ನಗರದ ಸಾಮಾಜಿಕ ರಚನೆ ಹಾಗೂ ಸಂಘಟನೆಯೂ ಕೂಡ ಗ್ರಾಮೀಣ ಜನಜೀವನದ ಮತ್ತು ಸಣ್ಣ ಸಂಪ್ರದಾಯದ ಲಕ್ಷಣಗಳನ್ನೂ ಪಡೆದವು.

### 3.9 ಹಳ್ಳಿ ಮತ್ತು ಪಟ್ಟಣ ವ್ಯತ್ಯಾಸ

ಈ ಅಧ್ಯಯನಕ್ಕೆ ಸಂಬಂಧಿಸಿದ ಇನ್ನೊಂದು ಸಮಸ್ಯೆಯೆಂದರೆ (ಗ್ರಾಮೀಣ ಪ್ರದೇಶಗಳು) ಹಳ್ಳಿಗಳು ನಗರಗಳಿಗಿಂತ ಭಿನ್ನ ಎಂಬುವ ಅಂಶವಗಿದೆ. ಒಂದು ಪಟ್ಟಣ ಅಥವಾ ನಗರ ಕೇಂದ್ರವು ಹಳ್ಳಿ ಅಥವಾ ಗ್ರಾಮೀಣ ವಸಾಹತುವಿಗಿಂತ ವಿಭಿನ್ನವಾಗಿದೆ. ಗಾತ್ರ, ಸಾಂಧ್ರತೆ ಹಾಗೂ ವೃತ್ತಿಗಳಲ್ಲಿನ ವೈವಿಧ್ಯತೆಗಳ ದೃಷ್ಟಿಯಲ್ಲಿ ಒಂದು ಪಟ್ಟಣವು ಒಂದು ಹಳ್ಳಿಗಿಂತ ಭಿನ್ನವಾಗಿರುತ್ತದೆ. ಈ ಸಂಬಂಧವಾಗಿ ನಗರ ಅಧ್ಯಯನಗಳಲ್ಲಿ ದ್ವಿಭಜನ ಅಧ್ಯಯನವನ್ನು ಅನುಸರಿಸಬೇಕೇ ಅಥವಾ ಅವಿಚ್ಛಿನ್ನ ವಿಧಾನವನ್ನು ಅನುಸರಿಸಬೇಕೇ ಎಂಬುದು ಚರ್ಚಾಸ್ಪದವಾಗಿದೆ.[28] ಪೋಕುಕ್ ಪ್ರಕಾರ ಯಾವುದೇ ಗ್ರಾಮೀಣ ನಗರ ವಿರೋಧಿಗಳಾಗಲೀ ಅಥವಾ ಗ್ರಾಮೀಣನಗರ ದ್ವಿಭಜನೆಯಾಗಲೀ ನಡೆನುಡಿಯಲ್ಲಿ ಪೂರ್ವದ ಸಮಾಜಗಳಲ್ಲಿ ಕಂಡುಬರುವುದಿಲ್ಲ. ಮುಂದೆ ಹಳ್ಳಿ ಹಾಗೂ ಸಾಂಪ್ರದಾಯಿಕ ನಗರವೆರಡು ಒಂದೇ ನಾಗರೀಕತೆಯ ಅಂಗಗಳಾಗಿರುವುದರಿಂದ ಭಾರತದಲ್ಲಿ ಇವುಗಳ ನಡುವೆ ಯಾವುದೇ ವಿಭಜನೆ ಇಲ್ಲ ಎಂದು ವಾದಿಸಲಾಗಿದೆ.[29]

ಎಸ್.ಪಿ.ಮಿಶ್ರಾರವರ ಪ್ರಕಾರ ಮೂಲಭೂತವಾಗಿ ಕೃಷಿ ಆಧಾರಿತ ಆರ್ಥಿಕತೆಯಲ್ಲಿ ಗ್ರಾಮೀಣ ನಗರ ಅಸ್ತಿತ್ವವು ಬಹಳ ಪ್ರಮುಖವಾಗಿದೆ. ಹಲವು ವಿಧಗಳಲ್ಲಿ ಭಾರತೀಯ ನಗರವು ಗ್ರಾಮಗಳ ವಿಸ್ತರಣೆಯಾಗಿದೆ ಹಾಗೂ ಈ ಪ್ರಕ್ರಿಯೆಯಲ್ಲಿ ಅದು ಸಾಮಾಜಿಕ ಏಕತೆಗಳು ಹಾಗೂ ಪ್ರವೃತ್ತಿಗಳನ್ನು ಹೊಂದಿದೆ.

ನಗರದ ಆರ್ಥಿಕ ಚಟುವಟಿಕೆಗಳು ಗ್ರಾಮಗಳಲ್ಲಿ ಆರಂಭಗೊಂಡ ಚಟುವಟಿಕೆಗಳ ವಿಸ್ತರಣೆ ಮಾತ್ರವಾಗಿತ್ತು. ಇವುಗಳ ಸಂಬಂಧಗಳು ಎಷ್ಟು ನಿಕಟ ಹಾಗೂ ವ್ಯಾಪಕವೆಂದರೆ ನಗರವನ್ನು ಅಸ್ತಿತ್ವಕ್ಕೆ ತಂದ ಪ್ರದೇಶ ಅಥವಾ ಅದರ ಆರ್ಥಿಕ ಚಟುವಟಿಕೆಗಳನ್ನು ಬೆಳೆಯಲು ಸಹಾಯ

ಮಾಡಿದ ಪ್ರದೇಶವನ್ನು ಬಿಟ್ಟು ಕೇವಲ ನಗರವನ್ನು ನೋಡುವುದು ನಮ್ಮ ಸಮೀಪ ದೃಷ್ಟಿ ದೋಷಕ್ಕೆ ಉದಾಹರಣೆಯಾಗಿದೆ.[30]

ಮತ್ತೊಂದು ಸನ್ನಿವೇಶದಲ್ಲಿ ನಗರ ಸಮುದಾಯವು ಆರ್ಥಿಕ ಹಾಗೂ ಸಾಮಾಜಿಕ ಸಾಧನಗಳಿಂದ ಹಾಗೂ ನಾಗರೀಕತೆಯ ಸಾಂಸ್ಕೃತಿಕ ಪರಿಸರದಿಂದ ನಿರ್ಮಾಣ ಮಾಡಲ್ಪಟ್ಟು ದೊಡ್ಡ ನಗರದಲ್ಲಿನ ಒಂದು ಉಪವ್ಯವಸ್ಥೆಯಾಗಿದೆ ಎಂದು ಹೇಳಲಾಗಿದೆ. ಇದು ಈ ಪರಿಪೂರ್ಣತೆಯನ್ನು ಪ್ರತಿಬಿಂಬಿಸುತ್ತದೆ ಹಾಗೂ ಅದರೊಳಗೆ ಕಾರ್ಯ ನಿರ್ವಹಿಸುತ್ತದೆ.[31] ಇದರ ಜೊತೆಗೆ ಭಾರತೀಯ ನಿರ್ಮಾಣವು ನಗರ ಹಾಗೂ ಗ್ರಾಮದ ನಡುವೆ ಯಾವುದೇ ನ್ಯಾಯಾಂಗ ವ್ಯತ್ಯಾಸವನ್ನು ಹೊಂದಿರಲಿಲ್ಲ.[32] ಇನ್ನೊಂದು ಪ್ರೋತ್ಸಾಹದಾಯಕ ಅಭಿಪ್ರಾಯವು ಪಿ.ಕೆ.ಆಚಾರ್ಯರಿಂದ ಮಾಡಲ್ಪಟ್ಟಿದೆ. ಅವರು ಬರೆಯುವಂತೆ "ಮಾನಸಾರ ಪ್ರಕಾರ ಹಳ್ಳಿ", ನಗರ ಹಾಗೂ ಕೋಟೆಯ ಮಧ್ಯೆ ಹೆಚ್ಚು ವ್ಯತ್ಯಾಸವಿಲ್ಲ. ನಗರವು ಗ್ರಾಮದ ವಿಸ್ತರಣೆಯಾಗಿದೆ.[33]

ಆದರೆ (ಸಂಶೋಧಕರು) ವಿದ್ವಾಂಸರು ವ್ಯಕ್ತಪಡಿಸಿರುವ ಮೇಲಿನ ಅಭಿಪ್ರಾಯಗಳು ಹಳ್ಳಿ ಹಾಗೂ ಸಾಂಪ್ರದಾಯಿಕ ನಗರದ ನಡುವಿನ ಸಾಮರಸ್ಯತೆಯ ಅತಿಯಾದ ಸರಳೀಕರಣವಷ್ಟೆ. ಧರ್ಮ, ಜಾತಿ ಹಾಗೂ ಬಂಧುತ್ವಗಳು ಹಳ್ಳಿಗಳು ಹಾಗೂ ನಗರಗಳೆರಡರಲ್ಲೂ ಸಾಮಾಜಿಕ ಸಂಘಟನೆಯ ಅಡಿಪಾಯಗಳಿಂದರೂ ಎರಡೂ ಸನ್ನಿವೇಶಗಳಲ್ಲಿನ ಇವುಗಳ ಕಾರ್ಯ ವೈಖರಿಯಲ್ಲಿ ಬಹಳ ಪ್ರಮುಖವಾದ ವ್ಯತ್ಯಾಸಗಳಿವೆ. ಸಾಂಪ್ರದಾಯಿಕ ನಗರ ಸನ್ನಿವೇಶದಲ್ಲಿ ಸಾಂಸ್ಥಿಕ ಚೌಕಟ್ಟು ಹಾಗೂ ನಿಯಂತ್ರಣಗಳಲ್ಲಿ ಕಾರ್ಯೋನ್ಮುಖವಾಗಿದ್ದ ಧರ್ಮ, ಜಾತಿ ಹಾಗೂ ಬಂಧುತ್ವಗಳು ಗ್ರಾಮಗಳಲ್ಲಿ ಇವುವವುಗಳಿಗಿಂತ ಭಿನ್ನವಾಗಿದೆ. ಆದ್ದರಿಂದ ಸಾಂಪ್ರದಾಯಿಕ ಭಾರತದಲ್ಲಿ ಹಳ್ಳಿ ಹಾಗೂ ನಗರದ ನಡುವಿನ ವಿನ್ಯಾಸವು ಮುಂದುವರೆದರೂ ಸ್ಪಷ್ಟವಾದ ಸಂಘಟನಾ ವ್ಯತ್ಯಾಸಗಳಿದ್ದವು ಎಂಬ ಅಭಿಪ್ರಾಯವು ಸತ್ಯವಾಗುತ್ತದೆ.[34]

ಆರ್ಥಿಕ ದೃಷ್ಟಿಯಲ್ಲಿ ನೋಡಿದಾಗ ಹಳ್ಳಿ ಹಾಗೂ ನಗರದ ನಡುವಿನ ವಿಶಿಷ್ಟ ಅಂಶವೆಂದರೆ ಹಳ್ಳಿಯ ಮುಖ್ಯವಾಗಿ ತನ್ನ ಸ್ವಂತ ಉತ್ಪಾದನೆಗೆ ತನ್ನದೇ ಆದ ಪೂರೈಕೆಯನ್ನು ಅವಲಂಬಿಸಿತ್ತು. ಆದರೆ ಇದಕ್ಕೆ ಭಿನ್ನವಾಗಿ ನಗರವು ಜೀವನ ನಿರ್ವಹಣಾ ಸಾಮಗ್ರಿಗಳ ಹೊರಗಿನ ನಿರಂತರ ಪೂರೈಕೆಯ ಮೇಲೆ ಹೆಚ್ಚಾಗಿ ಅವಲಂಬಿತವಾಗಿತ್ತು. ಈ ಅವಲಂಬನೆಗಳು ಹಲವಾರು ಪ್ರಮಾಣ

ಗಳಿದ್ದವು. ಕೆಲವು ನಗರಗಳು ಬಹುಶಃ ದೊಡ್ಡ ಹಳ್ಳಿಗಳಿಗಿಂತೇನು ಉತ್ತಮವಾಗಿರಲಿಲ್ಲ. ಆದರೂ ಹಳ್ಳಿ ಹಾಗೂ ನಗರಗಳ ನಡುವಿನ ವ್ಯತ್ಯಾಸವನ್ನು ಸಾಮಾನ್ಯವಾಗಿ ಒಪ್ಪಿಕೊಳ್ಳಲಾಗುತ್ತದೆ. ಎರಡನೆಯದಾಗಿ ನಗರಗಳಲ್ಲಿ ಕರಕುಶಲ ವಸ್ತುಗಳನ್ನು ನಿರ್ಮಿಸಲು ಆಸಕ್ತರಾದ ಅಪಾರ ಜನಸ್ತೋಮವಿತ್ತು. ಇವುಗಳನ್ನು ಸ್ಥಳೀಯ ಬಳಕೆಗಾಗಿ ಉತ್ಪಾದಿಸುತ್ತಿರಲಿಲ್ಲ. ಆದರೆ ದೊಡ್ಡ ಮಾರುಕಟ್ಟೆಗಾಗಿ ತಯಾರಿಸಲಾಗುತ್ತಿತ್ತು. ಆಹಾರದ ಉತ್ಪಾದಕರಾಗಿ ಕೃಷಿಯು ಗ್ರಾಮೀಣ ಬಂಧುಗಳ ಪ್ರಮುಖ ಕಸುಬಾಗುತ್ತದೆ. ಬೇರೆ ಕಸುಬುಗಳು ಇರುವುದೇ ಆದರಲ್ಲಿ ಅವುಗಳ ಕೃಷಿಗೆ ಅಧೀನವಾಗಿರುತ್ತವೆ. ಕೆಲವೊಮ್ಮೆ ಹಳ್ಳಿಯಲ್ಲಿ ಸ್ಥಳೀಯ ಮಾರುಕಟ್ಟೆ ಇದ್ದಿರಬಹುದು ಆದರೆ ಅದು ಹೆಚ್ಚಾಗಿ ಪರಾವಲಂಬಿ ಸ್ಥಿತಿಯಲ್ಲಿ ಸಾಗುತ್ತಿರುತ್ತದೆ.

ಇನ್ನೊಂದೆಡೆಯಲ್ಲಿ ನಗರಗಳು ಕೃಷಿಗೆ ಮುಕ್ತವಾಗಿ ಜೀವಿಸುತ್ತವೆ. ಹಾಗೂ ನಗರವಾಸಿಗಳು ಕೃಷಿಯಲ್ಲದ ವೃತ್ತಿಗಳನ್ನು ಕೈಗೆತ್ತಿಕೊಳ್ಳುತ್ತಾರೆ. ವ್ಯಾಪಾರ ಹಾಗೂ ಉತ್ಪಾದನೆ, ವಾಣಿಜ್ಯ ಹಾಗೂ ಕುಶಲಕೈಗಾರಿಕೆಗಳು ನಗರವಾಸಿಗಳ ಪ್ರಮುಖ ಕಸುಬುಗಳು ಅವರು ಇತರೆ ತೃತೀಯ ಉದ್ಯೋಗಗಳನ್ನು ಬಯಸುತ್ತಾರೆ. ನಗರದ ಇನ್ನೊಂದು ವಿಶಿಷ್ಟ ವೈಶಿಷ್ಟವು ಮಾರುಕಟ್ಟೆಯ ಅಸ್ತಿತ್ವ ಹಾಗೂ ಉಳಿಯುವಿಕೆಯಾಗಿದೆ ಹಾಗೂ ಮಾರುಕಟ್ಟೆಯು ಅದರ ಪ್ರಮುಖ ವಸ್ತುಗಳಲ್ಲಿ ಒಂದಾಗಿದೆ.

ಸಮಕಾಲೀನ ಹಾಗೂ ಸಾಂಪ್ರದಾಯಿಕ ಸಾಹಿತ್ಯದಲ್ಲಿ ಹಳ್ಳಿ, ಪಟ್ಟಣ ಹಾಗೂ ನಗರಗಳನ್ನು ಗ್ರಾಮ, ಪುರ, ನಗರ ಹಾಗೂ ಪಟ್ಟಣವೆಂಬ ಪದಾವಳಿಗಳನ್ನು ಬಳಸುವುದರ ಮೂಲಕವಾಗಿ ಈ ಭಿನ್ನತೆಯನ್ನು ಅಳೆಯಲಾಗುತ್ತಿತ್ತು. ಕೆ.ಸಿ.ಜೈನ್ ರವರ ಪ್ರಕಾರ ಸಂಸ್ಕೃತ ಸಾಹಿತ್ಯದಲ್ಲಿ ನಗರ, ಪುರ ಪುರಿ, ಪಟ್ಟಣವೆಂಬ ಪದಗಳನ್ನು ಅವುಗಳು ಬದಲಾಗದಂತೆ ಕೇವಲ ನಗರ ಪ್ರದೇಶಗಳಿಗೆ ಮಾತ್ರ ಅಳವಡಿಸಲಾಗಿದೆ. ಆದ್ದರಿಂದ ಈ ಪದಗಳಲ್ಲಿ ಯಾವುದೊಂದನ್ನು ಹೊಂದಿರುವ ಪ್ರದೇಶ ಪ್ರದೇಶಗಳು ಪಟ್ಟಣ ಅಥವಾ ನಗರವಾಗಿರುತ್ತದೆ ಎಂದು ಅಭಿಪ್ರಾಯ ಪಡುವುದರಲ್ಲಿ ಸಮಂಜಸತೆಯಿದೆ.[35]

ಆ ಕಾಲದ ಪ್ರವಾಸಿಗರು ಕೂಡ ನಗರಗಳು, ಪಟ್ಟಣಗಳು ಹಾಗೂ ಹಳ್ಳಿಗಳ ಮಧ್ಯೆ ಅಂತರವನ್ನು ಮಾಡುತ್ತಾರೆ. ಮಾಧವನ ಪ್ರಕಾರ ಒಂದು ಪಟ್ಟಣವು ದೊಡ್ಡ ಗಾತ್ರದ ಜನಸಂಖ್ಯೆಯನ್ನು ಹೊಂದಿತ್ತು.[36]

ಮಿತಾಕ್ಷರನು ವಿವರಿಸುವಂತೆ ನಗರವು ಅಪಾರ ಜನಸಂಖ್ಯೆಯ ಸಮೂಹವಾಗಿತ್ತು ಹಾಗೂ ಪಟ್ಟಣವು ಹಳ್ಳಿಯ ಎರಡರಷ್ಟಿತ್ತು ಹಾಗೂ ನಗರವು ನಾಲ್ಕು ಪಟ್ಟು ದೊಡ್ಡದಾಗಿತ್ತು.[37] ಒಂದು ನೂರು ಧನುಸ್ (ಒಂದು ಮಾರಿನ ಅಳತೆ ಧನುಸ್) ಜಾಗವನ್ನು ಒಂದು ಹಳ್ಳಿ ಹಾಗೂ ಜಮೀನಿನ ನಡುವೆ ಬಿಡಬೇಕು. ಸಣ್ಣಪುಟ್ಟವಾದರೆ ಇನ್ನೂರು ಹಾಗೂ ನಗರವಾದರೆ ನಾಲ್ಕು ನೂರು ಧನುಸ್ ಜಾಗವನ್ನು ಬಿಡಬೇಕು.[38] ಮಾನಸಾರ ಪ್ರಕಾರ ಅತೀ ಸಣ್ಣ ಪಟ್ಟಣ ಕೇಂದ್ರದ ಪರಿಮಾಣಗಳು 100x200 ದಂಡಗಳು (ಒಂದು ಮಾರು ಅಳತೆ) ಹಾಗೆಯೇ ಅತೀ ದೊಡ್ಡ ನಗರದ ಪರಿಮಾಣಗಳು 7200x14400 ದಂಡಗಳು ಪಟ್ಟಣವೊಂದರಲ್ಲಿ ಹನ್ನೆರಡು ದೊಡ್ಡ ಬೀದಿಗಳಿರಬೇಕು.[39]

ಅನುಕೂಲತೆಗಳು ಹಾಗೂ ಸೌಲಭ್ಯಗಳ ದೃಷ್ಟಿಯಲ್ಲಿ ನಗರವು ಹಳ್ಳಿಗಿಂತ ಉತ್ತಮವಾಗಿತ್ತು. ಸಮಕಾಲೀನ ಸಾಹಿತ್ಯದಲ್ಲಿ ಹಾಗೂ ವಿದೇಶಿ ಪ್ರವಾಸಿಗರು ಚಿತ್ರಿಸಿರುವ ವೈಭವ ಹಾಗೂ ಶ್ರೀಮಂತಿಕೆಯು ಈ ವಿಷಯದಲ್ಲಿ ನಗರಗಳು ಹಳ್ಳಿಗಳಿಗಿಂತ ಭಿನ್ನವಾಗಿದ್ದವೆಂಬುದನ್ನು ತೋರಿಸುತ್ತದೆ. ನಗರದಲ್ಲಿ ಮಾತ್ರ ಶಾಲೆಗಳು, ಆಸ್ಪತ್ರೆಗಳು ಹಾಗೂ ಇತರೆ ಸೌಲಭ್ಯಗಳನ್ನು ನೋಡಬಹುದಾಗಿದೆ.[40]

ಬೊಟೆರ್ ನಗರವನ್ನು ಈ ರೀತಿಯಾಗಿ ವಿವರಿಸುತ್ತಾನೆ. ಅದೊಂದು ಜನಗಳ ಸಮೂಹವಾಗಿದ್ದು ಒಂದೆಡೆ ಒಗ್ಗೂಡಿದ ಜನರ ಗುಂಪಾಗಿದೆ ಹಾಗೂ ಈ ಮೂಲಕ ಅವರು ಸಮೃದ್ಧ ಸುಖೀ ಜೀವನವನ್ನು ನಡೆಸುತ್ತಾರೆ.[41]

ಪ್ರಾಚೀನ ಹಾಗೂ ಮಧ್ಯಕಾಲೀನ ಯುಗಗಳಲ್ಲಿ ಪಟ್ಟಣಗಳು ಹಳ್ಳಿಗಿಂತ ಹೆಚ್ಚಾಗಿ ವ್ಯಾಪಾರವನ್ನು ಅಭಿವೃದ್ಧಿ ಪಡಿಸಿದರೂ ಪಟ್ಟಣಗಳ ಕೃಷಿ ಶೈಶಾವಸ್ಥೆಯ ಅನೇಕ ಲಕ್ಷಣಗಳನ್ನು ಹೊಂದಿದ್ದರು. ಅನೇಕ ಪಟ್ಟಣಗಳಲ್ಲಿ ಜನರು ಸುಮಾರು ಜಮೀನನ್ನು ಹೊಂದಿರುತ್ತಿದ್ದರೂ ಇದನ್ನು ತೋಟಗಳ ಜಮೀನಿಗಾಗಿ ಬಳಸಲಾಗುತ್ತಿತ್ತು ಹಾಗೂ ಪ್ರತೀ ಪಟ್ಟಣದ ಕೋಟೆಯ ಹೊರ ಭಾಗದಲ್ಲಿ ಅಥವಾ ಕೆಲವೊಮ್ಮೆ ಒಳಭಾಗದಲ್ಲೂ ಸಾಕಷ್ಟು ಪ್ರಮಾಣದ ವ್ಯವಸಾಯ ಯೋಗ್ಯ ಜಮೀನಿತ್ತು ಹಾಗೂ ಗೋಮಾಳವಿತ್ತು. ಪಟ್ಟಣಗಳು ಕೆಲವು ಕೃಷಿ ಲಕ್ಷಣಗಳನ್ನು ಹೊಂದಿದ್ದರೂ ನಗರ ಹಾಗೂ ಹಳ್ಳಿಯ ನಡುವಿನ ವ್ಯತ್ಯಾಸವನ್ನು ಸ್ಪಷ್ಟವಾಗಿ ನಿರೂಪಿಸಲಾಗಿತ್ತು.[42]

## ಅಧ್ಯಾಯ 4

### 4.1 ನಗರ ಕೇಂದ್ರಗಳ ಉದಯ

ನಗರ ಅಧ್ಯಯನವು ನಗರಗಳ ಉದಯಕ್ಕೆ ಕಾರಣಗಳು ಹಾಗೂ ನಗರ ಬೆಳವಣಿಗೆಯನ್ನು ನಿರ್ಧರಿಸಿದ ಅಂಶಗಳ ಪರಿಶೀಲನೆಯಿಂದ ಪ್ರಾರಂಭಗೊಳ್ಳುತ್ತದೆ. ಈ ನಗರ ಅಭಿವೃದ್ಧಿಯು ಬಹಳ ಸಂಕೀರ್ಣದ ಪ್ರಕ್ರಿಯೆಯಾಗಿದ್ದು ಯಾವುದೇ ಸರಳವಾದ ಅಥವಾ ಪ್ರತ್ಯೇಕವಾದ ವಿವರಣೆಯನ್ನು ನಿರಾಕರಿಸುತ್ತದೆ. ಆದ್ದರಿಂದ ಇದನ್ನು ಸಂಪೂರ್ಣವಾಗಿ ಸಾಮಾಜಿಕ ಚೌಕಟ್ಟಿನಲ್ಲಿ ಅಭ್ಯಾಸಿಸಬೇಕು.[43] ಮಧ್ಯಕಾಲೀನ ಯುಗಕ್ಕೆ ಸಂಬಂಧಿಸಿದಂತೆ ನಗರೀಕರಣದ ಪ್ರಕ್ರಿಯೆಯ ಒಂದು ವಿಶ್ಲೇಷಣೆಯು ನಗರ ಕೇಂದ್ರಗಳ ಉದಯ ಹಾಗೂ ನಗರೀಕರಣ ಪ್ರಕ್ರಿಯೆಯು ಪ್ರಗತಿಯ ಹಲವಾರು ಅಂಶಗಳ ಅನ್ಯೋನ್ಯ, ಕ್ರಿಯೆಯ ಫಲಿತಾಂಶವಾಗಿದೆ ಎಂಬುದನ್ನು ತೋರಿಸುತ್ತದೆ. ಹಳ್ಳಿಗಳು ನಗರಗಳಾಗಿ, ಹಳ್ಳಿಗರು ನಗರವಾಸಿಗಳಾಗಿ ಪರಿವರ್ತನೆ ಹೊಂದುವುದು ಒಂದು ಸಂಕೀರ್ಣ ಪ್ರಕ್ರಿಯೆಯಾಗಿದೆ. ಕೆಲವು ಇತಿಹಾಸಕಾರರು ಹೇಳುವ ಪ್ರಕಾರ ನಗರ ಬೆಳವಣಿಗೆಗೆ ಸಾಮಾಜಿಕ ಅಂಶವು ಕಾರಣವಾಗಿದೆ. ಇತರರು ಆರ್ಥಿಕ ಅಥವಾ ರಾಜಕೀಯ ಅಂಶಗಳು ಪ್ರಮುಖವಾಗಿದೆ ಎನ್ನುತ್ತಾರೆ.[44] ಸಾಮಾಜಿಕ ಸಿದ್ಧಾಂತಕಾರರಾದ ಮುಮಪ್ರೋಡ್ ಮತ್ತು ಸ್ಟೋಬರ್ಗ್‌ರು ನಗರ ಕೇಂದ್ರಗಳ ಉದಯದಲ್ಲಿ ರಾಜಕೀಯ ಶಕ್ತಿಯ ಪಾತ್ರವನ್ನು ಎತ್ತಿ ಹಿಡಿದಿದ್ದಾರೆ.

ಅವರ ಅಭಿಪ್ರಾಯದಂತೆ ನಗರಗಳಿಗೆ ಜನ್ಮ ನೀಡುವ ಸಮಾಜವನ್ನು ಸಾಮಾಜಿಕ ರಚನೆಯಲ್ಲಿ ಕಾರ್ಯವೆಸಗುವ ರಾಜಕೀಯ ಶಕ್ತಿ ಹಾಗೂ ರಾಜಕೀಯ ಪದ್ಧತಿಗಳ ಮೂಲಕವಾಗಿ ಅಭಿವೃದ್ಧಿಪಡಿಸಿ ನಿರ್ವಹಿಸಬಹುದು. ಇತರರನ್ನು ನೋಡಿಕೊಳ್ಳಲು ಸಾಕಷ್ಟು ಶಕ್ತಿ ಹಾಗೂ ನಿಪುಣತೆಯನ್ನು ಹೊಂದಿದ ಆಡಳಿತ ಗುಂಪಿರಬೇಕು.[45] ಆದರೆ ಸಾಮಾಜಿಕ, ಆರ್ಥಿಕ, ಅಂಶವಾಗಲೀ ಅಥವಾ ರಾಜಕೀಯ ಅಂಶವಾಗಲೀ, ಗ್ರಾಮೀಣ ವಸಾಹತುಗಳನ್ನು ನಗರ ವಸಾಹತುಗಳಿಗೆ ಪರಿವರ್ತಿಸಬಲ್ಲ ವ್ಯಯಕ್ತಿಕ ಶಕ್ತಿಯನ್ನು ಹೊಂದಿಲ್ಲ ಥಾಕೂರ್ ಪ್ರಕಾರ "ಒಂದು ಪ್ರತ್ಯೇಕ ಅಂಶವು ತನ್ನ ಕೋಶದಲ್ಲೇ ಸುತ್ತುವ ಹಾಗೂ ಪ್ರತಿಯಾಗಿ ಸಾಮಾಜಿಕ, ಆರ್ಥಿಕ, ಅಥವಾ ರಾಜಕೀಯವಾಗಲೀ ಇಡೀ ಸಮಾಜ ವ್ಯವಸ್ಥೆಯನ್ನು ಪ್ರಭಾವಗೊಳಿಸುವ ವ್ಯವಸ್ಥೆ, ಸಂಘಟನೆ ಅಥವಾ ಸಂಸ್ಥೆಯ ಹುಟ್ಟಿಗೆ ಖಂಡಿತವಾಗಿ ಸಮರ್ಥವಾಗಿರುವುದಿಲ್ಲ.[46] ರೈತನು ಹೆಚ್ಚುವರಿ ಉತ್ಪಾದನೆಯನ್ನು ಮಾಡದ ಹೊರತಾಗಿ ರೈತರ ತೆರಿಗೆಗಳ ಮೇಲೆ ಮೋಜು ಮಾಡುವ ರಾಜಕೀಯ ವ್ಯವಸ್ಥೆಯು ಅಸ್ಥಿತ್ವಕ್ಕೆ ಬರುವುದಿಲ್ಲ.

ಇದರ ಜೊತೆಗೆ ಹಳ್ಳಿಗಳಿಂದ ನಗರಗಳಿಗೆ ಹೆಚ್ಚುವರಿಯ ವಲಸೆಯನ್ನು ನೋಡಿಕೊಳ್ಳುವ ಒಂದು ವ್ಯವಸ್ಥೆ ಅನುಪಸ್ಥಿತಿ ಮಿಗುತೆಯು ಒಂದೆಡೆಯಿಂದ ಇನ್ನೊಂದೆಡೆಗೆ ವರ್ಗಾವಣೆ ಯಾವುದು ಅಸಾಧ್ಯವಾಗುವುದು ಹಾಗೂ ಇದು ಆರ್ಥಿಕ ಸ್ಥಗಿತತೆ ಮತ್ತು ನಗರಗಳ ಅವನತಿಗೆ ಕಾರಣವಾಗುತ್ತದೆ. ಈ ರೀತಿಯಾಗಿ ನಗರ ಬೆಳವಣಿಗೆ ಹಾಗೂ ನಿರ್ವಹಣೆಯಲ್ಲಿ ಆರ್ಥಿಕ ಸಾಮಾಜಿಕ ಹಾಗೂ ರಾಜಕೀಯ ಅಂಶಗಳು ಬಹಳ ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ.[47]

ಗ್ರಾಮೀಣ ವಸಾಹತುಗಳು ನಗರ ಕೇಂದ್ರಗಳಾಗಿ ಮಾರ್ಪಡು ಹೊಂದುವುದು ಒಂದೇ ಕಾಲದಲ್ಲಿ ಒಂದಕ್ಕಿಂತ ಹೆಚ್ಚು ಅಂಶಗಳು ತೊಡಗಿರುವ ಸಹಯೋಗದ ಪರಿಣಾಮವಾಗಿದೆ. ಆದ್ದರಿಂದ ಅವಶ್ಯಕವಾಗಿ ಆರ್ಥಿಕ ಅಂಶದ ಮೇಲೆ ಹೆಚ್ಚು ಒತ್ತನ್ನು ನೀಡಿ ನಗರೀಕರಣವನ್ನು ಉಂಟುಮಾಡುವ ಅಂಶಗಳ ಚರ್ಚೆಯು ಎಲ್ಲ ಶಕ್ಯ ಅಂಶಗಳಾದ ಸಾಮಾಜಿಕ, ರಾಜಕೀಯ, ಭೌಗೋಳಿಕ, ಧಾರ್ಮಿಕ ಹಾಗೂ ಇತರ ಅಂಶಗಳ ವಿಶ್ಲೇಷಣೆಯನ್ನು ಹೊಂದಬೇಕು. ಇದರ ಜೊತೆಗೆ ಪೂರ್ವದಲ್ಲಿ ನಗರ ಕೇಂದ್ರಗಳ ಹುಟ್ಟು ಯಾವುದೇ ಒಂದು ಗುಂಪಿನ ಕಾರಣಗಳಿಂದಾದುದಲ್ಲ. ಅವುಗಳು ವಿವಿಧ ಸನ್ನಿವೇಶಗಳಲ್ಲಿ ಉದ್ಭವಿಸಿದವು ಎಲ್ಲ ನಗರ ಕೇಂದ್ರಗಳಿಗೂ ಸಾಮಾನ್ಯವಾಗಿ ಬಹಳ ಮಹತ್ವವು ಹಾಗೂ ಪ್ರಮುಖವು ಆದ ಒಂದು ಅಂಶವೇನೆಂದರೆ ಮಿಗುತೆಯ ಅಸ್ತಿತ್ವವಾಗಿತ್ತು. ಆದರೂ ನಗರಗಳು ತಮ್ಮ ಅಸ್ತಿತ್ವಕ್ಕೆ ಅಗತ್ಯವಾದ ನೆಲೆಗಟ್ಟನ್ನು ಮಾರುಕಟ್ಟೆ, ರಾಜಕೀಯ ಚಟುವಟಿಕೆಗಳು ಧರ್ಮ ಇತ್ಯಾದಿಗಳಿಂದ ಪಡೆದವು. ನಗರ ಕೇಂದ್ರವೊಂದು ತನ್ನ ವೈಶಿಷ್ಟತೆಯನ್ನು ಅದರ ಪ್ರಬಲ ಅಸ್ತಿತ್ವದ ಅಂಶದಿಂದ ಪಡೆಯುತ್ತದೆ. ಇಂತಹ ಕೇಂದ್ರವು ಕೋಟೆಯೋ, ಆಡಳಿತ, ಕೇಂದ್ರವೂ ರಾಜಧಾನಿಯೋ, ವ್ಯಾಪಾರ, ಅಥವಾ ಧಾರ್ಮಿಕ ಕೇಂದ್ರವೋ ಆಗಿರಬಹುದು.

### 4.2 ಮಿಗುತೆ

ದೇಶೀಯ ಬರವಣಿಗೆಗಳು ಶಾಸನಗಳು ಹಾಗೂ ಸಮಕಾಲೀನ ದಾಖಲೆಗಳನ್ನು ಅಧ್ಯಯನ ಮಾಡುವುದರಿಂದ ಹೊಯ್ಸಳ ಕಾಲದಲ್ಲಿನ ನಗರೀಕರಣದ ಅಂಶಗಳ ಒಂದು ವಿಶ್ಲೇಷಣೆಯನ್ನು ಮಾಡಬಹುದು. ನಗರೀಕರಣದ ಮಹತ್ವವಾದ ಅಂಶವೆಂದು ಪರಿಗಣಿಸಲ್ಪಟ್ಟಿರುವ ಮಿಗುತೆಯು ಹೆಚ್ಚಿನ ಪ್ರಮಾಣದಲ್ಲಿ ಅಸ್ತಿತ್ವದಲ್ಲಿತ್ತು. ಇದು ನಗರಗಳ ಉದಯಕ್ಕೆ ಕಾರಣವಾಯಿತು. ಹಾಗೂ

ಅವುಗಳ ಅಭಿವೃದ್ಧಿಗೆ ಸಹಕಾರಿಯಾಯಿತು. ಹೊಯ್ಸಳ ಅರಸರು ದಕ್ಷಿಣ ಭಾರತದ ಇತಿಹಾಸದಲ್ಲಿ ಹಿಂದೆಂದೂ ಕಾಣದ ಸಂಪನ್ಮೂಲಗಳನ್ನು ಹೊಂದಿದ್ದರೆಂಬುದು ಶಂಕೆಗೆ ದೂರವಾದ ಮಾತಾಗಿದೆ.

ನಗರ ಸಮುದಾಯದ ಅಸ್ಥಿತ್ವವು ಹೆಚ್ಚುವರಿ ಆಹಾರ ಉತ್ಪಾದನೆಯ ಇರುವಿಕೆಯನ್ನು ಪೂರ್ವದಲ್ಲೇ ಊಹಿಸುತ್ತದೆ. ಕೃಷಿಕರು ನಗರದ ಅನುತ್ಪಾದಕ ಪ್ರಜೆಗಳ ನಿರ್ವಹಣೆಗಾಗಿ ಮಿಗುತೆಯನ್ನು ಉತ್ಪಾದಿಸಲು ಹೊರಟ ಕ್ಷಣದಲ್ಲೇ ನಗರಗಳು ತಲೆಯೆತ್ತಬಹುದು. ನಗರಗಳು ತಮ್ಮ ಎಲ್ಲ ಆಹಾರ ಪದಾರ್ಥಗಳನ್ನು ಉತ್ಪಾದಿಸುವುದಿಲ್ಲ. ಆದ್ದರಿಂದ ತಮ್ಮ ಅವಶ್ಯಕತೆಗಳಿಗೆ ಹಳ್ಳಿಗಳನ್ನು ಅವಲಂಬಿಸುತ್ತದೆ. ನಗರವಾಸಿಗಳು ಆರ್ಥಿಕ ಮಾರ್ಗಗಳಾದ ಕರಕುಶಲ ವಸ್ತು ತಯಾರಿಕೆ, ಕೈಗಾರಿಕೆ ಹಾಗೂ ವ್ಯಾಪಾರದಲ್ಲಿ ತಮ್ಮ ಸಮಯವನ್ನು ವ್ಯಯ ಮಾಡುತ್ತವೆ. ನಗರಗಳು ತಯಾರಿಸಿದ ಸರಕುಗಳಿಗೆ ಪ್ರತಿಯಾಗಿ ರೈತರಿಂದ ತಮ್ಮ ಆಹಾರವನ್ನು ಕೊಂಡುಕೊಳ್ಳುತ್ತವೆ. ಕೃಷಿ ಪದಾರ್ಥಗಳ ಮಿಗುತೆಯು ನಗರವನ್ನು ಸೇರುತ್ತವೆ. ಇದು ನಗರಗಳ ಹಿನ್ನಾಡಿನ ಸಂಬಂಧಕ್ಕೆ ಒಳಪಡಿಸುತ್ತದೆ.

ಭಟ್ಕಳದ ಬಳಿ ನಾನಾ ಬಗೆಯ ಸರಕುಗಳಾದ ಬಿಳಿ ಅಕ್ಕಿ, ಸಕ್ಕರೆ ಇತ್ಯಾದಿಗಳ ಬಾರೀ ವಹಿವಾಟು ಇತ್ತು. ಬಾರಕೂರ್ ಮಂಗಳೂರು ಬಳಿ ವ್ಯಾಪಾರಕ್ಕಾಗಿ ಸಾಕಷ್ಟು ಅಕ್ಕಿಯನ್ನು ತರಲಾಗುತ್ತಿತ್ತು. ಬೇಲೂರಿನ ಒಂದು ಶಾಸನದ ಪ್ರಕಾರ ಸಾಮ್ರಾಜ್ಯದ ಹಲವು ಭಾಗಗಳಲ್ಲಿದ್ದ ಬಹಳಷ್ಟು ನಗರಗಳು ವಿವಿಧ ನಮೂನೆಯ ಕೃಷಿ ಪದಾರ್ಥಗಳಾದ ಭತ್ತ, ರಾಗಿ, ಜೋಳ, ಬಾರ್ಲಿಸಾವೆ, ಗೋಧಿ, ಕಡಲೆ, ಎಳ್ಳು, ಅಗಸೆ, ಕುಸುಬೆ, ಹೆಸರುಕಾಳು, ಉದ್ದಿನಕಾಳು, ತೊಗರಿ, ಹುರುಳಿ, ಅಕ್ಕಿ, ಸಕ್ಕರೆ, ಎಣ್ಣೆ, ತುಪ್ಪ, ಉಪ್ಪು, ಬೆಲ್ಲ, ಅಡಿಕೆಕಾಯಿ, ವೀಳ್ಯದೆಲೆ, ಮೆಣಸು, ಅರಿಶಿನ, ಈರುಳ್ಳಿ, ಜೀರಿಗೆ, ಮೆಂತ್ಯ, ಸಾಸುವೆ ಮತ್ತು ಕಬ್ಬು ಇವುಗಳ ಸಂಗ್ರಹಣಾ ಹಾಗೂ ವಿತರಣಾ ಕೇಂದ್ರಗಳಾಗಿದ್ದವು.[48] ಹೊಯ್ಸಳ ಅರಸರು ಕೆಲವು ರೀತಿಯ ತೆರಿಗೆ ಹಾಗೂ ದಾನದತ್ತಿಗಳ ರೂಪದಲ್ಲಿ ಮಿಗುತೆಯನ್ನು ಯೋಗ್ಯವಾಗಿ ಬಳಸಿಕೊಳ್ಳುತ್ತಿದ್ದರು. ಕೆಲವು ಸಂದರ್ಭಗಳಲ್ಲಿ ನಗರದ ಚಟುವಟಿಕೆಗಳನ್ನು ಪ್ರೋತ್ಸಾಹಿಸಲು ಕೆಲವು ಕಂದಾಯಗಳನ್ನು ಬಳಸಿ ಕೊಳ್ಳಲಾಗುತ್ತಿತ್ತು. ಸಂತೆಗಳಲ್ಲಿ ಹಾಗೂ ರಾಜಧಾನಿಯ ಹೆಬ್ಬಾಗಿಲಿನ ಬಳಿ ಮತ್ತು ಠಾಣಾ ಬಳಿ ಸುಂಕವನ್ನು ವಿಧಿಸಲಾಗುತ್ತಿತ್ತು.[49] ಈ ರೀತಿಯಾಗಿ ಹೊಯ್ಸಳರ ಕಾಲದಲ್ಲಿ ಹೆಚ್ಚುವರಿ ಉತ್ಪಾದನೆಯು (ಮಿಗುತೆ) ಅಸ್ತಿತ್ವದಲ್ಲಿತ್ತು ಹಾಗೂ ಅದು ನಗರೀಕರಣದ ಪಾತ್ರದಲ್ಲಿ ಬಹಳ ಪ್ರಭಾವಿ ಅಂಶವಾಗಿತ್ತು.

### 4.4 ರಾಜಕೀಯ ಅಂಶ

#### 4.4.1 ಅರಸರ ನೀತಿ

ನಗರೀಕರಣದ ಮತ್ತೊಂದು ಅಂಶವೆಂದರೆ ರಾಜಕೀಯ ಅಂಶ ಹೆಚ್ಚುವರಿ ಉತ್ಪಾದನೆಯು ಅದರ ನಿರ್ವಹಣೆಯ ಸಮಸ್ಯೆಯನ್ನು ತನ್ನೊಂದಿಗೆ ಒಯ್ಯುತ್ತದೆ. ಹೆಚ್ಚುವರಿ ಉತ್ಪಾದನೆಯ ಸೃಷ್ಟಿಯು ಆರ್ಥಿಕ ಅವಶ್ಯಕತೆಯೆಂದರೆ ಅದರ ಸಮರ್ಥ ನಿರ್ವಹಣೆಯು ರಾಜಕೀಯ ಪರಿಣಾಮವಾಗಿದೆ. ಸೋಬರ್ಗ್ ಈ ರೀತಿ ಹೇಳುತ್ತಾನೆ. "ರೈತರು ಯಾವಾಗಲೂ ಸ್ವಪ್ರೇರಿತ ಹೆಚ್ಚುವರಿ ಉತ್ಪಾದನೆಯನ್ನು ಮಾಡಿ ನಗರವಾಸಿಗಳಿಗೆ ಒದಗಿಸಲಿಲ್ಲ.[50] ಅವನ ಪ್ರಕಾರ ರೈತ ಸಮುದಾಯದಿಂದ ತೆರಿಗೆಯ ಮೂಲಕ ಆಹಾರ ಆರ್ಥಿಕತೆಯನ್ನು ಪಡೆಯುವ ಒಂದು ರಾಜಕೀಯ ಅಂಗವು ಏರ್ಪಾಡಾಗಬೇಕು. ಹಾಗೂ ಇದು ನಗರದ ಕೃಷಿಯೇತರರಿಗೆ ವಿಶೇಷವಾಗಿ ಅಧಿಕಾರದಲ್ಲಿರುವ ಮೇಲ್ವರ್ಗದವರಿಗೆ ದೊರಕುವಂತೆ ಮಾಡಬೇಕು.[51] ಈ ಅಭಿಪ್ರಾಯವು ಆರ್ಥಿಕ ಅಂಶದ ಮೇಲೆ ರಾಜಕೀಯ ಅಂಶವು ಹೊಂದಿರುವ ಪ್ರಾಮುಖ್ಯತೆಯನ್ನು ಹೊರತುಪಡಿಸುತ್ತದೆ. ಈ ದೃಷ್ಟಿಯನ್ನು ನಿರ್ಲಕ್ಷಿಸಿ ನಾವು ಅಧಿಕ ಉತ್ಪಾದನೆಯು ನಗರೀಕರಣದ ಪ್ರಮುಖ ಅಂಶವಾಗಿದೆ ಎಂಬುದರ ಮೇಲೆ ಹೆಚ್ಚು ಒತ್ತನ್ನು ನೀಡಬಹುದು. ಏಕೆಂದರೆ ಸಾಮಾಜಿಕ ಹಾಗೂ ರಾಜಕೀಯ ರಚನೆಗಳು ಈ ಹೆಚ್ಚುವರಿಯ ಪರಿಣಾಮವಾಗಿರುವುದಲ್ಲದೆ ನಗರೀಕರಣ ಅವಶ್ಯಕವಾಗ ಸಾಮಗ್ರಿಯಿಂದ ಪೋಷಣೆಯನ್ನು ಪಡೆದಿದೆ.[52] ಈ ಅಂಶವು ನಮ್ಮನ್ನು ನಗರೀಕರಣವನ್ನು ಪ್ರೋತ್ಸಾಹಿಸುವಲ್ಲಿ ರಾಜಕೀಯ ಅಂಶದ ಪಾತ್ರವನ್ನು ಚರ್ಚಿಸಲು ದಾರಿ ಮಾಡಿಕೊಡುತ್ತದೆ. ಹೊಯ್ಸಳ ಅರಸರು ಹೆಚ್ಚುವರಿ ಉತ್ಪಾದನೆಯ ಸಮರ್ಥ ನಿರ್ವಹಣೆ, ರಾಜಕೀಯ ಸ್ಥಿರತೆ ಹಾಗೂ ಸುವ್ಯವಸ್ಥೆಯ ಸ್ಥಾಪನೆ ಕೃಷಿ ಹಾಗೂ ಕೈಗಾರಿಕೆಯ ಪ್ರೋತ್ಸಾಹ, ವ್ಯಾಪಾರ ವಾಣಿಜ್ಯಕ್ಕೆ ಉತ್ತಮ ಮಹತ್ವ ನೀಡುವುದರ ಮುಖೇನ ನಗರ ಬೆಳವಣಿಗೆಗೆ ಸೂಕ್ತವಾದ ವಾತಾವರಣವನ್ನು ನಿರ್ಮಿಸಿದರು ಇದರ ಜೊತೆಗೆ ರಾಜರು ಮಂತ್ರಿಗಳು ಅಧಿಕಾರಿಗಳು ಕೆಲವೊಮ್ಮೆ ವರ್ತಕರು ಹಾಗೂ ಕೆಲವು ವ್ಯಕ್ತಿಗಳು ನಗರಗಳ ಸೃಷ್ಟಿ ಹಾಗೂ ನಿರ್ವಹಣೆಯಲ್ಲಿ ಆಸಕ್ತಿಯನ್ನು ತೋರಿದರು. ಹೊಯ್ಸಳ ಅರಸರ ರಾಜಕೀಯ ಮಾರ್ಗದರ್ಶನ ಹಾಗೂ ನೀತಿ ಮತ್ತು ಸಾಮ್ರಾಜ್ಯದಲ್ಲಿ ನೆಲೆಸಿದ್ದ ಶಾಂತಿಯಿಂದಾಗಿ ನಗರ ಕೇಂದ್ರಗಳ ಹುಟ್ಟು ಹಾಗೂ ಬೆಳವಣಿಗೆಗೆ ಸಹಕಾರಿಯಾಯಿತು. ಹೊಯ್ಸಳ ಅರಸರು ನಗರೀಕರಣವನ್ನು ಪ್ರೋತ್ಸಾಹಿಸುವಲ್ಲಿ ಸಕಾರಾತ್ಮಕ ಮಾರ್ಗದರ್ಶನ ನೀಡಿ ನಿರ್ದಿಷ್ಟ ನೀತಿಯನ್ನು ರೂಪಿಸಿದ ಮೊಘಲರಂತೆ ಯಾವುದೇ ನಿರ್ದಿಷ್ಟ ನೀತಿಯನ್ನು ಹೊಂದಿದ್ದಾಗಿ ಕಂಡು

ಬರುವುದಿಲ್ಲ.[53] ಆದರೂ ಸಾಮ್ರಾಜ್ಯ ನಗರ ಬೆಳವಣಿಗೆಗೆ ಅಗತ್ಯವಾದ ಸಾಮಾನ್ಯ ವಾತಾವರಣವು ನೆಲೆಸಿತ್ತು.

### 4.4.2 ಯುದ್ಧ

ನಗರ ಪರಿವರ್ತನೆಯಲ್ಲಿ ಸಹಾಯಕವಾಗುವ ಅಂಶದಲ್ಲಿ ಯುದ್ಧವು ಒಂದು ಎಂದು ಪರಿಗಣಿಸಲಾಗಿದೆ. ಈ ಪ್ರಕಾರವಾಗಿ ನಗರ ಕೇಂದ್ರಗಳ ಜನಮನದಲ್ಲಿ ಇದೊಂದು ಪ್ರಮುಖ ಪರಿಣಾಮಕಾರೀ ಪಾತ್ರವನ್ನು ವಹಿಸುತ್ತದೆ ಎಂದು ತಿಳಿಯಲಾಗಿದೆ. ಆದರೆ ಐತಿಹಾಸಿಕ ದೃಷ್ಟಿಕೋನದಿಂದ ನೋಡಿದಾಗ ಯುದ್ಧವು ನಿರ್ವಹಿಸಿದ ಪಾತ್ರವು ಅತ್ಯಲ್ಪ ಎಂದು ತೋರುತ್ತದೆ. ಆದರೂ ಪ್ರಾಚೀನ ಹಾಗೂ ಮಧ್ಯಕಾಲೀನ ಯುಗದಲ್ಲಿ ನಗರಗಳು, ಆಡಳಿತ ಕೇಂದ್ರಗಳು, ಪಟ್ಟಣಗಳು ಭದ್ರತಾ ದೃಷ್ಟಿಯಿಂದ ಸೇನಾವ್ಯೂಹಗಳನ್ನು ಬಹಳ ಯೋಜಿತವಾದ ರೀತಿಯಲ್ಲಿ ಹೊಂದಿದ್ದವು. ಒಂದು ಶಾಸನವು ಕೋಟೆಯ ಭಾಗಗಳಾಗಿ ಕಂದಕಗಳು ದಪ್ಪನೆಯ ಗೋಡೆಗಳು ಧ್ವಜಸ್ತಂಭಗಳು, ಪಗಾರಗಳು ಬುರುಜುಗಳನ್ನು ನೀಡುತ್ತಿವೆ.[54] ನಗರಗಳು ಸೇನಾಪಡೆಯ ಬಲವರ್ಧನೆಯ ಕೇಂದ್ರಗಳಾದವು. ಹಾಗೂ ಬಹಳ ಸಂಖ್ಯೆಯ ನಗರದ ಜನರು ಯೋಧರಾದರು. ಇದರಿಂದಾಗಿ ನಗರದ ಗಾತ್ರದಲ್ಲಿ ಮತ್ತು ಬೆಳವಣಿಗೆಯಲ್ಲಿ ತೀವ್ರವಾದ ಏರಿಕೆ ಕಂಡುಬಂದಿತು. ಆದರೆ ಈ ನಗರಗಳು ಕೂಡ ಶತ್ರು ಧಾಳಿಗೆ ತುತ್ತಾದವು. ರಾಜಧಾನಿಗಳು ಮುಖ್ಯಸ್ಥರ ಮುಖ್ಯ ನೆಲೆಗಳು ಹಾಗೂ ಕೋಟೆಗಳು ಯುದ್ಧಗಳಲ್ಲಿ ಸುಲಭದ ತುತ್ತಾಗುತ್ತಿದ್ದವು. ವಿಷ್ಣುವರ್ಧನನು ಅನೇಕ ಕೋಟೆಗಳ ಮೇಲೆ ಆಕ್ರಮಣ ಮಾಡಿ ಜಯಿಸಿದರೂ ದ್ವಾರಸಮುದ್ರವು ಶತ್ರುಗಳ ಆಕರ್ಷಕ ವಸ್ತುವಾಗಿತ್ತು ಹಾಗೂ ಇದನ್ನು ಅಂತಿಮವಾಗಿ ಮಲ್ಲಿಕಾಫರ್ ದಾಳಿ ಮಾಡಿದನು. ಹೀಗೆ ಬೆಳವಣಿಗೆಯ ಅಂಶವಾಗಿದ್ದ ಯುದ್ಧವು ನಾಶದ ಸಾಧನವಾಯಿತು.

ಕೃಷಿ, ಕೈಗಾರಿಕೆ, ವ್ಯಾಪಾರ ಹಾಗೂ ವಾಣಿಜ್ಯಕ್ಕೆ ಅರಸರು ನೀಡಿದ ರಾಜಕೀಯ ಸ್ಥಿರತೆ, ಶಾಂತಿ ಹಾಗೂ ಪ್ರೋತ್ಸಾಹ ಅವರು ಹೊಂದಿದ್ದ ಪ್ರಾರಂಭ ಹಾಗೂ ಪ್ರಚೋದನೆ ಅಂತಿಮವಾಗಿ ನಿಯಂತ್ರಿತ ಅರ್ಥದಲ್ಲಿ ಯುದ್ಧವು ಸೇರಿ ಒಗ್ಗೂಡಿದ ಅಂಶಗಳು ನಗರೀಕರಣಕ್ಕೆ ದಾರಿಯಾದವು.

### 4.4.3 ಧಾರ್ಮಿಕ ಅಂಶಗಳು

ಮಧ್ಯಕಾಲೀನ ಯುಗದಲ್ಲಿ ನಗರೀಕರಣವನ್ನು ಪ್ರೋತ್ಸಾಹಿಸುವಲ್ಲಿ ಧರ್ಮದ ಪಾತ್ರ ಪ್ರಮುಖವಾಗಿದೆ ಎಂದು ಹೇಳಬಹುದು. ಧರ್ಮವು ನಾಗರೀಕತೆಯನ್ನು ವಿಸ್ತರಿಸಲು ಪ್ರಮುಖ

ಅಂಶವಾಗಿತ್ತು ಆದ್ದರಿಂದ ಶ್ರೇಷ್ಠ ಸಂಪ್ರದಾಯವನ್ನು ಹರಡುವಲ್ಲಿ ಬಹಳ ಮಹತ್ವವಾದ ಪಾತ್ರವನ್ನು ವಹಿಸಿತ್ತು. ಮಧ್ಯಕಾಲೀನ ನಾಗರೀಕತೆಯನ್ನು ವಿಶ್ಲೇಷಿಸಲು ಧರ್ಮದ ಪಾತ್ರವನ್ನು ಸಮರ್ಪಕವಾಗಿ ಅರ್ಥ ಮಾಡಿಕೊಳ್ಳುವುದು ಅವಶ್ಯಕವಾಗಿದೆ. ನಗರೀಕರಣ ಪ್ರಕ್ರಿಯೆಯಲ್ಲಿ ಧರ್ಮದ ಪಾತ್ರವು ಶ್ರೇಷ್ಠವಾಗಿತ್ತು. ನಗರ ಕೇಂದ್ರಗಳ ಹುಟ್ಟು ಹಾಗೂ ಬೆಳವಣಿಗೆಯಲ್ಲಿ ಬಹಳ ಪ್ರಮುಖವಾದ ಅಂಶವಾಗಿತ್ತು. ದೇವಾಲಯಗಳು, ಮಠಗಳು, ಗುರುಕುಲಗಳಂತಹ ಧಾರ್ಮಿಕ ಕೇಂದ್ರಗಳು, ಹಳ್ಳಿಗಳು ಹಾಗೂ ನಗರಗಳೆರಡಲ್ಲೂ ಕಂಡುಬಂದಿದ್ದರು. ಹಲವು ಪ್ರಮುಖ ಧಾರ್ಮಿಕ ಸಂಸ್ಥೆಗಳು ನಗರಗಳಲ್ಲಿ ಕಂಡುಬಂದವು. ಹಾಗೂ ದೊಡ್ಡ ದೇವಾಲಯ ಕಟ್ಟಡಗಳು ಈ ನಗರಗಳಲ್ಲೇ ಕಂಡು ಬಂದವು. ಕೇಂದ್ರಸ್ಥಾನದಲ್ಲಿದ್ದ ದೇವಾಲಯಗಳು ಅಧಿದೇವತೆಗಳೊಂದಿಗೆ ನಗರಗಳು ಅಧೀನ ಧರ್ಮಕೇಂದ್ರಗಳನ್ನು ಹೊಂದಿದ್ದವು. ಇವುಗಳು ನಗರದ ನಿರ್ದಿಷ್ಟ ಸ್ಥಳಗಳಲ್ಲಿ ಸ್ಥಾಪಿತವಾಗಿದ್ದವು ಹೆಚ್ಚು ಪ್ರಶಂಸೆಯನ್ನು ಹೊಂದಿದ್ದ ದೇವಾಲಯದ ಸ್ಥಳವು ತಮ್ಮ ಸುತ್ತಲಿದ್ದ ಗ್ರಾಮೀಣ ಪ್ರದೇಶಕ್ಕಿಂತ ಭಿನ್ನವಾಗಿ ನಗರಕೇಂದ್ರವಾಗಿ ಬೆಳೆಯಿತು. ಐತಿಹಾಸಿಕ ಯುಗಗಳ ಎಲ್ಲಾ ನಗರಗಳಲ್ಲಿ ಸಾರ್ವತ್ರಿಕವಾಗಿ ದೇವಾಲಯಗಳು ಇರುತ್ತಿದ್ದವು. ದೇವಾಲಯಗಳು ನಗರದ ಅವಶ್ಯಕವಾದ ವಸ್ತುಗಳಾಗಿದ್ದವು. ದೇವಾಲಯಗಳು ನಗರೀಕರಣದಲ್ಲಿ ನಿರ್ವಹಿಸಿದ ಮಹತ್ವದ ಪಾತ್ರದಿಂದಾಗಿ "ದೇವಾಲಯ ನಗರೀಕರಣ" ಎಂಬ ಪದಪುಂಜವನ್ನು ಉಪಯೋಗಿಸುವುದು ಸೂಕ್ತವಾಗುತ್ತದೆ.

ಮಹಾಲಿಂಗಂರವರ ಪ್ರಕಾರ "ಸ್ಥಳೀಯ ಪ್ರದೇಶಗಳಲ್ಲಿ ಧಾರ್ಮಿಕ ಜೀವನದ ಕ್ರಿಯಾಶೀಲ ಕೇಂದ್ರವಾಗಿರುವುದರ ಜೊತೆಗೆ ದೇವಾಲಯವು ಒಂದು ಪ್ರಮುಖ ಸಾಮಾಜಿಕ ಸಂಸ್ಥೆಯಾಗಿ ನಗರ ಸ್ಥಾನೀಕರಣ, ರಾಜಕೀಯ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಂತಹ ಹಲವಾರು ಕ್ಷೇತ್ರಗಳಲ್ಲಿ ತನ್ನ ಪ್ರಮುಖ ಪಾತ್ರವನ್ನು ನಿರ್ವಹಿಸಿತು.[55]

ದೇವಾಲಯವು ಭೂಮಾಲೀಕನಾಗಿ ಉದ್ಯೋಗ ದಾತನಾಗಿ ಸರಕು ಮತ್ತು ಸೇವೆಗಳ ಬಳಕೆದಾರನಾಗಿ ಬ್ಯಾಂಕು, ಶಾಲೆ, ಆಸ್ಪತ್ರೆ, ನಾಟಕ, ಶಾಲೆಯಾಗಿ ಹಾಗೂ ಸಂಕಷ್ಟ ಪರಿಸ್ಥಿತಿಗಳಲ್ಲಿ ಆಶ್ರಯದಾತನಾಗಿ ಕಾರ್ಯ ನಿರ್ವಹಿಸುತ್ತಿತ್ತು. ಈ ದೇವಾಲಯಗಳ ಸುತ್ತ ಕೇಂದ್ರೀಕೃತವಾಗಿದ್ದ ಪ್ರಮುಖ ಚಟುವಟಿಕೆಗಳನ್ನು ಭೂಮಿ, ಬಂಗಾರ, ಮತ್ತು ಹಣದ ರೂಪದಲ್ಲಿ ಧಾರ್ಮಿಕ ಹಬ್ಬ ಹರಿದಿನಗಳು ಬ್ರಾಹ್ಮಣರಿಗೆ ಅನ್ನಸಂತರ್ಪಣೆ ಏರ್ಪಡಿಸುವುದಕ್ಕಾಗಿ ದೀಪಗಳನ್ನು ಉರಿಸಲು ದೇವಾಲಯ ಕಟ್ಟಡಗಳ ಪುನರ್ ನಿರ್ಮಾಣ ಹಾಗೂ ನವೀಕರಣಕ್ಕಾಗಿ ದೇವತೆಗಳಿಗೆ

ಆಭರಣಗಳನ್ನು ನೀಡುವುದಕ್ಕಾಗಿ ಧಾರ್ಮಿಕ ಗೋಷ್ಠಿಗಳು ಹಾಗೂ ಶೈಕ್ಷಣಿಕ ಸಂಸ್ಥೆಗಳಂತವುಗಳಿಗೆ ಉಂಬಳಿಗಳನ್ನು ನೀಡಿದ್ದುದರ ಮೂಲಕವಾಗಿ ಪ್ರತಿಬಿಂಬಿಸಲಾಗಿದೆ.[56] ಈ ರೀತಿಯಾಗಿ ದೇವಾಲಯಗಳು ಸೂಜಿಗಲ್ಲಿನಂತೆ ತಮ್ಮ ಕಡೆಗೆ ಸೆಳೆದು ನಗರ ಬೆಳವಣಿಗೆಗೆ ಕಾರಣವಾದವು. ಕೆಲವೊಮ್ಮೆ ಒಂದು ನಗರವು ದೇವಾಲಯದ ಅಕ್ಕಪಕ್ಕದಲ್ಲಿ ತಲೆಯೆತ್ತುತ್ತಿತ್ತು. ಪ್ರಸಿದ್ಧ ದೇವಾಲಯವೊಂದು ಜನರನ್ನು ಆಕರ್ಷಿಸಿ ಯಾತ್ರಾ ಸ್ಥಳವಾಗುತ್ತಿತ್ತು ಹಾಗೂ ಪವಿತ್ರ ಧಾರ್ಮಿಕ ಭೌಗೋಳಿಕ ಪರಿಸರದ ಆಧಾರದ ಮೇಲೆ ನಗರಗಳು ಅಭಿವೃದ್ಧಿಯನ್ನು ಹೊಂದಿದ್ದವು. ಈ ರೀತಿಯಾಗಿ ಯಾತ್ರಾಸ್ಥಳವು ನಗರ ಕೇಂದ್ರವಾಗಿ ಬೆಳೆಯಿತು. ಗುಪ್ತನ ಪ್ರಕಾರ ದಕ್ಷಿಣ ಭಾರತದಲ್ಲಿ ಹೆಚ್ಚುಶ್ವಾವತವಾಗಿದ್ದ ನಗರ ವಾಸಸ್ಥಾನಗಳೆಂದರೆ ಯಾತ್ರಾ ಸ್ಥಳಗಳಾಗಿದ್ದವು. ಅವುಗಳನ್ನು ಸಾಂಸ್ಕೃತಿಕ ಜನಕ ನಗರಗಳೆಂದು ಪರಿಗಣಿಸಬಹುದು. ಇವುಗಳಲ್ಲಿನ ಜೀವನವು ಹಿನ್ನಾಡಿಗಿಂತ ಬಹುದೂರು ವಿಸ್ತರಿಸಿತ್ತು.[57] ಒಂದು ನಿರ್ದಿಷ್ಟ ಪಟ್ಟಣವು ಪ್ರಮುಖ್ಯತೆಯನ್ನು ಪಡೆಯಲು ಕಾರಣ ಅದರ ಪವಿತ್ರ ಭೌಗೋಳಿಕ ಪರಿಸರ ನಗರದಲ್ಲಿ ದೇವಾಲಯಗಳು ಹಾಗೂ ಮಠಗಳು ಅಪಾರವಾದ ಧನ ದಾನಾದಿಗಳನ್ನು ಪಡೆದವು. ಹೊಯ್ಸಳರ ಕಾಲದ ಶಿಲಾಶಾಸನಗಳು ನಗರ ಕೇಂದ್ರವಾಗಿ ಒಂದು ನಿರ್ದಿಷ್ಟ ಸ್ಥಳವು ಬೆಳೆಯುವಲ್ಲಿ ಧರ್ಮವು ವಹಿಸುತ್ತಿದ್ದ ಪಾತ್ರದ ಮೇಲೆ ಬೆಳಕನ್ನು ಚೆಲ್ಲುತ್ತದೆ. ಹೊಯ್ಸಳರ ರಾಜಧಾನಿಯು ಚನ್ನಕೇಶವ ದೇವರ ಕಪ್ಪೆ ಚನ್ನಿಗ ದೇವರ ಹಾಗೂ ಅನೇಕ ಅಧೀನ ದೇವರುಗಳ ಪೀಠವಾಗಿತ್ತು. ಸಾಮ್ರಾಜ್ಯದ ಬೆಳವಣಿಗೆಯೊಂದಿಗೆ ರಾಜಧಾನಿಯಲ್ಲಿನ ದೇವಾಲಯಗಳನ್ನು ರಾಜಕೀಯ ಹಾಗೂ ಸಾಮಾಜಿಕ ಜೀವನದಲ್ಲಿನ ಮಹತ್ವವನ್ನು ಎತ್ತಿ ಹಿಡಿಯುವಂತೆ ಅಗಾದವಾಗಿ ವಿಸ್ತರಿಸಲಾಯಿತು.

ಇದು ಸಾಮ್ರಾಜ್ಯದ ಬೆಳವಣಿಗೆ ನಗರದ ವಿಸ್ತರಣೆ ಹಾಗೂ ದೇವಾಲಯಗಳ ಮಧ್ಯೆ ಇರುವ ಸಂಬಂಧವನ್ನು ತೋರಿಸುತ್ತದೆ. ಹೊಯ್ಸಳ ಸಾಮ್ರಾಜ್ಯವು ತನ್ನ ಕೀರ್ತಿಯ ಪರಾಕಾಷ್ಟತೆಯನ್ನು ತಲುಪಿದಾಗ ದ್ವಾರಸಮುದ್ರವು ಉನ್ನತ ಮಟ್ಟದಲ್ಲಿತ್ತು. ಇದೇ ಅವಧಿಯಲ್ಲಿ ಧಾರ್ಮಿಕ ಚಟುವಟಿಕೆಗಳು ಹಾಗೂ ದೇವಾಲಯ ನಿರ್ಮಾಣಗಳು ತ್ವರಿತವಾಗಿ ಸಾಗಿದ್ದವು. ವಿಷ್ಣುವರ್ಧನನು ದಾನದತ್ತಿಗಳನ್ನು ನೀಡಿ ಚನ್ನಕೇಶವ ದೇವಾಲಯವನ್ನು ನಿರ್ಮಿಸಿದನು. ಇದೇ ಕಾಲದಲ್ಲಿ ಅನೇಕ ಕಟ್ಟಡಗಳನ್ನು ನಿರ್ಮಿಸಲಾಯಿತು.

# ಅಧ್ಯಾಯ 5

## 5.1 ನಗರ ಬೆಳವಣಿಗೆಯ ಲಕ್ಷಣ

10ನೇ ಶತಮಾನದಿಂದಲೂ ದಕ್ಷಿಣ ಭಾರತದಲ್ಲಿ ನಗರೀಕರಣ ಪ್ರಕ್ರಿಯೆಯ ಸ್ಪಷ್ಟ ಲಕ್ಷಣವು ಕಂಡುಬಂದಿತ್ತು. ಈ ಪ್ರಕ್ರಿಯೆಯು ನಗರ ಕೇಂದ್ರಗಳ ಹುಟ್ಟು ಹಾಗೂ ವಿಸ್ತರಣೆಯ ಮೂಲಕ ತನ್ನ ಅಭಿವ್ಯಕ್ತಿಯನ್ನು ಪ್ರಕಟಿಸಿತು. ನಗರ ಬೆಳವಣಿಗೆಯು ದ್ವಿಮುಖವಾಗಿತ್ತು. ಅವುಗಳೆಂದರೆ ಹೊಸ ನಗರಗಳ ಉದಯದಿಂದಾಗಿ ಕೇಂದ್ರಗಳ ಸಂಖ್ಯೆಯಲ್ಲಿ ಹೆಚ್ಚಳವಾದದ್ದು ಇನ್ನೊಂದೆಂದರೆ ಹಳೆಯ ಹಾಗೂ ಹೊಸ ನಗರಗಳ ಗಾತ್ರದಲ್ಲಿ ಬೆಳವಣಿಗೆಯಾದದ್ದು, ಇದು ಭೌತಿಕ, ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಧಾರ್ಮಿಕ ಅಂಶಗಳ ಪ್ರಭಾವದಿಂದ ಉಂಟಾಯಿತು. ನಗರ ಬೆಳವಣಿಗೆಯ ಇನ್ನೊಂದು ವೈಶಿಷ್ಟವೇನೆಂದರೆ ಹಲವು ಶತಮಾನಗಳ ಕಾಲ ಹಲವಾರು ನಗರಗಳು ಅಸ್ತಿತ್ವದಲ್ಲಿದ್ದುದಾಗಿತ್ತು. ಕೆಲವು ನಗರಗಳ ವಿಷಯದಲ್ಲಿ ಕೇವಲ ಶಾಸನಗಳಿಂದ ಅವುಗಳ ವಿಸ್ತರಣೆಯನ್ನು ಸ್ಪಷ್ಟವಾಗಿ ತಿಳಿಯಲು ಸಾಧ್ಯವಿಲ್ಲ. ಆದರೆ ಪ್ರಮುಖ ಸ್ಥಳಗಳಾಗಿ ಅವುಗಳ ಇರುವಿಕೆಯನ್ನು ದಾನದ ಶಾಸನಗಳಲ್ಲಿ ನಿರಂತರವಾಗಿ ಉಲ್ಲೇಖಿಸುವುದರ ಮೂಲಕ ತಿಳಿಸಲಾಗಿದೆ. ಅಂತಹ ಸಂದರ್ಭಗಳಲ್ಲಿ ಸಾಬೀತು ಮಾಡದ ಹೊರತು ಆ ಸ್ಥಳಗಳು ಅವನತಿಯ ಹಾದಿಯಲ್ಲಿರಲಿಲ್ಲ ಎಂಬುದನ್ನು ನಾವು ತಿಳಿಯಬಹುದು. ಆದ್ದರಿಂದ ಇದರಿಂದಲೂ ಕೂಡ ನಗರ ಬೆಳವಣಿಗೆಯಾಯಿತು ಎಂಬುದನ್ನು ನಾವು ಸಾಬೀತು ಮಾಡಬಹುದು.

ಈ ರೀತಿಯಾಗಿ ನಮ್ಮ ಅಧ್ಯಯನದ ಕಾಲದಲ್ಲಿ ನಗರ ಬೆಳವಣಿಗೆಯನ್ನು ಗುರುತಿಸಲು ಹೊಸ ನಗರಗಳ ಉದಯ, ಹಳೆಯ ಹಾಗೂ ಹೊಸ ನಗರಗಳ ವಿಸ್ತರಣೆ ಮೂರು ಲಕ್ಷಣಗಳನ್ನು ಪರಿಗಣಿಸಲಾಗಿದೆ.

### 5.1.1 ದಕ್ಷಿಣ ಭಾರತದಲ್ಲಿ ನಗರ ಬೆಳವಣಿಗೆಗೆ ಅನುಕೂಲಕಾರಿಯಾದ ಸನ್ನಿವೇಶ

ಅಂತರ ರಾಷ್ಟ್ರೀಯ ಜಲವ್ಯಾಪಾರ ಮಾರ್ಗದಲ್ಲಿ ನೆಲೆಸಿದ್ದ ಭಾರತ ದ್ವೀಪ ಕಲ್ಪವು ನಗರ ಕೇಂದ್ರಗಳ ಹುಟ್ಟು ಹಾಗೂ ಬೆಳವಣಿಗೆಗೆ ಸಾಕಷ್ಟು ಅವಕಾಶವನ್ನು ಕಲ್ಪಿಸಿಕೊಟ್ಟಿತು.[58] ಪೂರ್ವ ಹಾಗೂ ಪಶ್ಚಿಮ ತೀರಗಳೆರಡೂ ಹೊರ ಪ್ರಪಂಚದೊಂದಿಗೆ ಉತ್ತಮವಾದ ಸಂಪರ್ಕವನ್ನು ಹೊಂದಿದ್ದವು. ಆದ ಕಾರಣಗಳು ನಗರಗಳು ತೀರಗಳ ಮೇಲೆ ತಲೆಯೆತ್ತಿ ನಿಂತವು.[59]

ಒಳನಾಡು ವ್ಯಾಪಾರವು ಅಭಿವೃದ್ಧಿಗೊಂಡಂತೆಲ್ಲ ನಗರ ಕೇಂದ್ರಗಳು ವ್ಯಾಪಾರ ಮಾರ್ಗಗಳ ಉದ್ದಕ್ಕೂ ನಾಡಿನೊಳಗೆ ನಿರ್ಮಾಣವಾದವು ರಾಜಧಾನಿಗಳ ಹುಟ್ಟು ಹಾಗೂ ಬೆಳವಣಿಗೆಯಿಂದಾಗಿ ಇತರೆ ಕೇಂದ್ರಗಳು ಮುಖ್ಯ ಪಟ್ಟಣಗಳು ಹಾಗೂ ಆಡಳಿತ ಕಛೇರಿಗಳಾಗಿ ಹೊರಹೊಮ್ಮಿದವು. ನಾಗರೀಕತೆಯ ವಿಸ್ತರಣೆಯಾದಂತೆ ಹಾಗೂ ಧರ್ಮದ ಹರಡುವಿಕೆ ಹೆಚ್ಚಾದಂತೆಲ್ಲ ಅನೇಕ ನಗರಗಳು ದೇವಾಲಯಗಳು ಹಾಗೂ ಮಠಗಳ ಸುತ್ತ ಯಾತ್ರಾಸ್ಥಳಗಳಾಗಿ ಶೈಕ್ಷಣಿಕ ಕೇಂದ್ರಗಳಾಗಿ ಹಾಗೂ ಸಂಸ್ಕೃತಿಯನ್ನು ಪಸರಿಸುವ ಕೇಂದ್ರಗಳಾಗಿ ಬೆಳೆದವು.

ದಕ್ಷಿಣ ಭಾರತದಲ್ಲಿ ನಗರ ಪ್ರಕ್ರಿಯೆಯು ಸಾಮ್ರಾಜ್ಯಗಳು ಪ್ರವರ್ಧಮಾನಕ್ಕೆ ಬರುತ್ತಿದ್ದಂತೆಯೇ ಹೆಚ್ಚಿನ ಮಹತ್ವವನ್ನು ಪಡೆಯಿತು. 12ನೇ ಶತಮಾನದಿಂದ ಚೋಳ ಹಾಗೂ ಹೊಯ್ಸಳ ಸಾಮ್ರಾಜ್ಯದಲ್ಲಿ ವಾಣಿಜ್ಯ ಹಾಗೂ ವ್ಯಾಪಾರೀ ಲಕ್ಷಣಗಳನ್ನು ಹೊತ್ತ ನಗರ ಕೇಂದ್ರಗಳು ಬೆಳೆಯಲು ಪ್ರಾರಂಭವಾದವು. ದಕ್ಷಿಣ ಭಾರತದಲ್ಲಿ ವ್ಯಾಪಾರ ಹಾಗೂ ನಗರ ಜೀವನವು ಹೆಚ್ಚು ಪ್ರಮುಖವಾಯಿತು. ಸಾಕಷ್ಟು ಸಂಖ್ಯೆಯ ವರ್ತಕರು ಕುಶಲಕರ್ಮಿಗಳ ವಸಾಹತು ಪ್ರಾಮುಖ್ಯತೆಗೆ ಬಂದಿತು. ಈ ಮೂಲಕವಾಗಿ 12ನೇ ಶತಮಾನದಲ್ಲಿ ಹೊಯ್ಸಳ ಸಾಮ್ರಾಜ್ಯವು ಬೆಳೆಯುವ ವೇಳೆಗೆ ನಗರ ಸನ್ನಿವೇಶವು ಆಗಲೇ ನೆಲೆಸಿತ್ತು. ಸಾಮ್ರಾಜ್ಯದಲ್ಲಿ ನೆಲೆಸಿದ್ದ ಈ ಸನ್ನಿವೇಶವು ನಗರೀಕರಣ ಪ್ರಕ್ರಿಯೆಯ ಪ್ರಗತಿಗೆ ಸಾಕಷ್ಟು ಶ್ರಮಿಸಿತು. ಹೊಯ್ಸಳರ ಅರಸರ ಅಡಿಯಲ್ಲಿ ಹೆಚ್ಚಿದ ವಾಣಿಜ್ಯ, ರಾಜಕೀಯ, ಸುವ್ಯವಸ್ಥೆ ಹಾಗೂ ದ್ವೀಪ ಕಲ್ಪದಲ್ಲಿನ ಸ್ಥಿರತೆಯು ಮುಂದಿನ ಅಭಿವೃದ್ಧಿಗೆ ಪ್ರೋತ್ಸಾಹ ಅಂಶಗಳಾಗಿ ಪರಿಣಮಿಸಿತು.

### 5.1.2 ನಗರಗಳ ಸ್ವರೂಪ ಹಾಗೂ ವರ್ಗೀಕರಣ

ನಗರ ಬೆಳವಣಿಗೆಯೊಂದಿಗೆ ಸಂಬಂಧವನ್ನು ಹೊಂದಿದ ಸಮಸ್ಯೆಯೆಂದರೆ ಪಟ್ಟಣಗಳ ವರ್ಗೀಕರಣ ಹಾಗೂ ಅವುಗಳ ಸ್ವರೂಪವನ್ನು ನಿರ್ಧರಿಸುವುದು ಪಟ್ಟಣಗಳು ಬೆಳೆಯುವಾಗಲೇ ತಮ್ಮ ವೈಶಿಷ್ಟ್ಯತೆಗಳನ್ನು ಸ್ವೀಕರಿಸಿ ಬೆಳೆಯುತ್ತವೆ. ಈ ಹಂತದಲ್ಲಿ ತಮ್ಮ ಪಾತ್ರವನ್ನು ನಿರ್ವಹಿಸುವುದರ ಜೊತೆಗೆ ಅವುಗಳು ಹೆಚ್ಚು ಕಾರ್ಯಗಳನ್ನು ವಹಿಸಿಕೊಂಡು ನಿರ್ವಹಿಸುತ್ತವೆ. ಆದ್ದರಿಂದ ನಗರ ಬೆಳವಣಿಗೆಯ ಚರ್ಚೆಯ ಪಟ್ಟಣಗಳ ಸ್ವರೂಪ ಹಾಗೂ ಅವುಗಳ ವರ್ಗೀಕರಣ ವೆರಡನ್ನು ನಿರ್ಧರಿಸುವ ಒಂದು ಪ್ರಯತ್ನವನ್ನು ಮಾಡುತ್ತದೆ.

ಹೊಯ್ಸಳ ಸಾಮ್ರಾಜ್ಯವು ಹಲವಾರು ನಮೂನೆಗಳ ವಿವಿಧ ಕಾರ್ಯಗಳನ್ನು ಹಾಗೂ ಪಾತ್ರಗಳನ್ನು ನಿರ್ವಹಿಸುತ್ತಿದ್ದ ಅನೇಕ ನಗರ ಕೇಂದ್ರಗಳಿಂದ ಕಂಗೊಳಿಸುತ್ತಿತ್ತು. ವಿವಿಧ ಕಾರ್ಯಗಳು ಪಟ್ಟಣಗಳ ಮುಖ್ಯ ವೈಶಿಷ್ಟಗಳಾಗಿದ್ದವು. ಆದರೂ ಒಂದು ನಿರ್ದಿಷ್ಟ ಪಟ್ಟಣವು ಒಂದು ರೀತಿಯಾದ ವಿಶಿಷ್ಟ ಅಂಶವನ್ನು ಹೊಂದಿ ಬೇರೆಯಾದವುಗಳಿಗಿಂತ ಭಿನ್ನವಾಗಿ ತನ್ನದೇ ಆದ ಗುಣ ಅಥವಾ ರೂಪವನ್ನು ಪಡೆಯಬಹುದು. ಆದ್ದರಿಂದ ಅವುಗಳು ನಿರ್ವಹಿಸುವ ಹಾಗೂ ಪಾತ್ರಗಳ ಆಧಾರದ ಮೇಲೆ ಪಟ್ಟಣಗಳನ್ನು ಸಂತೆಪೇಟೆಗಳು, ರಾಜಕೀಯ ಆಡಳಿತ ಕೇಂದ್ರಗಳು, ಕೋಟೆಗಳು ಅಥವಾ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೇಂದ್ರಗಳು ಎಂದು ವರ್ಗೀಕರಿಸಬಹುದು. ಇವುಗಳಲ್ಲಿ ಕಡಿಮೆ ಪಾತ್ರಗಳನ್ನು ನಿರ್ವಹಿಸುತ್ತಿರುವ ಸ್ಥಳಗಳನ್ನು ಸಣ್ಣ ಪಟ್ಟಣಗಳೆಂದು ಹತ್ತು ಹಲವು ವಿವಿಧ ಕಾರ್ಯಗಳನ್ನು ನಿರ್ವಹಿಸುವ ಪಟ್ಟಣಗಳನ್ನು ದೊಡ್ಡ ಪಟ್ಟಣಗಳೆಂದ ವರ್ಗೀಕರಿಸ ಬಹುದು. ಇವುಗಳಲ್ಲಿ ಕಡಿಮೆ ಪಾತ್ರಗಳನ್ನು ನಿರ್ವಹಿಸುತ್ತಿರುವ ಸ್ಥಳಗಳನ್ನು ಸಣ್ಣ ಪಟ್ಟಣಗಳೆಂದು ಹತ್ತು ಹಲವು ವಿವಿಧ ಕಾರ್ಯಗಳನ್ನು ನಿರ್ವಹಿಸುವ ಪಟ್ಟಣಗಳನ್ನು ದೊಡ್ಡ ಪಟ್ಟಣಗಳೆಂದ ವರ್ಗೀಕರಿಸಬಹುದು. ಈ ನಗರ ಕೇಂದ್ರಗಳ ಕಾರ್ಯಕ್ಷೇತ್ರ ಹಾಗೂ ಪ್ರಭಾವವೆರಡು ಬದಲಾಗಿದ್ದವು. ದೊಡ್ಡ ಪಟ್ಟಣವು ವಿವಿಧ ಕಾರ್ಯಗಳನ್ನು ನಿರ್ವಹಿಸುತ್ತಿತ್ತು ಅದರ ರಾಜಕೀಯ ಆರ್ಥಿಕ ಸಂಪರ್ಕವು ಬಹಳ ವಿಶಾಲವಾಗಿತ್ತು. ಅದರ ಪ್ರಭಾವ ಬಹಳ ವಿಸ್ತಾರವಾದ ಕ್ಷೇತ್ರವನ್ನು ಆಕ್ರಮಿಸಿತ್ತು. ಇನ್ನೊಂದೆಡೆಯಲ್ಲಿ ಸಣ್ಣ ಪಟ್ಟಣಗಳ ಪ್ರಭಾವವು ಕೇವಲ ಹತ್ತಿರದ ಪ್ರದೇಶಕ್ಕೆ ಮಾತ್ರ ಸೀಮಿತವಾಗಿತ್ತು. ಇದರೊಂದಿಗೆ ನಗರವಾಸಿಗಳ ವೈವಿಧ್ಯಮಯ ಗುಣವು ಒಂದು ಪ್ರದೇಶದಿಂದ ಇನ್ನೊಂದಕ್ಕೆ ಬೇರೆ ಬೇರೆಯಾಗಿತ್ತು.

ಹೊಯ್ಸಳ ಸಾಮ್ರಾಜ್ಯದಲ್ಲಿ ಅಧ್ಯಯನ ಮಾಡುವ ಹಲವು ನಗರ ಕೇಂದ್ರಗಳಿಂದ ಎಲ್ಲಾ ಪಟ್ಟಣಗಳ ವರ್ಗೀಕರಣವು ಕಷ್ಟವಾಗುವುದು. ಏಕೆಂದರೆ ನಗರ ಕೇಂದ್ರಗಳು ನಿರ್ವಹಿಸುತ್ತಿದ್ದ ಕಾರ್ಯಗಳು ಹಾಗೂ ಪಾತ್ರಗಳು ವಿಭಿನ್ನವಾಗಿದ್ದವು. ಹಾಗೂ ಮಿಶ್ರಣದಿಂದ ಕೊಂಡಿದ್ದವು. ಪಟ್ಟಣಗಳು ಇತರೆ ಪಾತ್ರಗಳೊಂದಿಗೆ ಪ್ರಮುಖವಾದ ಪಾತ್ರವನ್ನು ನಿರ್ಧರಿಸುವಲ್ಲಿ ಲಭ್ಯವಿರುವ ಮಾಹಿತಿಯು ಸಹಾಯಕವಾಗುವುದಿಲ್ಲ. ಆದ್ದರಿಂದ ನಮ್ಮ ಅಧ್ಯಯನದಲ್ಲಿನ ಸಮಸ್ಯೆಗಳಲ್ಲಿ ಒಂದು ನಗರ ಕೇಂದ್ರಗಳ ಸಂಕೇತ ನಿರೂಪಣಾ ಶಾಸ್ತ್ರವಾಗಿದೆ. ಆರ್.ಜಿ.ಫಾಕ್ಸ್ ಪ್ರಕಾರ ಯಾವುದೇ ನಗರಗಳ ಸಂಕೇತ ನಿರೂಪಣ ಶಾಸ್ತ್ರವು ನಿರ್ದಿಷ್ಟ ನಗರಗಳು ಹಾಗೂ ಅವುಗಳ ಕಾಲ ಗಣನೆಯನ್ನು ಮಾಹಿತಿಯ ಆಧಾರವಾಗಿ ವ್ಯಾಪಕವಾಗಿ ಪರಿಶೀಲಿಸುವುದರ ಮೇಲೆ ಆಧಾರ

ವಾಗಿರುತ್ತದೆ. ಆದರೂ ಎಲ್ಲಾ ಸ್ಥಳಗಳ ನಗರ ಅನುಭವದ ಮೇಲೆ ಸಾಮಾನ್ಯವಾದ ದೃಷ್ಟಿಕೋನವನ್ನು ಹೊಂದುವ ಉದ್ದೇಶದಿಂದ ಅದು ವ್ಯಯಕ್ತಿಕ ನಗರ ವಿವರಣೆ ಅಥವಾ ನಗರ ವಿವರಣೆಗಳ ಒಂದು ಸಮೂಹವನ್ನು ಪ್ರತಿಯೊಂದು ಕಾಲ ಹಾಗೂ ಸ್ಥಳಗಳಿಗೆ ಬದಲಾಯಿಸುತ್ತದೆ.[60] ಆಧಾರಗಳ ಸ್ವರೂಪವು ಹೊಯ್ಸಳ ಸಾಮ್ರಾಜ್ಯದ ನಗರಗಳ ಒಂದು ನಿರ್ದಿಷ್ಟ ಸಂಕೇತ ನಿರೂಪಣಾ ಶಾಸ್ತ್ರದೆಡೆಗೆ ಪ್ರಯತ್ನ ಮಾಡುವುದನ್ನು ಹೆಚ್ಚು ಕ್ಲಿಷ್ಟವನ್ನಾಗಿರಿಸಿದೆ. ಒಂದು ರೀತಿಯಾದ ನಗರಗಳನ್ನು ಇನ್ನೊಂದು ರೀತಿಯಾದ ನಗರಗಳಿಂದ ಸ್ಪಷ್ಟವಾಗಿ ಪ್ರತ್ಯೇಕಿಸುವುದು ಅಷ್ಟೇನು ಸುಲಭದ ಮಾತಲ್ಲ, ಆದರೂ ಕೆಲವೇ ನಗರಗಳು ಉಳಿದವೆಲ್ಲಕ್ಕಿಂತಲೂ ಭಿನ್ನವಾಗಿ ತೋರುತ್ತದೆ. ಉದಾ. ದೇವಾಲಯ ಪಟ್ಟಣಗಳು ತಮ್ಮ ಬೆಳವಣಿಗೆಗೆ ಹಾಗೂ ಉಳಿವಿಗೆ ಧರ್ಮವನ್ನು ಪ್ರಮುಖ ಅಂಶವಾಗಿಟ್ಟುಕೊಂಡು ಬೆಳದವು. ಇದೇ ರೀತಿಯಾಗಿ ವ್ಯಾಪಾರ ಹಾಗೂ ವಾಣಿಜ್ಯ, ರಾಜಕೀಯ, ಆಡಳಿತ ಕೇಂದ್ರಗಳು ಮತ್ತು ಕೋಟೆಗಳು ರಾಜಕೀಯ ಹಾಗೂ ಸೇನಾ ಚಟುವಟಿಕೆಗಳನ್ನು ಪ್ರಮುಖವಾಗಿರಿಸಿಕೊಂಡು ಮಾರುಕಟ್ಟೆ ಪಟ್ಟಣಗಳು ಒಂದಕ್ಕಿಂತ ಇನ್ನೊಂದು ಭಿನ್ನವಾಗಿದ್ದವು. ಆದರೆ ಇಲ್ಲೂ ಕೂಡ ಇತರೆ ಕಾರ್ಯಗಳು ಹಾಗೂ ಪಾತ್ರಗಳನ್ನು ಹೊಂದಿದ್ದ ಪಟ್ಟಣಗಳನ್ನು ನಾವು ನೋಡುತ್ತೇವೆ. ಆದ್ದರಿಂದ ನಮ್ಮ ಅಧ್ಯಯನಕ್ಕೆ ದೊರೆಯುವ ಮಾಹಿತಿ ಹಾಗೂ ವಿಶ್ಲೇಷಣೆಯಿಂದ ಪ್ರತ್ಯೇಕವಾಗಿ ಮಾರುಕಟ್ಟೆ ಪಟ್ಟಣ, ರಾಜಕೀಯ ಅಥವಾ ಧಾರ್ಮಿಕ ಪಟ್ಟಣವೆಂದು ಗುರುತಿಸುವುದು ಕಷ್ಟವಾಗುತ್ತದೆ. ಆದರೂ ಕೆಲವು ಪಟ್ಟಣಗಳ ವಿಷಯದಲ್ಲಿ ಒಂದು ನಿರ್ದಿಷ್ಟ ವೈಶಿಷ್ಟ ಎಲ್ಲದಕ್ಕಿಂತಲೂ ವಿಭಿನ್ನ ಲಕ್ಷಣವನ್ನು ಹೊಂದಿರಬಹುದು ಹಾಗೂ ಅಂತಹ ಪಟ್ಟಣಗಳನ್ನು ಒಂದು ನಿರ್ದಿಷ್ಟ ಗುಂಪಿನಡಿಯಲ್ಲಿ ವರ್ಗೀಕರಿಸಬಹುದು.

ಒಂದು ನಗರದ ಬೆಳವಣಿಗೆಯನ್ನು ಶೋಧಿಸುವಲ್ಲಿ ಹಲವಾರು ಅಂಶಗಳು ತಮ್ಮ ಪಾತ್ರಗಳನ್ನು ನಿರ್ವಹಿಸುತ್ತಿರುವುದನ್ನು ಕಾಣಬಹುದು. ಕೆಲವು ಪಟ್ಟಣಗಳು ಒಂದಕ್ಕಿಂತ ಹೆಚ್ಚು ಪಾತ್ರವನ್ನು ನಿರ್ವಹಿಸಬಹುದು. ಉದಾಹರಣೆಗೆ ಒಂದು ದೇವಾಲಯವನ್ನು ಅಥವಾ ಸಂತೆಯನ್ನೋ ಸ್ಥಾಪಿಸಿದಂತಹ ಒಂದು ಪಟ್ಟಣದಲ್ಲಿ ಅದು ಒಂದು ಮುಖ್ಯ ಪಟ್ಟಣ ಆಗಬಹುದು ಅಥವಾ ಕಾಲಾನಂತರದಲ್ಲಿ ಅಲ್ಲಿ ಒಂದು ಕೋಟೆಯನ್ನು ನಿರ್ಮಿಸಬಹುದು. ಇವೆಲ್ಲದರ ಜೊತೆಗೆ ಮೂಲ ದೇವಾಲಯವು ಶ್ರೇಷ್ಟಸ್ಥಾನವನ್ನು ಆಕ್ರಮಿಸಿ ಯಾತ್ರಿಗಳನ್ನು ಆಕರ್ಷಿಸುತ್ತಾ ಪಟ್ಟಣವಾಗಿ ಮುಂದುವರೆಯಬಹುದು.

ಕೆಲವು ಸಂದರ್ಭಗಳಲ್ಲಿ ಒಂದು ನಿರ್ದಿಷ್ಟ ಪಟ್ಟಣವು ತನ್ನ ಮೂಲ ಲಕ್ಷಣವನ್ನು ಕಳೆದು ಕೊಳ್ಳಬಹುದು ಹಾಗೂ ಪರ್ಯಾಯ ಸನ್ನಿವೇಶದಲ್ಲಿ ಇನ್ನೊಂದು ರೀತಿಯಾದ ಪಟ್ಟಣವಾಗಿ ಮುಂದುವರೆಯಬಹುದು. ಆದರೆ ಹೆಚ್ಚಿನ ಸನ್ನಿವೇಶಗಳಲ್ಲಿ ಈ ಬದಲಾವಣೆಗಳನ್ನು ಸ್ಪಷ್ಟ ಪದಗಳಲ್ಲಿ ವಿವರಿಸುವುದು ಕಷ್ಟವಾಗುತ್ತದೆ. ಏಕೆಂದರೆ ಲಭ್ಯವಿರುವ ದಾಖಲೆಗಳು ವಿವಿಧ ಕಾಲಗಳ ಪಟ್ಟಿಗಳು ನಿರಂತರವಾಗಿ ನಿರೂಪಣೆಯನ್ನು ಕೊಡುವಲ್ಲಿ ಸಹಕಾರಿಯಾಗಿಲ್ಲ.

ಪಟ್ಟಣಗಳ ನಿರೂಪಣಾ ಶಾಸ್ತ್ರ ಅವುಗಳ ಬೆಳವಣಿಗೆಯ ವಿಧಾನಗಳು ಅಸ್ಪಷ್ಟವಾಗಿ ಉಳಿಯುತ್ತದೆ. ಹಾಗೂ ಅವುಗಳ ಮೇಲಿನ ಅಭಿಪ್ರಾಯಗಳು ಮಾತ್ರ ಸಾಧ್ಯವಾಗಬಹುದು. ಆದ್ದರಿಂದ ಪಟ್ಟಣಗಳ ಬೆಳವಣಿಗೆಯ ಅಧ್ಯಯನದ ನಮ್ಮ ಈ ಪ್ರಯತ್ನದಲ್ಲಿ ಪಟ್ಟಣಗಳ ವರ್ಗೀಕರಣ ಹಾಗೂ ಇಲ್ಲಿ ನೀಡಿರುವ ಪಟ್ಟಣಗಳ ವಿಧಗಳು, ಅಸ್ಪಷ್ಟವಾಗಿವೆ. ಈ ಸಂಬಂಧದಲ್ಲಿ ಛೇಂಬರ್ ಈ ರೀತಿ ಹೇಳುತ್ತಾನೆ. "ನಿಜವಾದ ನಗರಗಳು ಹೆಚ್ಚು ಕಡಿಮೆ ಯಾವಾಗಲೂ ಮಿಶ್ರ ವಿಧಗಳನ್ನು ಪ್ರತಿನಿಧಿಸುತ್ತವೆ ಎಂದು ಹೇಳುವುದು ಅನಾವಶ್ಯಕವಾಗುತ್ತದೆ" ಎಂದಿದ್ದಾನೆ.

### 5.1.3 ಪಟ್ಟಣಗಳ ಹುಟ್ಟು ಹಾಗೂ ಬೆಳವಣಿಗೆ

ಹೊಯ್ಸಳ ಅರಸರು ಬಹಳಷ್ಟು ಅಗ್ರಹಾರಗಳನ್ನು ಸ್ಥಾಪಿಸಿದ್ದರು ಮತ್ತು ಅಗ್ರಹಾರಗಳಿಗೆ ಉದಾರವಾದ ದಾನ ದತ್ತಿಗಳನ್ನು ನೀಡುವುದರ ಮೂಲಕ ಅನೇಕ ಗ್ರಾಮಗಳನ್ನು ಪುರಗಳಾಗಿ ಪರಿವರ್ತಿಸಿದರು. ಪುರಗಳು ಹಾಗೂ ಪೇಟೆಗಳ ಸ್ಥಾಪನೆಗಳ ಬಗ್ಗೆ ಅನೇಕ ಉದಾಹರಣೆಗಳಿವೆ. ಬ್ರಾಹ್ಮಣರು ಧಾರ್ಮಿಕ ನಾಯಕರು, ಶಿವಶರಣರು, ಕುಶಲಕರ್ಮಿಗಳು, ವರ್ತಕರು ಹಾಗೂ ಸಂಘದ ನಾಯಕರುಗಳು ಇವುಗಳಲ್ಲಿ ನೆಲೆಸಲು ಕೆಲವು ವಿನಾಯಿತಿಗಳನ್ನು ನೀಡಲಾಗಿತ್ತು. ಆಗ ಕೆರೆಗಳನ್ನು ನಿರ್ಮಿಸಲಾಯಿತು, ಅರಣ್ಯಗಳನ್ನು ಕಡಿದು ಹಾಕಲಾಯಿತು, ಕೃಷಿ ಚಟುವಟಿಕೆಗಳನ್ನು ಪ್ರೋತ್ಸಾಹಿಸ ಲಾಯಿತು. ದೇವಾಲಯಗಳು ಹಾಗೂ ಮಠಗಳನ್ನು ನಿರ್ಮಿಸಲಾಯಿತು ಮತ್ತು ದೇವತಾ ಮೂರ್ತಿ ಗಳನ್ನು ಪ್ರತಿಷ್ಠಾಪಿಸಲಾಯಿತು. ವಿವಿಧ ಧರ್ಮದ ಪಂಗಡಗಳ ಹಾಗೂ ಮಠಗಳ ನಾಯಕರುಗಳಿಗೆ ದಾನವನ್ನು ನೀಡಲಾಯಿತು. ಹಾಗೂ ಚಿತ್ರಗಳನ್ನು ನಿರ್ಮಿಸಲಾಯಿತು. ಈ ಕಾಲದ ಶಾಸನಗಳು ಈ ಚಟುವಟಿಕೆಗಳ ಫಲದಿಂದಾಗಿ ಕೆಲವು ಸ್ಥಳಗಳು ಅವುಗಳು ಇದ್ದ ಗ್ರಾಮೀಣ ಪರಿಸರದಲ್ಲೂ ಪ್ರಾಮುಖ್ಯತೆಯನ್ನು ವಹಿಸಿದ್ದವು. ಹಾಗೂ ಅವುಗಳ ಬೆಳವಣಿಗೆಗೆ ಪ್ರೋತ್ಸಾಹವನ್ನು ನೀಡಿದವು. ಇಂತಹ ಸನ್ನಿವೇಶಗಳಲ್ಲಿ ಬ್ರಾಹ್ಮಣರು ಮತ್ತು ದೇವಾಲಯಗಳು ಬೆಳವಣಿಗೆ ಹಾಗೂ

ಬದಲಾವಣೆಯ ಅಗ್ರಸೇರರಾಗಿ ಪ್ರಾಮುಖ್ಯತೆಯನ್ನು ಹೊಂದಿದ ದೊಡ್ಡ ಸ್ಥಳಗಳಾಗಿದ್ದವು. ಈ ಎಲ್ಲಾ ಪುರಗಳು ಈ ಪದದ ಸಂಪೂರ್ಣ ಅರ್ಥದಲ್ಲಿ ನಗರ ಕೇಂದ್ರಗಳಾಗಿರಲಿಲ್ಲ ಎಂಬುದು ಸತ್ಯವಾದ ಮಾತಾಗಿದೆ. ಆದರೆ ಕಾಲಾನಂತರದಲ್ಲಿ ಕೆಲವು ಸ್ಥಳಗಳಿಗೆ ಹೆಚ್ಚಿನ ಕಾರ್ಯಗಳನ್ನು ವಹಿಸಲಾಯಿತು. ಹಾಗೂ ಈ ಕಾರಣದಿಂದಾಗಿ ಅವುಗಳು ನಗರ ಕೇಂದ್ರಗಳಾಗಿ ಬೆಳೆದವು. ಅವುಗಳ ವ್ಯಾಪಾರ ಮಾರ್ಗದಲ್ಲಿ ನೆಲೆಸಿದ ಹೊರತು ಅಥವಾ ಈ ಸ್ಥಳಗಳಲ್ಲಿ ಒಂದು ದೊಡ್ಡ ಮಾರುಕಟ್ಟೆಯ ಕಾರ್ಯ ನಿರ್ವಹಿಸಿದ ಹೊರತು ಅಥವಾ ದೊಡ್ಡ ದೇವಾಲಯ ದೇವತೆಯ ಮೂರ್ತಿ ಮಠಗಳು ನಿರ್ಮಾಣವಾಗದೇ ಅಥವಾ ಕೆಲವು ಆಡಳಿತ ಜವಾಬ್ದಾರಿಗಳನ್ನು ಹೊರಿಸಿದ ಉಪಕಛೇರಿಯ ಮುಖ್ಯ ನೆಲೆಗಳಾಗದೇ ಈ ಪುರಗಳು ಕೇವಲ ಸಣ್ಣ ಗಾತ್ರದವುಗಳಾಗಿ ಉಳಿದವು ಅಥವಾ ಕಾಲ ಕಳೆದಂತೆ ಆರ್ಥಿಕ ಅವನತಿ ಹಾಗೂ ರಾಜಕೀಯ ಅಸ್ಥಿರತೆಗಳು ತಲೆದೋರಿದ ಪರಿಣಾಮವಾಗಿ ಮರೆಯಾದವು.

ಹೊಯ್ಸಳರ ಕಾಲದಲ್ಲಿ ಅನೇಕ ಪುರಗಳು ಪಟ್ಟಣಗಳಾಗಿ ಬೆಳವಣಿಗೆ ಹೊಂದಿದ ಉದಾಹರಣೆಗಳಿವೆ. ಇದರಿಂದಾಗಿ ಪಟ್ಟಣಗಳ ಬೆಳವಣಿಗೆಯಲ್ಲಿ ಹೆಚ್ಚಳವಾಯಿತು. ಮಂಡ್ಯ ಜಿಲ್ಲೆಯ ಕ್ರಿ.ಶ. 12 ಮತ್ತು 15ನೇ ಶತಮಾನದವರೆಗಿನ ದೊಡ್ಡ ಸಂಖ್ಯೆಯ ಶಾಸನಗಳು ಗ್ರಾಮಗಳು ನಗರ ನೆಲೆಗಳಾಗಿ ಪರಿವರ್ತನೆ ಹೊಂದಿದ ಹಾಗೂ ಭೂ ಒಡೆತನ ಮತ್ತು ಇತರ ಆಸ್ತಿಗಳಾಗಿ ಒಡೆತನದ ಮೇಲೆ ಅನೇಕ ಷರತ್ತುಗಳನ್ನು ಹಾಕಿದುದರ ಉಲ್ಲೇಖವನ್ನು ನೀಡುತ್ತವೆ. ಈ ಕಾಲದಲ್ಲಿ ಆರ್ಥಿಕ ಅಭ್ಯುದಯವು ನೆಲೆಸಿದ್ದರಿಂದ ವ್ಯಾಪಾರವು ಬೆಳವಣಿಗೆಯಾಯಿತು. ವ್ಯಾಪಾರವನ್ನು ಪ್ರೋತ್ಸಾಹಿಸುವ ಉದದೇಶದಿಂದಾಗಿ ಹಲವು ಹೊಸ ಸಂತೆಗಳನ್ನು ಸ್ಥಾಪಿಸಲಾಯಿತು. ಇದರಿಂದಾಗಿ ಹಳ್ಳಿಗಳು ಪಟ್ಟಣಗಳಾಗಿ ಹಾಗೂ ಅನೇಕ ಸೌಕರ್ಯಗಳನ್ನು ಹೊಂದಿ ಬೆಳೆಯಲು ಸಹಾಯಕವಾಯಿತು. ಅಂತಹ ಪಟ್ಟಣಗಳನ್ನು ನೋಡಿಕೊಳ್ಳುವುದಕ್ಕಾಗಿ ಹೊಸ ನಿಯಂತ್ರಣಗಳನ್ನು ಹೇರಲಾಯಿತು.[61]

ಕ್ರಿ.ಶ. 1328 ರ ಯಳಂದೂರಿನ ಒಂದು ಶಾಸನವು ತಿಳಿಸುವಂತೆ ಉಪೇಂದ್ರ ಪಟ್ಟಣ ಅಥವಾ ಮದ್ದೂರನ್ನು ಹೊಯ್ಸಳ ವೀರ ಬಲ್ಲಾಳನ ಕಾಲದಲ್ಲಿ ನಿರ್ಮಿಸಲಾಗಿತ್ತು. ಈ ಪಟ್ಟಣವು ವರ್ತಕರು, ಕುಶಲಕರ್ಮಿಗಳು ಹಾಗೂ ಇತರೆ ಸಾಮಾಜಿಕ ಗುಂಪಿನ ಜೊತೆ ಸಂಪರ್ಕವನ್ನು ಹೊಂದಿದ್ದರಿಂದ ಆರ್ಥಿಕ ಪ್ರಾಮುಖ್ಯತೆಯನ್ನು ಹೊಂದಿತ್ತು. ಇದೇ ಸ್ಥಳದ ಇನ್ನೊಂದು ಶಾಸನದ

ಪ್ರಕಾರ ಉಪೇಂದ್ರಪುರದ ಮಹಾಜನರು ಒಬ್ಬ ಕುಶಲಕರ್ಮಿಗೆ ಅವನ ಕಾರ್ಯ ಕುಶಲತೆಯನ್ನು ಮೆಚ್ಚಿ ದಾನ ಮಾಡಿದ್ದರು.[62] ಒಂದು ಶಾಸನದ ಪ್ರಕಾರ ಈ ಪಟ್ಟಣವು ಕಾಲಾ ನಂತರದಲ್ಲಿ ಬೆಳೆಯುತ್ತದೆ ಎಂಬುದನ್ನು ಕಾಣುತ್ತೇವೆ. ಆ ಪಟ್ಟಣದ ಮಹಾಜನರು, ಶೆಟ್ಟರು, ವರ್ತಕರು ಹಾಗೂ ಗೌಡಜನಗಳು ದಾನ ನೀಡುವುದರಲ್ಲಿ ಭಾಗಿಯಾಗಿದ್ದರು. ಈ ದಾನಗಳನ್ನು ಮದ್ದೂರಿನ ದೇಶೀನಾಥ ದೇವರಿಗೆ ನೀಡಲಾಗಿತ್ತು.[63]

ನಂತರ ಇದೇ ಸ್ಥಳದಲ್ಲಿ ದೇವಾಲಯಗಳನ್ನು ನವೀಕರಿಸಲಾಯಿತು. ಹಾಗೂ ದಾನಗಳನ್ನು ನೀಡಲಾಯಿತು. ಪಟ್ಟಣದ ಸ್ಥಾಪನೆ ಹಾಗೂ ಅದರ ಬೆಳವಣಿಗೆಯ ಇನ್ನೊಂದು ಉದಾಹರಣೆಯು ಕೊಳ್ಳೆಗಾಲದ ಶಾಸನಗಳ ಒಂದು ಸರಣಿಯಿಂದ ತಿಳಿದು ಬರುತ್ತದೆ. ಈ ಪಟ್ಟಣವು ಮಧ್ಯಕಾಲೀನ ಯುಗದ ಪಟ್ಟಣದ ಅನೇಕ ವೈಶಿಷ್ಟ್ಯತೆಗಳಾದ ದೇವಾಲಯಗಳು ಹಾಗೂ ಮಾರುಕಟ್ಟೆಗಳು ಮತ್ತು ಸಾಮಾಜಿಕವಾಗಿ ವಿವಿಧ ಗುಂಪುಗಳಾದ ವರ್ತಕರು ಕುಶಲಕರ್ಮಿಗಳು, ಬ್ರಾಹ್ಮಣರಂತಹ ಅನೇಕ ಲಕ್ಷಣಗಳನ್ನು ಹೊಂದಿತ್ತು. ಹಲವಾರು ಪ್ರಮುಖ ಕಾರ್ಯಗಳನ್ನು ನಿರ್ವಹಿಸುತ್ತಿದ್ದ ಕಾರಣ ಇದೊಂದು ಪ್ರಮುಖ ಪಟ್ಟಣವಾಗಿತ್ತು.

ಆರ್ಥಿಕ ಪ್ರಾಮುಖ್ಯತೆಯನ್ನು ಹೊಂದಿದ್ದ ಪ್ರಬಲ ಕೇಂದ್ರಗಳು ವೈವಿಧ್ಯಮಯ ಗುಣಲಕ್ಷಣಗಳು ಹಾಗೂ ಪ್ರಾಬಲ್ಯದೊಂದಿಗೆ ನಗರ ಕೇಂದ್ರಗಳಾಗಿ ಬೆಳವಣಿಗೆಯನ್ನು ಹೊಂದಿದ್ದವು. ವ್ಯಾಪಾರ, ವಾಣಿಜ್ಯ ಹಾಗೂ ಇತರ ಆರ್ಥಿಕ ಚಟುವಟಿಕೆಗಳು ಈ ಪಟ್ಟಣಗಳ ಪ್ರಮುಖ ಅಂಗವಾಗಿದ್ದವು. ಅವುಗಳನ್ನು ವ್ಯಾಪಾರ ಮಾರ್ಗಗಳ ಮೇಲೆ ಸಾರಿಗೆ ಸಂಪರ್ಕ ಹಾಗೂ ಸಾಧನಗಳು ಸುಲಭವಾಗಿ ಸಿಗುವ ಸ್ಥಳಗಳಲ್ಲಿ ಸ್ಥಾಪಿಸಲಾಗುತ್ತಿತ್ತು. ಇಂತಹ ಪಟ್ಟಣಗಳು ಮಧ್ಯಕಾಲೀನ ಪಟ್ಟಣವಾದ ಅನೇಕ ಆಸ್ತಿಗಳನ್ನು ಹಾಗೂ ವೈವಿಧ್ಯಮಯ ಜನರ ಗುಂಪುಗಳಾದ ವರ್ತಕರು ಹಾಗೂ ಕುಶಲಕರ್ಮಿಗಳನ್ನು ಹೊಂದಿದ್ದವು. ಈ ಸ್ವರೂಪದ ಪಟ್ಟಣಗಳು ಹೆಚ್ಚು ಹೆಚ್ಚು ಕಾರ್ಯಗಳನ್ನು ನಿರ್ವಹಿಸಿದವು. ಹಾಗೂ ವಿವಿಧ ಬಗೆಯ ಪಾತ್ರಗಳನ್ನು ನಿರ್ವಹಿಸಿದವು. ಅವುಗಳ ಪ್ರಭಾವವು ಸ್ಥಳೀಯ ಪ್ರದೇಶದ ಸುತ್ತಳತೆಯಿಂದ ಬಹುದೂರ ವಿಸ್ತರಿಸಿತ್ತು.

ಹೊಯ್ಸಳರ ಕಾಲದಲ್ಲಿ ವೇಲಾಪುರಿ ಅಥವಾ ಬೇಲೂರು ಬಹಳ ಪ್ರಾಮುಖ್ಯತೆಯನ್ನು ಹೊಂದಿದ್ದ ನಗರವಾಗಿತ್ತು. ಹೊಯ್ಸಳರ ಅವನತಿಯ ನಂತರವು ಪ್ರಖ್ಯಾತ ಚನ್ನಕೇಶವ

ದೇವಾಲಯವು ವಿಜಯನಗರ ಅರಸರಿಂದ ಹಲವಾರು ಕೊಡುಗೆಗಳನ್ನು ಸ್ವೀಕರಿಸಿತು. ಆದ್ದರಿಂದ ಬೇಲೂರು ಅವನತಿಯನ್ನು ಹೊಂದಲಿಲ್ಲ. ಇದು ಚನ್ನಕೇಶವ ದೇವಾಲಯದ ಪೀಠವಾಗಿತ್ತು. ಚನ್ನಕೇಶವ ದೇವರ ಶ್ರೇಷ್ಠತೆಯನ್ನು ಬೇಲೂರು ಕೇಶವ ಮಹಾತ್ಮೆಯಲ್ಲಿ ವಿವರಿಸಲಾಗಿದೆ.[64] ವಿಜಯನಗರದ ಅರಸರ ಆಳ್ವಿಕೆಯ ಕಾಲದಲ್ಲಿ ಈ ದೇವಾಲಯದ ಜೀರ್ಣೋದ್ಧಾರ ನಡೆಯಿತು ಮತ್ತು ಎಲ್ಲ ವಿಧವಾದ ಆಚರಣೆಗಳನ್ನು ಪುನರ್ ಸ್ಥಾಪಿಸಿ ದಾನವನ್ನು ನೀಡಲಾಯಿತು.[65]

ಆಗ ಕೆಲವು ವರ್ತಕರು ತೆರಿಗೆಗಳನ್ನು ನೀಡಿದರು. ಈ ಪಟ್ಟಣವು ದಕ್ಷಿಣ ವಾರಣಾಸಿ ಎಂಬ ಹೆಸರನ್ನು ಉಳಿಸಿಕೊಂಡಿತು. ಬೇಲೂರಿನ ಧಾರ್ಮಿಕ ಪ್ರಾಮುಖ್ಯತೆಯೊಂದಿಗೆ ಆರ್ಥಿಕ ಹಾಗೂ ರಾಜಕೀಯ ಪ್ರಾಮುಖ್ಯತೆಯನ್ನು ಗಮನಕ್ಕೆ ತೆಗೆದುಕೊಳ್ಳಬಹುದು.[66] ಒಂದು ಶಾಸನದ ಪ್ರಕಾರ ಬೇಲೂರು ನಗರವು ಪಟ್ಟಣಸ್ವಾಮಿಯನ್ನು ಹೊಂದಿತ್ತು.[67]

### 5.1.4 ನಗರ ಕೇಂದ್ರಗಳ ಗಾತ್ರ ಹಂಚಿಕೆ ಹಾಗೂ ರಚನೆ

ಹಿಂದಿನ ಅಧ್ಯಾಯದಲ್ಲಿ ಹಲವು ಶತಮಾನಗಳ ಕಾಲ ಸಾಮ್ರಾಜ್ಯದ ವಿವಿಧ ಪ್ರದೇಶಗಳಲ್ಲಿ ವಿವಿಧ ಸ್ವರೂಪದ ನಗರ ಕೇಂದ್ರಗಳ ಹುಟ್ಟು, ವಿಸ್ತರಣೆ ಹಾಗೂ ನಿರ್ವಹಣೆಯಲ್ಲಿ ಪ್ರತಿಬಿಂಬ ಗೊಂಡಿರುವಂತೆ ನಗರ ಬೆಳವಣಿಗೆಯಿತ್ತು ಎಂಬುದನ್ನು ವಿವರಿಸಲಾಗಿದೆ. ಈ ರೀತಿಯಾದ ಬೆಳವಣಿಗೆಯ ವಿಧಾನವು ಏಕಮತವಾಗಿರಲಿಲ್ಲ. ಇದು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹಾಗೂ ಒಂದು ನಗರಕೇಂದ್ರದಿಂದ ಇನ್ನೊಂದು ಕೇಂದ್ರಕ್ಕೆ ವ್ಯತ್ಯಾಸವನ್ನು ಹೊಂದಿತ್ತು. ಈ ಭಿನ್ನತೆಯನ್ನು ರೂಪ ಹಾಗೂ ಗಾತ್ರಗಳೆರಡರಲ್ಲಿ ಕಾಣಬಹುದಾಗಿತ್ತು. ಆದರೆ ಪಟ್ಟಣಗಳ ವರ್ಗೀಕರಣದಲ್ಲಿ ಬಹಳಷ್ಟು ಕ್ಲಿಷ್ಟತೆಗಳಿವೆ. ಏಕೆಂದರೆ ಹೆಚ್ಚಿನ ಪಟ್ಟಣಗಳು ನಾನಾ ಬಗೆಯ ಮಿಶ್ರ ಗುಣಗಳನ್ನು ಹೊಂದಿದ್ದವು. ಆದರೂ ಕೆಲವು ಪಟ್ಟಣಗಳು ಇನ್ನಿತರ ಪಟ್ಟಣಗಳಿಗಿಂತ ಪ್ರತ್ಯೇಕವಾದ ಕೆಲವು ವೈಶಿಷ್ಟತೆಗಳನ್ನು ಹೊಂದಿದ್ದವು, ಇವು ಅವುಗಳು ನಿರ್ವಹಿಸುತ್ತಿದ್ದ ಕಾರ್ಯಗಳಲ್ಲಿ ಸ್ಪಷ್ಟವಾಗಿತ್ತು. ಈಗಿನ ಪ್ರಸ್ತುತ ಅಧ್ಯಯನದಲ್ಲಿ ಪಟ್ಟಣಗಳ ಗಾತ್ರ ಹಾಗೂ ಅವುಗಳ ಹಂಚಿಕೆಯ ವಿಧಾನವನ್ನು ನಿರ್ಧರಿಸಲು ಒಂದು ಪ್ರಯತ್ನವನ್ನು ಮಾಡಲಾಗಿದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ ವಿವಿಧ ಗಾತ್ರಗಳ ಪಟ್ಟಣಗಳನ್ನು ಜೋಡಿಸುವುದರ ಒಂದು ವಿಶ್ಲೇಷಣೆ ಅಥವಾ ನಗರ ರಚನೆಯ ಒಂದು ವಿಶ್ಲೇಷಣೆಯಾಗಿದೆ. ನಗರ ರಚನೆಯು ವಿವಿಧ ಗಾತ್ರಗಳ ಹಲವು ಶತಮಾನಗಳನ್ನು ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ಹರಡಿದ್ದ ಪಟ್ಟಣಗಳ ಒಂದು ಜೋಡಣೆ

ಹಾಗೂ ಹಂಚಿಕೆ ಎಂದು ಹೇಳಬಹುದು. ಈ ನಗರ ರಚನೆಯು ಇನ್ನೊಂದು ವೈಶಿಷ್ಟತೆಯನ್ನು ಹೊಂದಿತ್ತು. ಅದೇನೆಂದರೆ ದೇವಾಲಯಗಳು, ಅರಮನೆಗಳು, ಕಟ್ಟಡಗಳು ಹಾಗೂ ಅವುಗಳಲಿದ್ದ ಗೋಡೆಗಳನ್ನು ಹೊಂದಿದ್ದ ಪಟ್ಟಣಗಳು ತಮ್ಮೊಳಗೆ ಒಂದು ರೀತಿಯಾದ ರಚನೆಯನ್ನು ಹೊಂದಿದ್ದವು. ಈ ರೀತಿಯಾದ ರಚನೆಯು ಹಲವು ಶತಮಾನಗಳ ಕಾಲ ಆದ ಅಭಿವೃದ್ಧಿಯ ಫಲವಾಗಿತ್ತು.

ಹೊಯ್ಸಳರ ಸಾಮ್ರಾಜ್ಯದಲ್ಲಿ ಬರುವ ಹಲವಾರು ಬಗೆಯ ನಗರ ಕೇಂದ್ರಗಳ ಅಧ್ಯಯನದ ಆಧಾರದ ಮೇಲೆ ಇದಕ್ಕೆ ಸಂಬಂಧಿಸಿದಂತೆ ಒಂದು ಅಭಿಪ್ರಾಯಕ್ಕೆ ಬರಬಹುದು. ಇಂತಹ ಅಧ್ಯಯನವು ಶಾಸನಗಳು ಹಾಗೂ ಸಾಹಿತ್ಯದಲ್ಲಿ ದೊರೆಯುವ ಕೆಲವು ಅಲ್ಲಿ ಇಲ್ಲಿ ಸಿಕ್ಕುವ ಉಲ್ಲೇಖಗಳು ಹಾಗೂ ವಿವರಣೆಗಳು ಆಧಾರವಾಗಿದೆ.

ಹೊಯ್ಸಳರ ಸಾಮ್ರಾಜ್ಯದಲ್ಲಿ ನಗರ ಕೇಂದ್ರಗಳು ವ್ಯವಸ್ಥಿತವಾಗಿದ್ದವು. ಅವುಗಳು ನಿರ್ವಹಿಸಿದ ಕಾರ್ಯ ಹಾಗೂ ಪಾತ್ರದ ದೃಷ್ಟಿಯಲ್ಲಿ ಮೂಡಿದ ಒಂದು ಸೂಕ್ಷ್ಮ ಪರಿಶೀಲನೆಯಿಂದ ಸಾಮ್ರಾಜ್ಯದಲ್ಲಿ ವಿವಿಧ ಪಟ್ಟಣಗಳನ್ನು ಒಂದು ನಿರ್ದಿಷ್ಟ ವಿಧಾನದಲ್ಲಿ ಜೋಡಿಸಿ ಹಂಚಲಾಗಿತ್ತೆಂದು ತಿಳಿದು ಬರುತ್ತದೆ. ಗುಣಾತ್ಮಕ ಹಾಗೂ ಮಾಹಿತಿಯ ಆಧಾರದ ಮೇಲೆ ಒಂದು ನಿರ್ದಿಷ್ಟ ಪಟ್ಟಣಕ್ಕೆ ಸಂಬಂಧಿಸಿದಂತೆ ಒಂದು ಅಭಿಪ್ರಾಯಕ್ಕೆ ಬರಬಹುದು. ಒಂದು ಪಟ್ಟಣವು ನಿರ್ವಹಿಸಿದ ಪಾತ್ರ ಹಾಗೂ ಕಾರ್ಯಗಳ ವಿಶ್ಲೇಷಣೆಯ ಆಧಾರದ ಮೇಲೆ ಮೂಡಿದ ಅಭಿಪ್ರಾಯ ಗುಣಾತ್ಮಕ ಹಾಗೂ ಅಮೂರ್ತವಾಗಿದೆ. ಪಟ್ಟಣಗಳ ವರ್ಗೀಕರಣವನ್ನು ಅವುಗಳು ನಿರ್ವಹಿಸುವ ಕಾರ್ಯಗಳು ಹಾಗೂ ಅವುಗಳ ಕಾರ್ಯಾಚರಣೆಯ ಸಾಂಧ್ರತೆಯ ಆಧಾರದ ಮೇಲೆ ಅವುಗಳ ಗಾತ್ರದ ಪ್ರಕಾರವಾಗಿ ಮಾಡಬಹುದು. ಇದರ ಜೊತೆಗೆ ಕಾಲಕಳೆದಂತೆ ಈ ಸ್ಥಳಗಳ ಮೇಲೆ ನಗರೀಕರಣದ ಹೇರಿಕೆಯಾಧಾರದ ಮೇಲೆ ಪಟ್ಟಣಗಳ ಗಾತ್ರದಲ್ಲಿ ಭಿನ್ನತೆಗಳಿದ್ದವು. ಏಕೆಂದರೆ ನಗರೀಕರಣದ ವಿವಿಧ ಅಂಶಗಳ ಹಿಂತೆಗೆತ ಅಥವಾ ಪ್ರಭಾವವಾಗಿದೆ. ಈಗಿನ ಅಧ್ಯಯನವು ಒಂದು ವಿಧದ ರಚನಾಕ್ರಮವಿದ್ದುದನ್ನು ತೋರಿಸುತ್ತದೆ. ಹಾಗೂ ಈ ವಿಧಾನದಲ್ಲಿ ವಿವಿಧ ಗಾತ್ರಗಳ ನಗರ ಕೇಂದ್ರಗಳು ವಿವಿಧ ಹಂತಗಳಲ್ಲಿ ನೆಲೆಸಿದ್ದವು. ಈ ಸಂಬಂಧವಾಗಿ ಎರಡು ಕುತೂಹಲಕಾರಿಯಾದ ಅಧ್ಯಯನಗಳನ್ನು ಮಾಡಬಹುದು. ರವೀಂದ್ರಕುಮಾರ್‌ರವರು ವಸಾಹತು ಭಾರತದಲ್ಲಿನ ನಗರ ಸಮಾಜದ ಬದಲಾಗುತ್ತಿರುವ ರಚನೆಯನ್ನು ಅಧ್ಯಯನ ಮಾಡುತ್ತಾರೆ. ಇಂತಹ ಅಧ್ಯಯನವನ್ನು

ಮಾಡುವಾಗ ವಸಾಹತು ಪೂರ್ವ ಭಾರತೀಯ ನಗರ ರಚನೆಯತ್ತ ದೃಷ್ಟಿಯನ್ನು ಹರಿಸುತ್ತಾರೆ. ಅವರು ಹೇಳುವಂತೆ ವಸಾಹತು ಪೂರ್ವ ಭಾರತದಲ್ಲಿ ನಕ್ಷೆ ಬರೆಯುವನೊಬ್ಬನು ಭಾರತದ ವಿವಿಧ ಪ್ರದೇಶಗಳಲ್ಲಿ ನೆಲೆಸಿದ್ದ ಇಪ್ಪತ್ತು ಅಥವಾ ಅದಕ್ಕಿಂತ ಮಿಗಿಲಾದ ನಗರಗಳನ್ನು ಊಹಿಸುತ್ತಿದ್ದ. ಅದೇ ನಕ್ಷೆ ಬರೆಯುವವನು ವಿವರವಾಗಿ ಪರಿಶೀಲಿಸುವ ಪ್ರದೇಶಗಳು ಮೇಲೆ ತಿಳಿಸಿದವುಗಳಾಗಿದ್ದರೆ ಅವನು ಆ ಪ್ರದೇಶದಲ್ಲಿ ಅವನತಿಯ ಹಂತದಲ್ಲಿದ್ದ ಪಟ್ಟಣಗಳನ್ನು ಊಹಿಸುತ್ತಿದ್ದನು. ದೊಡ್ಡ ನಗರಗಳು ಉಪಖಂಡದ ಎಲ್ಲೆಡೆ ಸಮತಲವಾಗಿ ವಿಸ್ತರಿಸಿದ್ದವು ಹಾಗೂ ಅವನತಿಯ ಗುಂಪಿನಲ್ಲಿದ್ದ ಪಟ್ಟಣಗಳು ಮತ್ತು ಪಟ್ಟಣನೆಲೆಗಳು ಈ ದೊಡ್ಡ ಪಟ್ಟಣಗಳೊಂದಿಗೆ ಸಂಪರ್ಕವನ್ನು ಹೊಂದಿದ್ದವು. ನಗರ ರಚನೆಯ ಅತೀ ಸಣ್ಣ ಶಾಖೆಯು ಕಸಬಾಗಿತ್ತು. ಇದು ಇಪ್ಪತ್ತು ಹಳ್ಳಿಗಳನ್ನೊಳಗೊಂಡು ಗ್ರಾಮೀಣ ಪ್ರದೇಶದ ಆಡಳಿತ, ರಾಜಕೀಯ ಹಾಗೂ ಆರ್ಥಿಕ ಭವಿಷ್ಯವನ್ನು ನಿರ್ಧರಿಸುತ್ತಿತ್ತು.

ನಗರ ರಚನೆಯ ಲಂಬಾಂತರ ಕೋನದಲ್ಲಿ ಕಸಬಾವು ಅತ್ಯಂತ ಕೆಳ ಶ್ರೇಣಿಯಲ್ಲಿ ನೆಲೆಸಿತ್ತು. ಕಸಬಾಕ್ಕಿಂತ ಗಾತ್ರದಲ್ಲಿ ಹೆಚ್ಚು ಹಾಗೂ ರಚನೆಯಲ್ಲಿ ಸಂಕೀರ್ಣವಾಗಿದ್ದ ಒಂದೆರಡು ನಗರ ಗುಂಪುಗಳು ಕಸಬಾ ಹಾಗೂ ದೊಡ್ಡ ನಗರದ ಮಧ್ಯೆ ಪ್ರವೇಶ ಮಾಡಿದವು. ಈ ದೊಡ್ಡ ನಗರದ ರಚನೆಯು ಸಮತಲ ಕೋನಗಳ ಭಾಗವಾಗಿತ್ತು. ದೊಡ್ಡ ನಗರಗಳು ನಗರ ಶ್ರೇಣಿಯ ತುತ್ತ ತುದಿಯಲ್ಲಿದ್ದವು ಮಧ್ಯಮ ಗಾತ್ರದ ಪಟ್ಟಣಗಳು ಮಧ್ಯಭಾಗದಲ್ಲಿ ಹಾಗೂ ಕಸಬು ಕೆಳಮಟ್ಟ ದಲ್ಲಿದ್ದವು. ಶೃಂಗ ಸ್ಥಾನದಲ್ಲಿದ್ದ ನಗರ ಹಾಗೂ ಅದು ನೆಲೆಸಿದ್ದ ನಗರ ಪಿರಮಿಡ್ಡಿನ ವಿಶಿಷ್ಟ ಲಕ್ಷಣಗಳು ಸ್ಥಳದಿಂದ ಸ್ಥಳಕ್ಕೆ ಭಿನ್ನವಾಗಿದ್ದವು. ಹಾಗೂ ಇವುಗಳ ಮಿಶ್ರ ಗುಣವು ಆ ಪ್ರದೇಶದ ಆರ್ಥಿಕ ರಚನೆ ಹಾಗೂ ಸಾಮಾಜಿಕ ಸಂಘಟನೆಯ ಮೇಲೆ ಆಧಾರವಾಗಿತ್ತು. ವಿದ್ವಾಂಸರು ನಗರ ಸಮಾಜದ ಗರ್ಭದಲ್ಲಿ ಕಂಡುಬರುವ ಸಮತಲ ವಿಸ್ತೀರ್ಣಗಳ ಪಟ್ಟಣಗಳ ಸರಪಳಿ, ವೈವಿಧ್ಯಮಯ ಪಾತ್ರಗಳು ಹಾಗೂ ಸಂಕೀರ್ಣ ರಚನೆಯೆಡೆಗೆ ಗಮನವನ್ನು ಹರಿಸುತ್ತಾರೆ.[68]

ಮತ್ತೊಬ್ಬ ವಿದ್ವಾಂಸರಾದ ಕೆ.ಎನ್.ಸಿಂಗ್‌ರವರು ಇದಕ್ಕೆ ಸಂಬಂಧಿಸಿದಂತೆ ಬೇರೆ ರೀತಿಯ ಒಂದು ಅಧ್ಯಾಯವನ್ನು ಮಾಡಿದ್ದಾರೆ. ಉತ್ತರ ಪ್ರದೇಶದ ಮಧ್ಯಕಾಲೀನ ಪಟ್ಟಣ ಹಾಗೂ ಗ್ರಾಮೀಣ ವಸಾಹತುವಿನ ಪ್ರಾದೇಶಿಕ ಅಧ್ಯಯನವನ್ನು ಮಾಡುತ್ತ ಕೆಲವು ಸಲಹೆಗಳನ್ನು ಮುಂದಿಡುತ್ತಾರೆ. ಅವರು ಹೇಳುವಂತೆ ಮಧ್ಯಕಾಲೀನ ಯುಗದಲ್ಲಿ ಪ್ರಬಲ ವಂಶದ ಬಂಧುತ್ವದ

ಕಾರ್ಯ ಚಟುವಟಿಕೆಯ ಆಧಾರದ ಮೇಲೆ ಪ್ರತಿಯೊಂದು ಪ್ರದೇಶದಲ್ಲೂ ಮೂರು ಹಂತದ ವಿಂಗಡಣೆಯು ಏರ್ಪಟ್ಟಿತ್ತು. ಆಕ್ರಮಿತ ಪ್ರದೇಶಗಳು ಪರಗಣವಾದವು ಇದನ್ನು ತಪ್ಪುಗಳು ಎಂಬ ದ್ವಿತೀಯ ವರ್ಗವಾಗಿ ವಿಂಗಡಿಸಲಾಯಿತು. ಹಾಗೂ ತಪ್ಪುಗಳನ್ನು ಗೌನ್ ಅಥವಾ ಗ್ರಾಮ ಕೇಂದ್ರಗಳಾಗಿ ಪುನಃ ಸಣ್ಣಪಟ್ಟಣ ಪ್ರದೇಶಗಳಾಗಿ ವಿಂಗಡಿಸಲಾಯಿತು. ಈ ಭೂಪ್ರದೇಶಗಳ ವಿಂಗಡನೆಗೆ ಸರಿ ಹೊಂದುವಂತೆ ಮೂರು ಮೂಲ ವಸಾಹತು ನೆಲೆಗಳು ನಿರ್ಮಾಣವಾದವು ಪರಗಣ ಹಾಗೂ ತಪ್ಪು ಮುಖ್ಯ ನೆಲೆಗಳು ಅರೆನಗರ ವಸಾಹತುಗಳಾಗಿ ಬೆಳೆದವು ಗೌನ್ ಮೂಲ ಗ್ರಾಮೀಣ ವಸಾಹತು ಕೇಂದ್ರಗಳಾದವು.[69]

ಈ ರೀತಿಯಾಗಿ ಸಣ್ಣ ಗಾತ್ರದ ನಗರ ಪ್ರದೇಶಗಳು ಒಂದು ಸೀಮಿತವಾದ ಮಾದರಿಯಲ್ಲಿ ತಮ್ಮ ಪಾತ್ರಗಳನ್ನು ನಿರ್ವಹಿಸುತ್ತಿದ್ದವು ಆದರೂ ಅವುಗಳ ಸಂಖ್ಯೆ ಬಹಳಷ್ಟಿತ್ತು. ಅವುಗಳ ಕಾರ್ಯಕ್ಷೇತ್ರವು ಹತ್ತಿರದ ಪ್ರದೇಶಗಳಿಗಷ್ಟೇ ಸೀಮಿತವಾಗಿತ್ತು.

## ಅಧ್ಯಾಯ 6

### 6.1 ಮಧ್ಯಮ ಶ್ರೇಣಿಯ ಪಟ್ಟಣಗಳು

ಈ ಪಟ್ಟಣಗಳು ಮಧ್ಯಕಾಲೀನ ಪಟ್ಟಣದ ಹೆಚ್ಚಿನ ಅಂಶಗಳನ್ನು ಹೊಂದಿದ್ದವು ಇವುಗಳ ಕಾರ್ಯಕ್ಷೇತ್ರ ಹಾಗೂ ಪ್ರಭಾವವು ಸ್ಥಳೀಯ ಪ್ರದೇಶದಾಚೆ ವಿಸ್ತರಿಸಿತ್ತು. ಅವುಗಳು ನಿರ್ವಹಿಸುತ್ತಿದ್ದ ವಿವಿಧ ಕಾರ್ಯಗಳೊಂದಿಗೆ ಅಂದರೆ ಆರ್ಥಿಕ, ರಾಜಕೀಯ, ಧಾರ್ಮಿಕ ಕಾರ್ಯಗಳೊಂದಿಗೆ ಕೆಲವು ದೊಡ್ಡ ಪಾತ್ರಗಳು ಸೇರಿದ್ದವು. ನಗರ ಕೇಂದ್ರಗಳ ನಿಯಮಿತ ಪಾತ್ರಕ್ಕಿಂತ ಈ ಪಟ್ಟಣಗಳು ಬಹಳ ಪ್ರಾಮುಖ್ಯತೆಯನ್ನು ಪಡೆದಿದ್ದವು. ಆದರೆ ಸಂಖ್ಯೆಯಲ್ಲಿ ಇವುಗಳು ವಿರಳವಾಗಿದ್ದವು.

ಉದಾಹರಣೆಗೆ ತಲಕಾಡು ನಗರ ಬಹಳ ತ್ವರಿತವಾಗಿ ಬೆಳೆಯಿತು. ಏಕೆಂದರೆ ತಲಕಾಡು ಪುರಸಭಾ ಆಡಳಿತ ದೃಷ್ಟಿಯಿಂದ ಒಂದು ಪ್ರಮುಖ ಸ್ಥಳವಾಗಿತ್ತು.[70] ತಲಕಾಡಿನಲ್ಲಿ ದೇವಾಲಯ ಗಳು ಮತ್ತು ಮಾರುಕಟ್ಟೆಗಳಿದ್ದವು. ಇದರಿಂದಾಗಿ ತಲಕಾಡು ಜಡವಾಗಿ ಉಳಿಯದೇ ಬೆಳವಣಿಗೆ ಹಾಗೂ ವಿಸ್ತರಣೆ ಲಕ್ಷಣವನ್ನು ತೋರಿಸಿತು. ಇದಲ್ಲದೆ ಹೊಯ್ಸಳರ ರಾಜಧಾನಿಯಾಗಿದ್ದ ದೋರಸಮುದ್ರವು ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡಿತ್ತು. ಈ ಸ್ಥಳದಲ್ಲಿ ಜಾತ್ರೆಯು ನಡೆಯುತ್ತಿತ್ತು.[71] ಬೇಲೂರು ಚನ್ನಕೇಶವ ದೇವರ ವಾಸಸ್ಥಾನವಾಗಿತ್ತು.[72] ಅರಸೀಕೆರೆಯ ಪ್ರಾರಂಭದ ಕಾಲದಿಂದಲ್ಲೂ ಮನ್ನಣೆಯನ್ನು ಗಳಿಸಿದ್ದ ಪಟ್ಟಣವಾಗಿತ್ತು ಹಾಗೂ ಈ ಕಾಲದಲ್ಲಿ ಆರ್ಥಿಕ ಪ್ರಾಮುಖ್ಯತೆಯನ್ನು ಹೊಂದಿದ ಸ್ಥಳವಾಗಿ ಉಳಿಯಿತು.[73]

ಈ ರೀತಿಯಾಗಿ ಮೇಲೆ ತಿಳಿಸಿದ ಪಟ್ಟಣಗಳು ಸಾಮ್ರಾಜ್ಯದ ಹಲವು ಭಾಗಗಳಲ್ಲಿ ತಲೆಯೆತ್ತಿ ಹೆಚ್ಚು ಪ್ರಾಮುಖ್ಯತೆಯುಳ್ಳ ನಗರ ಕೇಂದ್ರವಾಗಿದ್ದವು.

ಬೇಲೂರು ನಗರದ ಸುಂದರ ರಮಣೀಯ ವಿವರಣೆಯು ಅಬ್ದುಲ್ ರಜಾಕನ ಒಂದು ದೀರ್ಘ ವರ್ಣನೆಯಲ್ಲಿ ಕಂಡು ಬರುತ್ತದೆ. ಅವನು ಈ ರೀತಿ ವಿವರಿಸುತ್ತಾನೆ. "ಬೇಲೂರೆಂಬ ಪಟ್ಟಣವನ್ನು ನಾನು ತಲುಪಿದೆ, ಅದರ ಮನೆಗಳು ಅರಮನೆಯಂತೆ ಇದ್ದವು ಅದರಲ್ಲಿ ಮೂರ್ತಿಗಳ ಒಂದು ದೇವಾಲಯವಿದೆ. ಇದು ಎಷ್ಟು ವೈಭವವಾಗಿದೆಯೆಂದರೆ ಹಲವು ಪರಸ್ಥಳಗಳು ದೂರದಿಂದಲ್ಲೂ ಇದು ಕಾಣುತ್ತದೆ. ಇಂತಹ ಕಟ್ಟಡವನ್ನು ವಿವರಿಸಲು ಉತ್ಪ್ರೇಕ್ಷೆಯ ಶಂಕೆಗೊಳಗಾಗದೆ ಸಾರ್ಥಯವಾಗುವುದಿಲ್ಲ". ಆ ಪಟ್ಟಣದ ರಚನಾ ದೃಶ್ಯವನ್ನು ಇದೇ ಪ್ರವಾಸಿಗನ

ಬರವಣಿಗೆಗಳ ಆಧಾರದ ಮೇಲೆ ಕಲ್ಪಿಸಬಹುದು. ಪಟ್ಟಣದ ಮಧ್ಯಭಾಗದಲ್ಲಿ ತೆರೆದ ಜಾಗವಿತ್ತು ಹಾಗೂ ಉದ್ಯಾನವನವಿತ್ತು. ಅಲ್ಲಿ ಮರದ ಎಲೆಗಳಂತೆ ಎಲ್ಲಾ ವಿಧದ ಗುಲಾಬಿಗಳು ಇದ್ದವು. ತೊರೆಗಳ ಅಂಚುಗಳಲ್ಲಿ ಹೆಚ್ಚು ಸೈಪ್ರೆಸ್ ಮರಗಳು ತಲೆಯೆತ್ತಿ ನಿಂತಿದ್ದವು. ಅವುಗಳ ಗೋಪುರಾಕಾರದ ನೆತ್ತಿಯು ನೀರಿನಲ್ಲಿ ಪ್ರತಿಬಿಂಬವಾಗುತ್ತದೆ. ಬಾಳೆಯ ಮರಗಳು ಅವುಗಳ ಚಿಗುರುಗಳನ್ನು ಹೊಂದಿದ ರೆಂಬೆಗಳನ್ನು ಹೊರ ಚಾಚುತ್ತಿವೆ. ಇದು ಯಾವ ರೀತಿ ಕಾಣುವುದೆಂದರೆ ಸ್ವರ್ಗವೇ ಈ ಸೌಂದರ್ಯ ರಾಶಿಗೆ ಮನಸೋತು ಆನಂದ ಆವೇಶಗಳಿಂದ ಈ ಸ್ಥಳವನ್ನು ಬಗ್ಗಿ ನೋಡುತ್ತಿರುವುದೇನೋ ಎಂಬಂತೆ ಕಾಣುತ್ತದೆ. ಈ ಹುಲ್ಲುಹಾಸಿನ ಇಡೀ ಭೂಮಿ ಈ ಆನಂದಮಯ ಬೀಡಿನ ಸುತ್ತಮುತ್ತಲಿನ ಜಾಗವನ್ನೆಲ್ಲಾ ನಯವಾದ ಕಲ್ಲುಗಳಿಂದ ಜೋಡಿಸಿ ದಾರಿ ಮಾಡಲಾಗಿದೆ. ಇವುಗಳನ್ನು ಎಷ್ಟು ಸೊಗಸಾಗಿ ಜೋಡಿಸಲಾಗಿದೆಯೆಂದರೆ ಇವುಗಳೆಲ್ಲ ಕಲ್ಲುಗಳ ಒಂದೇ ಚಪ್ಪಡಿ ಕಲ್ಲೇನೋ ಎನ್ನುವಂತೆ ಕಾಣುತ್ತದೆ. ಹಾಗೂ ಆಕಾಶದ ಒಂದು ತುಣುಕನ್ನು ಭೂಮಿಗೆ ತರಲಾಗಿದೆಯೇನೋ ಎಂಬಂತೆ ಕಾಣುತ್ತದೆ. ವೇದಿಕೆಯ ಮಧ್ಯಭಾಗದಲ್ಲಿ ನೀಲಿಕಲ್ಲುಗಳಿಂದ ನಿರ್ಮಿಸಲಾಗಿದ್ದ ಕಪೋಲವನ್ನು ಹೊಂದಿದ್ದ ಒಂದು ಕಟ್ಟಡವು ಕಾಣಿಸುತ್ತದೆ. ಹಾಗೂ ಇದು ಒಂದು ಹಂತದಲ್ಲಿ ಕೊನೆಗೊಳ್ಳುತ್ತದೆ. ಕಲ್ಲಿನ ಪ್ರಕಾರಗಳು ಮೂರು ಸಾಲಿನ ಚಿತ್ರಗಳನ್ನು ಹೊಂದಿದೆ. ಈ ಗುಮ್ಮಟದ ಬಗ್ಗೆ ಏನು ಹೇಳುವುದು ಇದು ತನ್ನ ಅಮೋಘ ಕೆತ್ತನೆಯಿಂದ ಸ್ವರ್ಗದ ರುಚಿಯನ್ನು ಇಡೀ ಪ್ರಪಂಚಕ್ಕೆ ಉಣಬಡಿಸಿದೆ. ಅದರ ವರ್ತುಲಾಕಾರದ ಕಮಾನುಗಳು ವೈಭವಯುತವಾಗಿದ್ದು ಹೊಸ ಚಂದಿರನನ್ನು ಹೋಲುತ್ತಿತ್ತು. ಅದರ ವಿಸ್ತಾರವನ್ನು ಆಕಾಶವೂ ಚಾಚಿತ್ತು ಇದು ಎಷ್ಟರ ಮಟ್ಟಿಗೆ ಒಂದು ಕಲ್ಪನಾ ಚಿತ್ರವಾಗಿತ್ತೆಂದರೆ ಕೇವಲ ಒಂದು ತಿಂಗಳ ಅವಧಿಯಲ್ಲಿ ಎಲ್ಲವನ್ನು ರೇಷ್ಮೆ ವಸ್ತ್ರದ ಮೇಲೆ ಚಿತ್ರಿಸುವುದು ಅಸಾಧ್ಯವಾದ ಮಾತು, ಕಟ್ಟಡದ ಬುಡದಿಂದ ಹಿಡಿದು ನೆತ್ತಿಯವರೆಗೂ ಚಿತ್ರಗಳಿಲ್ಲದ ಒಂದು ಹಸ್ತದಗಲ ಜಾಗವನ್ನು ನಾವು ಕಾಣೆವು, ಈ ದೇವಾಲಯವು ನಾಲ್ಕು ಜಗಲಿಯ ರಚನೆಯನ್ನು ಹೊಂದಿತ್ತು. ಈ ರಚನೆಯು ಉದ್ದದಲ್ಲಿ ಮೂವತ್ತು ಗೇಜ್ ಅಗಲದಲ್ಲಿ ಇಪ್ಪತ್ತು ಎತ್ತರದಲ್ಲಿ ಐವತ್ತು ಗೇಜ್ ಇತ್ತು. ಅದರ ಶಿರವು ಆಕಾಶದತ್ತ ಚಾಚುತ್ತಿರುವುದರಿಂದ ಮೊದಲು ಕಲ್ಲುಗಳಿಲ್ಲದ ಕಮಾನು ಈಗ ಹೊಂದಿರುವಂತೆ ಕಾಣಿಸುತ್ತದೆ. ಮಳೆಗಾಳಿಗೆ ಎದೆಯೊಡ್ಡಿ ನಿಂತ ಈ ಕಲ್ಲುಗಳಿಂದಾಗಿ ಆ ಗುಮ್ಮಟದ ಬಂಗಾರವು ಮಿಶ್ರಲೋಹಕ್ಕೆ ತಿರುಗಿದೆ. ಸಣ್ಣ ಹಾಗೂ ದೊಡ್ಡ ಕಟ್ಟಡಗಳೆಲ್ಲವು ಶ್ರೇಷ್ಠ ಚಿತ್ರಕಲೆ ಹಾಗೂ ವಾಸ್ತುಶಿಲ್ಪದಿಂದ ತುಂಬಿ ಹೋಗಿವೆ.[74]

### 6.2 ನಗರ ಆಡಳಿತ

ನಗರ ಅಧ್ಯಯನಗಳ ಒಂದು ಪ್ರಮುಖ ವೈಶಿಷ್ಟವು ನಗರ ಆಡಳಿತ ಅಥವಾ ಪಟ್ಟಣಗಳು ಹಾಗೂ ನಗರಗಳ ನಿರ್ವಹಣೆಯನ್ನು ಗಮನಿಸುವುದಾಗಿದೆ. ಪಟ್ಟಣಗಳು ಭಿನ್ನವಾದ ವಸಾಹತು ಗಳಾಗಿದ್ದರಿಂದ ಅವುಗಳಿಗೆ ಪ್ರತ್ಯೇಕವಾದ ಆಡಳಿತ ನಿರ್ವಹಣೆಯ ಅವಶ್ಯಕತೆಯಿತ್ತು. ಪಟ್ಟಣದ ಸಂಯೋಜನೆ ಅದರ ಅಧಿಕಾರ ಕಾರ್ಯಗಳು ಹಾಗೂ ಅಧಿಕಾರಿಗಳು ಮತ್ತು ಅವರ ಚಟುವಟಿಕೆಗಳ ಒಂದು ಅಧ್ಯಯನವು ಆ ಕಾಲದ ನಗರಕೇಂದ್ರಗಳು ಉತ್ತಮ ಆಡಳಿತ ನಿರ್ವಹಣೆ ಯನ್ನು ಹೊಂದಿದ್ದವು ಎಂಬ ಅಂಶವನ್ನು ಹೊರತು ಪಡಿಸುತ್ತದೆ. ಈ ವಿಷಯದಲ್ಲಿ ಪ್ರಾಚೀನ ರೂಢಿಗಳು ಹಾಗೂ ಆಚರಣೆಗಳ ಪರಿಣಾಮವು ಸಾಕಷ್ಟಿತ್ತು. ಹಿಂದಿನ ಶತಮಾನಗಳಿಂದ ನಡೆದುಕೊಂಡು ಬಂದಿದ್ದ ಆಡಳಿತ ವಿಧಾನವನ್ನು ಮಧ್ಯಕಾಲೀನ ಸನ್ನಿವೇಶಗಳಿಗೆ ಸೂಕ್ತವಾಗುವಂತೆ ವಿಸ್ತರಿಸಲಾಯಿತು ಅಥವಾ ಅಳವಡಿಸಿಕೊಳ್ಳಲಾಯಿತು. ಆದರೂ ಪೌರಾಡಳಿತ ವಿಷಯಗಳಲ್ಲಿ ಸ್ಥಳೀಯ ಶಕ್ತಿಯು ಹೆಚ್ಚಿನ ಪ್ರಾಬಲ್ಯವನ್ನು ಹೊಂದಿತ್ತು. ಹೊಯ್ಸಳರ ಅಂತ್ಯ ಭಾಗದಲ್ಲಿ ಸೈನಿಕ ವರ್ಗದವರ ಪ್ರಾಬಲ್ಯವು ಹೆಚ್ಚಾಯಿತು ಹಾಗೂ ಅವರು ಪಟ್ಟಣಗಳು ಹೊಂದಿದ್ದ ಸ್ವಾತಂತ್ರ್ಯವನ್ನು ಸ್ವಲ್ಪ ಪಟ್ಟಿಗೆ ಹರಣ ಮಾಡಿದರು. ನಾಯಕರು ರಾಜಕೀಯ ದೃಶ್ಯದಲ್ಲಿ ಕಾಣಿಸಿಕೊಳ್ಳಲು ಪ್ರಾರಂಭಿಸಿದರು. ಪಟ್ಟಣಗಳು ಹಾಗೂ ಕೋಟೆಗಳನ್ನು ತಮ್ಮ ಚಟುವಟಿಕೆಗಳ ಕೇಂದ್ರಗಳನ್ನಾಗಿ ಮಾಡಿಕೊಂಡು ಬಹುಶಃ ಅವರ ಆಡಳಿತದ ಮೇಲೆ ಪ್ರಾಬಲ್ಯವನ್ನು ಹೊಂದಿದ್ದರು. ಪಟ್ಟಣಗಳ ಆಡಳಿತವನ್ನು ಅಧ್ಯಯನ ಮಾಡುವಾಗ ಪಟ್ಟಣ ಸಭೆಗಳು ನಿರ್ವಹಿಸಿದ ಪಾತ್ರ ಅವುಗಳು ಚಲಾಯಿಸಿದ ಅಧಿಕಾರ ಹಾಗೂ ಕಾರ್ಯಗಳು ಮತ್ತು ಪಟ್ಟಣಗಳ ಅಧಿಕಾರಗಳ ಚಟುವಟಿಕೆ ಗಳನ್ನು ಅಧ್ಯಯನ ಮಾಡಬೇಕು. ನಮ್ಮ ಅಧ್ಯಯನದ ಆಧಾರಗಳು ಪಟ್ಟಣಗಳ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದ ಅಂಗಗಳು ಹಾಗೂ ಅಧಿಕಾರಿಗಳು ಹಾಗೂ ಆ ಕಾಲದ ಪೌರ ಸಂಘಟನೆಯ ಬಗ್ಗೆ ಒಂದು ಪರಿಚಯವನ್ನು ನೀಡುತ್ತದೆ.

### 6.3 ಪಟ್ಟಣ ಸಭೆ

ಸಾಮಾನ್ಯವಾಗಿ ಪಟ್ಟಣಗಳು ತಮ್ಮದೇ ಆದ ಸಭೆಗಳನ್ನು ಹೊಂದಿದ್ದವು ಹಾಗೂ ಈ ಸಭೆಗಳು ಪ್ರತಿನಿಧಿಗಳು ಅಥವಾ ಸದಸ್ಯರುಗಳಿಂದ ಕಾರ್ಯ ನಿರ್ವಹಿಸುತ್ತಿದ್ದವು. 'ನಗರ' ಎಂಬ ಪದವು 'ಪಟ್ಟಣಸಭೆ'ಯನ್ನು ಸೂಚಿಸಲು ಬಳಸಲ್ಪಡುತ್ತಿತ್ತು. ಪಟ್ಟಣ ಸಭೆಯನ್ನು ಸೂಚಿಸುತ್ತಿದ್ದ ಇತರ ಪದಗಳೆಂದರೆ ನಕರ, ನಕಾರ, ನಗರ ಸಮೂಹ ಅಥವಾ ಕೇವಲ ಸಮೂಹಗಳಾಗಿದ್ದವು.

ಪಟ್ಟಣ ಸಭೆಯ ಸ್ವರೂಪ ಅಧಿಕಾರ ಹಾಗೂ ಕಾರ್ಯಗಳನ್ನು ತಿಳಿಯಲು ಬಹಳ ಪ್ರಮುಖವಾದ ಕೃತಿಯೆಂದರೆ ತೆಲುಗಿನ ಸಮಕಾಲೀನ ಕೃತಿಯಾದ 'ವೈಶ್ಯಪುರಾಣಮು' ಪ್ರಮುಖ ವಾಗಿದೆ. ಈ ಕೃತಿಯು ಪ್ರದೇಶಕ್ಕೆ ಸಂಬಂಧಿಸಿದ್ದರು. ನಮ್ಮ ಅಧ್ಯಯನಕ್ಕೆ ಸಂಬಂಧಿಸಿದ ಅವಧಿಯಲ್ಲಿದ್ದ ನಗರ ಸಂಘಟನೆಗಳ ಸ್ವರೂಪ ಅಧಿಕಾರ ಹಾಗೂ ಕಾರ್ಯ ಚಟುವಟಿಕೆಗಳ ಬಗ್ಗೆ ಒಂದು ಪರಿಚಯವನ್ನು ನೀಡುತ್ತದೆ ಹಾಗೂ ಪಟ್ಟಣದ ಬಗ್ಗೆ ಒಂದು ಅಭಿಪ್ರಾಯವನ್ನು ಹೊಂದಲು ಸಹಾಯಕವಾಗಿದೆ.

### 6.3.1 ಮಧ್ಯಕಾಲೀನ ಕರ್ನಾಟಕದಲ್ಲಿ ಪಟ್ಟಣ ಸಭೆ

ಕರ್ನಾಟಕದಲ್ಲಿ ದೊರಕಿರುವ ಹಲವಾರು ಶಾಸನಗಳಿಂದ ಪೌರ ಕಾರ್ಯಗಳನ್ನು ನಿರ್ವಹಿಸುತ್ತಿದ್ದ ಸಭೆಗಳಿದ್ದವೆಂಬ ಅಂಶವು ಬೆಳಕಿಗೆ ಬರುತ್ತದೆ. ಇಲ್ಲಿ ನಗರವೆಂಬ ಪದವು ಪಟ್ಟಣಸಭೆ ಎಂಬ ಅರ್ಥವನ್ನು ನೀಡುತ್ತದೆ. ಕ್ರಿ.ಶ. 10 ರಿಂದ 14ನೇ ಶತಮಾನಗಳ ನಡುವೆ ತಲಕಾಡು ನಾಲ್ಕು ಪಟ್ಟಣಸ್ವಾಮಿಗಳನ್ನು ಹೊಂದಿತ್ತು ಹಾಗೂ 25 ಸದಸ್ಯರು ಬಹುಶಃ ಅದರ ಸಮಿತಿಯಲ್ಲಿದ್ದರು. ಹಾಗೂ ಮಹಾನಗರವು ಅವರ ಆಸಕ್ತಿಯನ್ನು ಪರಿಗಣಿಸಿ ಗೌಡ ಪ್ರಜೆಗಳು ಸಭೆಯನ್ನು ಸೇರುವಂತೆ ಮಾಡಿತು. ಹಾಗೂ ಏಳು ಪುರಗಳು ಮತ್ತು ಪಂಚಮಠಗಳನ್ನು ಹೊಂದಿದ್ದ ಇಡೀ ತಲಕಾಡು ನಗರಕ್ಕೆ ಸ್ಥಾನಪತಿಯು ಅಧಿಕಾರಿಯಾಗಿದ್ದನು ಸ್ಥಾನಪತಿಯೋರ್ವನು ಪಟ್ಟಣದ ಆಡಳಿತವನ್ನು ವಹಿಸಿಕೊಳ್ಳುತ್ತಿದ್ದುದು ಕಂಡು ಬರುತ್ತದೆ. ಬಳ್ಳಿಗಾವೆಯು ಐದು ಮಠಗಳು ಹಾಗೂ ಮೂರು ಔಷಧದಂಗಡಿಗಳೊಂದಿಗೆ ಏಳು ಬ್ರಹ್ಮಪುರಿಗಳನ್ನು ಹೊಂದಿತ್ತು". ತಳೂರನು ಪಟ್ಟಣಗಳ ಪೌರ ಸಂಘಟನೆಗಳಲ್ಲಿ ಪ್ರಮುಖ ಸದಸ್ಯನಾಗಿದ್ದನು. ದೋರಸಮುದ್ರವನ್ನು ಅನೇಕ ವಿಭಾಗಗಳನ್ನಾಗಿ ವಿಂಗಡಿಸಲಾಗಿತ್ತು. ಪ್ರತಿಯೊಂದು ವಿಭಾಗವು ಅನೇಕ ಬೀದಿಗಳನ್ನು ಹೊಂದಿದ್ದವು. ಪ್ರತಿಯೊಂದು ವಿಭಾಗಕ್ಕೂ ಒಂದು ದೊಣ್ಣೆಯೊಂದಗಿದ್ದ ತಳಾರಿಯನ್ನು ನೇಮಕ ಮಾಡಲಾಗಿತ್ತು. ಪ್ರತಿ ಪಟ್ಟಣದ ಹಾಗೂ ನಗರದ ಶಾಂತಿಯನ್ನು ಕಾಪಾಡಲು ಒಂದು ಗುಂಪು ತಳವಾರರನ್ನು ನೇಮಿಸಲಾಗುತ್ತಿತ್ತು. ಹಾಗೂ ಇದರಲ್ಲಿ ಒಬ್ಬ ನುರಿತ ನಾಯಕನಿರುತ್ತಿದ್ದನು. ಇದರ ಜೊತೆಗೆ "ನಗರಕರನತ್ತೂರ್" ನಗರ ಮಧ್ಯಸ್ಥ ಎಂಬುದು ನಗರದ ಕೆಲವು ಅಧಿಕಾರಿಗಳ ಹೆಸರುಗಳಾಗಿದ್ದವು ಪಟ್ಟಣ ಸಭೆಯ ಸದಸ್ಯರಲ್ಲಿ ಏಕತೆಯ ಒಂದು ದೃಢವಾದ ನಂಬಿಕೆಯು ಬೇರೂರಿತ್ತು.

ಪಟ್ಟಣ ಸಭೆಯು ಒಂದು ಪ್ರತಿನಿಧಿ ಅಂಗವಾಗಿದ್ದು ಸ್ಥಳೀಯ ಜನರ ಆಸಕ್ತಿಯನ್ನು ಕಾಪಾಡುತ್ತಿತ್ತು. ರಾಜ್ಯದ ಉನ್ನತ ಅಧಿಕಾರವನ್ನು ಹೊಂದಿದ್ದ ಕೆಲವು ಅಧಿಕಾರಿಗಳು ಕೂಡ ಈ ಸಭೆಗಳ ಹಕ್ಕುಗಳ ಬಗ್ಗೆ ಮಧ್ಯೆ ಪ್ರವೇಶಿಸುತ್ತಿರಲಿಲ್ಲ. ತೆರಿಗೆಯನ್ನು ಕೊಡುವುದಾಗಲಿ ಅಥವಾ ದಾನವನ್ನು ನೀಡುವುದಾಗಲಿ ಒಪ್ಪಿಗೆಯ ಮೇಲೆ ಮಾತ್ರ ನಡೆಯಬೇಕಿತ್ತು.

ಮೇಲಿನ ಅಧ್ಯಯನದಿಂದ ನಾವು ಊಹಿಸಬೇಕಾದ ವಿಷಯವೇನೆಂದರೆ ನಗರ ಸಭೆಯು ನಗರ ಅಥವಾ ಆ ಸ್ಥಳದ ಹಲವು ಬಗೆಯ ವ್ಯಾಪಾರಿ ಸಂಘಗಳು ಕೆಲವು ಸಂದರ್ಭಗಳಲ್ಲಿ ಪರಜೆ ಗೌಂಡರು, ಪುರಗಳು ಹಾಗೂ ಬ್ರಹ್ಮಪುರಿಗಳು, ಮಠಗಳು ಕಾರ್ಯಕಾರಿ ಸಮಿತಿ ಹಾಗೂ ಅಧಿಕಾರಿಗಳನ್ನು ಹೊಂದಿತ್ತು.

### 6.4 ಪಟ್ಟಣಸ್ವಾಮಿ

ನಗರ ಆಡಳಿತದ ಒಂದು ಅಧ್ಯಯನವು ಪೌರ ಸಂಘಟನೆ, ಪಟ್ಟಣಸಭೆ, ಸಮಿತಿ ಹಾಗೂ ಅದರ ಸದಸ್ಯರು, ಅಧಿಕಾರಿಗಳು ಅವರ ಅಧಿಕಾರ ಹಾಗೂ ಕರ್ತವ್ಯಗಳ ಸಮೀಕ್ಷೆಯ ಜೊತೆಗೆ ಪಟ್ಟಣದ ಅತ್ಯಂತ ಪ್ರಮುಖ ಅಧಿಕಾರಿಯಾಗಿದ್ದ ಪಟ್ಟಣಸ್ವಾಮಿಯ ಬಗ್ಗೆ ಒಂದು ತುಣುಕು ಅಧ್ಯಯನವನ್ನು ಹೊಂದಿದೆ. ಪಟ್ಟಣಸ್ವಾಮಿಯು ಶೆಟ್ಟಿ, ಪಟ್ಟಣಸ್ವಾಮಿ, ವಡ್ಡವ್ಯವಹಾರಿ ಪೃಥ್ವಿಶೆಟ್ಟಿ ಮುಂತಾದ ಹೆಸರುಗಳಿಂದ ಕರೆಯಲ್ಪಡುತ್ತಿದ್ದನು. ಇವನು ಸಭೆಯ ಮುಖ್ಯಸ್ಥನಾಗಿದ್ದನು. ಇವನು ಪಟ್ಟಣದ ಪಾಲಕನಾಗಿದ್ದು ಹಲವಾರು ಜವಾಬ್ದಾರಿಗಳ ನಿರ್ವಹಣೆಯನ್ನು ಹೊತ್ತಿದ್ದನು. ಪಟ್ಟಣ ಸ್ವಾಮಿಯು ಗೌರವಾನ್ವಿತನಾಗಿದ್ದು ಹಾಗೂ ಹಲವಾರು ವಿಶೇಷ ಹಕ್ಕುಗಳು ಮತ್ತು ಗೌರವಗಳಿಗೆ ಪಾತ್ರನಾಗಿದ್ದನು. ಪಟ್ಟಣಸ್ವಾಮಿ ಹುದ್ದೆಯು ಅಸ್ಥಿತ್ವಕ್ಕೆ ಬಂದು ಪಟ್ಟಣಗಳ ಬೆಳವಣಿಗೆಯೊಂದಿಗೆ ಪ್ರಾಮುಖ್ಯತೆಯನ್ನು ಪಡೆಯಿತು. ಮೊದಲು ಹಳ್ಳಿಗಳನ್ನು ಪಟ್ಟಣಗಳಾಗಿ ಪರಿವರ್ತಿಸಲಾಗುತ್ತಿತ್ತು. ಪಟ್ಟಣಗಳು ಅನೇಕ ಗ್ರಾಮೀಣ ವೈಶಿಷ್ಟತೆಗಳನ್ನು ಉಳಿಸಿಕೊಂಡಿದ್ದವು. ಹಾಗೂ ಹಳೆಯ ಸಂಸ್ಥೆಗಳನ್ನು ಹೊಂದಿದ್ದವು. ಉದಾಹರಣೆಗೆ ಪಟ್ಟಣದ ಕಾರ್ಯನಿರ್ವಾಹಕನನ್ನು ಗೌಂಡ ಎಂದು ಕರೆಯಲಾಗುತ್ತಿತ್ತು. ಈ ಪದವು ಗ್ರಾಮದ ಮುಖ್ಯಸ್ಥನ ಪದವಿಯನ್ನು ಅರ್ಥೈಸುತ್ತದೆ. ಆದರೆ ಪಟ್ಟಣಗಳು ಪ್ರಬಲವಾಗಿ ಬೆಳೆಯುತ್ತಾ ಹೋದಂತೆಲ್ಲ ಕೆಲವು ಸಾಮಾಜಿಕ ಆರ್ಥಿಕ ಹಾಗೂ ರಾಜಕೀಯ ಸಂಸ್ಥೆಗಳು ಕ್ರಮೇಣವಾಗಿ ಅಸ್ಥಿತ್ವಕ್ಕೆ ಬಂದವು.[75]

ವರ್ತಕ ಸಂಘದ ರಚನೆ ಹಾಗೂ ಬೆಳವಣಿಗೆಯು ಈ ವಿಧವಾದ ಒಂದು ಬೆಳವಣಿಗೆಯಾಗಿತ್ತು. ವರ್ತಕ ಸಂಘಗಳು ಆರ್ಥಿಕವಾಗಿ ಶಕ್ತಿವಂತ ಸಂಸ್ಥೆಗಳಾಗಿ ರಾಜಕೀಯ ಪ್ರಾಬಲ್ಯವನ್ನು ಮೆರೆದವು. ಅವುಗಳು ವಿಶೇಷ ಹಕ್ಕುಗಳನ್ನು ಹೊಂದಿದ್ದವು. ಹಾಗೂ ರಾಜಕೀಯ ವಿಷಯಗಳಲ್ಲೂ ಸಹಕಾರವನ್ನು ನೀಡುತ್ತಿದ್ದವು. ಪಟ್ಟಣದ ಆಳ್ವಿಕೆಯನ್ನು ನಡೆಸಲು ಪ್ರಾಮಾಣಿಕ ಹಾಗೂ ಸಮರ್ಥ ನಾಯಕರು ಬೇಕಾಗಿದ್ದರಿಂದ ವರ್ತಕ ಸಂಘದ ನಾಯಕರುಗಳಿಗೆ ಪಟ್ಟಣ ಆಡಳಿತದ ಚುಕ್ಕಾಣಿಯನ್ನು ನೀಡಲಾಯಿತು. ಈ ರೀತಿಯಾಗಿ ವರ್ತಕ ಸಂಘದ ಮುಖ್ಯಸ್ಥನು ಪೌರಪಾಲಕನಾದನು. ಪಟ್ಟಣ ಹುದ್ದೆಯನ್ನು ವರ್ತಕ ಸಂಘದ ವರ್ತಕ ಅಥವಾ ನಾಯಕನಿಗೆ ನೀಡಲಾಗುತ್ತಿತ್ತು.

### 6.4.1 ಹುದ್ದೆಯ ನೇಮಕ

ಪಟ್ಟಣಸ್ವಾಮಿ ಹುದ್ದೆಯು ವಂಶ ಪಾರಂಪರ್ಯವಾಗಿತ್ತು ಹಾಗೂ ಐಚ್ಛಿಕವಾಗಿಯೂ ಇತ್ತು. ಸಮಾನ್ಯವಾಗಿ ಪದ್ಧತಿಯೆಂದರೆ ಈ ಹುದ್ದೆಯನ್ನು ಸಮಾಜದ ಹಿರಿಯ ವರ್ತಕರು ಹಾಗೂ ನಾಯಕರು ಒಬ್ಬ ಯೋಗ್ಯ ವ್ಯಕ್ತಿಗೆ ನೀಡುತ್ತಿದ್ದರು. ಕೆಲವೊಮ್ಮೆ ಸರ್ಕಾರಿ ಅಧಿಕಾರಿಯು ಪಟ್ಟಣದ ಒಬ್ಬ ಪ್ರಮುಖ ವರ್ತಕನಿಗೆ ಈ ಪದವಿಯನ್ನು ನೀಡುತ್ತಿದ್ದನು. ಈ ಪದವಿಯನ್ನು ಊರಿನ ಜನತೆ ಅಥವಾ ಪ್ರತಿನಿಧಿಗಳು ಕೂಡ ನೀಡಬಹುದಾಗಿತ್ತು.

ಪಟ್ಟಣಸ್ವಾಮಿಯನ್ನು ನೇಮಕ ಮಾಡುವಾಗ ಜನಪ್ರಿಯ ಅಭಿಪ್ರಾಯವನ್ನು ಪರಿಗಣಿಸಲಾಗುತ್ತಿತ್ತು. ನಾಡಿನ ಸಮಸ್ತಗೌಡ ಪ್ರಜೆಗಳು, ನಾನಾ ದೇಶಿಗಳು ಮತ್ತು 18 ಜಾತಿಯವರು ಭಾಗವಹಿಸುತ್ತಿದ್ದರೆಂದು ತಿಳಿದು ಬರುತ್ತದೆ. ಆನೇಕಲ್‌ನ ಒಂದು ಶಾಸನವು ಹಿರಿಸನಾಡು ಪ್ರಭು ಹಾಗೂ ಐವತ್ತಾರು ಸೀಮೆಗಳ ಪ್ರತಿನಿಧಿಗಳು ಸೇರಿದಂತೆ ಹಲವಾರು ಪಟ್ಟಣಸ್ವಾಮಿ ಹುದ್ದೆಯನ್ನು ದಂಡೀಶೆಟ್ಟಿ ಹಾಗೂ ತಿರುಮಲ ಶೆಟ್ಟಿಗೆ ನೀಡಿದರು ಎಂದು ದಾಖಲಿಸುತ್ತದೆ.

### 6.4.2 ಭತ್ಯೆ

ಪಟ್ಟಣಸ್ವಾಮಿಗಳು ನೀಡುತ್ತಿದ್ದ ಸೇವೆಗಾಗಿ ಸರಿಯಾದ ಪರಿಹಾರ ದೊರೆಯುತ್ತಿತ್ತು. ಅವರಿಗೆ ಮಾನ್ಯ ಎಂಬ ಭೂಮಿಯನ್ನು ನೀಡಲಾಗುತ್ತಿತ್ತು. ಇದು ಅವರ ಆದಾಯದ ಪ್ರಧಾನ ಮೂಲವು ಆಗಿತ್ತು ತೆರಿಗೆಗಳಿಂದ ಅವರನ್ನು ಮುಕ್ತಿಗೊಳಿಸಲಾಗಿತ್ತು. ಸಂತೆಯ ಖರ್ಚಿಗೆಂದು

ಸಂಗ್ರಹಿಸಲಾಗುತ್ತಿದ್ದ ಒಂದು ಸಣ್ಣ ಪ್ರಮಾಣದ ತೆರಿಗೆಯು ಕೂಡ ಅವರ ಆದಾಯದ ಇನ್ನೊಂದು ಮೂಲವಾಗಿತ್ತು. ಅವರಿಗೆ ಹಲವು ಬಗೆಯ ದಾನದತ್ತಿಗಳನ್ನು ನೀಡಲಾಗುತ್ತಿತ್ತು. ಅಧಿಕಾರ ಹಾಗೂ ದಾನದತ್ತಿಗಳ ಜೊತೆಗೆ ಪಟ್ಟಣಸ್ವಾಮಿಯನ್ನು ಅನೇಕ ಬಿರುದು ಬಾವಲಿಗಳಿಂದ ಗೌರವಿಸಲಾಗುತ್ತಿತ್ತು.

### 6.4.3 ಹೊಯ್ಸಳರ ರಾಜ್ಯಾಡಳಿತದಲ್ಲಿ ಪಟ್ಟಣಸ್ವಾಮಿಯ ಸ್ಥಾನ ಮತ್ತು ಕಾರ್ಯಗಳು

ಮಧ್ಯಕಾಲೀನ ಕರ್ನಾಟಕದಲ್ಲಿ ಹಲವು ಪಟ್ಟಣಗಳು ಇದ್ದವು. ಪ್ರಮುಖ ಪಟ್ಟಣಗಳಲ್ಲಿ (ವ್ಯಾಪಾರ ಕೇಂದ್ರ) ಸಮಾನ್ಯವಾಗಿ ಪಟ್ಟಣಸ್ವಾಮಿ ಅಥವಾ ಪಟ್ಟಣಶೆಟ್ಟಿ ಇರುತ್ತಿದ್ದನು. ಪಟ್ಟಣಸ್ವಾಮಿಯು ಪಟ್ಟಣದ ಮುಖ್ಯ ಅಧಿಕಾರಿ ಇವನು ಆ ಸ್ಥಳದ ಶ್ರೀಮಂತ ವರ್ತಕ ಮತ್ತು ಪಟ್ಟಣದ ಮಹಾಪೌರನಾಗಿದ್ದನು. ಅಲ್ಲದೆ ಇವನು ಸ್ಥಳೀಯ ವರ್ತಕ ಸಂಘಕ್ಕೆ ಅಧ್ಯಕ್ಷನೂ ಆಗಿದ್ದನು. ಪಟ್ಟಣಸ್ವಾಮಿಯು ಪಟ್ಟಣದಲ್ಲಿ ನಡೆಯುವ ಸಂತೆಗಳನ್ನು ಮತ್ತು ಇತರ ವಾಣಿಜ್ಯ ಚಟುವಟಿಕೆಗಳನ್ನು ನೋಡಿಕೊಳ್ಳುತ್ತಿದ್ದನು. ಇವನು ಪಟ್ಟಣ ಸಭೆಯ ಪ್ರಮುಖ ಸದಸ್ಯನಾಗಿದ್ದನು.

ನಾವು ಹೊಯ್ಸಳರ ಕಾಲದ ಕೆಲವು ಶಾಸನಗಳಿಂದ ಪಟ್ಟಣಸ್ವಾಮಿಯ ಪಾತ್ರವನ್ನು ತಿಳಿಯಬಹುದಾಗಿದೆ. ಪಟ್ಟಣ ಸ್ಥಾಪನೆ ಮತ್ತು ಅದರ ಆಡಳಿತದಲ್ಲಿ ಅವನ ಪಾತ್ರ ಬಹಳ ಮುಖ್ಯ ಅವನು ದೇವಸ್ಥಾನಗಳನ್ನು ನಿರ್ಮಿಸುವ ಜಾತ್ರೆ ಮತ್ತು ಸಂತೆಗಳನ್ನು ನಡೆಸುವ ಕಾರ್ಯವನ್ನು ನೋಡಿಕೊಳ್ಳುತ್ತಿದ್ದನು. ಹೊಯ್ಸಳರ ಕಾಲದಲ್ಲಿ ಪಟ್ಟಣಸ್ವಾಮಿಯ ಸ್ಥಾನ, ಕಾರ್ಯ ಮತ್ತು ಇತರ ಪಾತ್ರಗಳನ್ನು ಕುರಿತು ಅಧ್ಯಯನ ಮಾಡಲು ಇಲ್ಲಿ ಪ್ರಯತ್ನ ಪಡಲಾಗಿದೆ.

ಸಾಮಾನ್ಯವಾಗಿ ಒಂದು ಪಟ್ಟಣಕ್ಕೆ ಒಬ್ಬ ಪಟ್ಟಣಸ್ವಾಮಿ ಇರುತ್ತಿದ್ದನು. ಆದರೆ ಪಟ್ಟಣ ದೊಡ್ಡದಾಗಿದ್ದರೆ ಒಬ್ಬರಿಗಿಂತ ಹೆಚ್ಚು ಪಟ್ಟಣಸ್ವಾಮಿಗಳು ಇರುತ್ತಿದ್ದರು. ಅಂದರೆ ಪಟ್ಟಣಸ್ವಾಮಿಗಳ ಸಂಖ್ಯೆಯು ಆ ಪಟ್ಟಣದ ವಿಸ್ತಾರವನ್ನು ಅವಲಂಬಿಸಿತ್ತು. ಕ್ರಿ.ಶ. 1142 ರ ಶಾಸನದ ಪ್ರಕಾರ ಹಳೇ ಬೀಡಿನಲ್ಲಿ ಇಬ್ಬರು ಪಟ್ಟಣಸ್ವಾಮಿಗಳಿದ್ದರು ಎಂದು ತಿಳಿದು ಬರುತ್ತದೆ. ಅವರು ಹೊಯ್ಸಳಶೆಟ್ಟಿ ಮತ್ತು ಗಮಿಶೆಟ್ಟಿಗಳಾಗಿದ್ದರು.[76]

ಪಟ್ಟಣಕ್ಕೆ ಹಿರಿಯ ವರ್ತಕ ಮತ್ತು ಶ್ರೀಮಂತನಾದ ಪಟ್ಟಣಸ್ವಾಮಿಗೆ ಆಡಳಿತಕ್ಕೋಸ್ಕರ ಕಛೇರಿ ವ್ಯವಸ್ಥೆಯನ್ನು ಮಾಡಿಕೊಡಲಾಗಿತ್ತು. ಮಲಪರಾಜನು ಇಂತಹ ಕೆಲವೇ ಜನ ಶೆಟ್ಟಿಗಳಿಗೆ ಒಂದು ಕಛೇರಿಯನ್ನು ಕೊಡಮಾಡಿದನು ಎಂದು ಕ್ರಿ.ಶ. 1205 ರ ಶಾಸನದಲ್ಲಿ ತಿಳಿಸಲಾಗಿದೆ.[77] ಪಟ್ಟಣಸ್ವಾಮಿಯು, ಸರ್ಕಾರ ಜನಸಾಮಾನ್ಯರ ಮತ್ತು ವರ್ತಕರಿಂದ ವಿಶ್ವಾಸವನ್ನು ಗಳಿಸಿ ಕೊಂಡಿದ್ದರು. ಈ ಕೆಳಕಂಡ ಉದಾಹರಣೆಯಿಂದ ಸರ್ಕಾರದೊಂದಿಗೆ ಇದ್ದ ಅವನ ಸಂಬಂಧವು ತಿಳಿದು ಬರುತ್ತದೆ. ಕ್ರಿ.ಶ. 1125 ರ ಮಾಹಿತಿಯ ಪ್ರಕಾರ (ಹೊಸ ಹೊಳಲು ಗ್ರಾಮ ಕೆ.ಆರ್.ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ) ಪಟ್ಟಣಸ್ವಾಮಿ ಹೊಯ್ಸಳ ಶೆಟ್ಟಿಯನ್ನು ನೋಳಭಿಶೆಟ್ಟಿಯೆಂತಲೂ ಸಹ ಕರೆಯಲಾಗುತ್ತಿತ್ತು. ಇವನು ರಾಜ ವಿಷ್ಣುವರ್ಧನನ ಅಧೀನದಲ್ಲಿ ವಾಸಿಸುತ್ತಿದ್ದನು.[78] ಕ್ರಿ.ಶ. 1178ರ ಮತ್ತೊಂದು ದಾಖಲೆಯ ಪ್ರಕಾರ ಪಟ್ಟಣ ಗ್ರಾಮ ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆ ಪಟ್ಟಣ ಸ್ವಾಮಿ ಸೋವಿಶೆಟ್ಟಿಯು ರಾಜ ಸಾವಂತ ನರಸಿಂಗರಾಯ ನಾಯಕನ ಕೈ ಕೆಳಗೆ ಕೆಲಸ ಮಾಡುತ್ತಿದ್ದನೆಂದು ವಿವರಿಸಲಾಗಿದೆ.[79] ಕ್ರಿ.ಶ. 1195ರ ಶ್ರವಣಬೆಳಗೊಳದ ಇನ್ನೊಂದು ದಾಖಲೆಯ ಪ್ರಕಾರ ನಾಗದೇವನು ರಾಜ ಎರಡನೇ ವೀರಬಲ್ಲಾಳನ[80] ಆಳ್ವಿಕೆಯಲ್ಲಿ ಪಟ್ಟಣಸ್ವಾಮಿಯಾಗಿದ್ದನು. ಕ್ರಿ.ಶ. 1218 ರ ಕುಂಡವಡಗ್ರಾಮ, ದಾವಣಗೆರೆ ತಾಲ್ಲೂಕು ಶಾಸನದ ಪ್ರಕಾರ ಪ್ರತೀ ಬುಧವಾರ ಸಂತೆಗಳನ್ನು ಕಟ್ಟಲು ಪಟ್ಟಣಸ್ವಾಮಿ ಸಂಗಶೆಟ್ಟಿಯು ರಾಣಿ ಅಭಿನವ ಕೇತನದೇವಿಯಿಂದ ನಿರ್ದೇಶನವನ್ನು ಪಡೆದುಕೊಂಡಿದ್ದನು.[81] ಪಟ್ಟಣಸ್ವಾಮಿಯು ರಾಣಿಯ ಆದೇಶವನ್ನು ಮನ್ನಿಸಿ ಈ ಕಾರ್ಯವನ್ನು ಯಶಸ್ವಿಗೊಳಿಸಿದ್ದನು.

ಪಟ್ಟಣಸ್ವಾಮಿಯು ಅನೇಕ ಕಾರ್ಯಗಳನ್ನು ನಿರ್ವಹಿಸಿದ್ದನು. ಸಂತೆಗಳನ್ನು ಕಟ್ಟುವುದು ಮತ್ತು ಅವುಗಳನ್ನು ನಿಯೋಜಿಸುವುದು ಮತ್ತು ಸಂಯೋಜಿಸುವುದು ಹಾಗೂ ಪಟ್ಟಣಕ್ಕೆ ಹಿರಿಯನಾಗಿ ತೀರ್ಮಾನಗಳನ್ನು ಕೈಗೊಳ್ಳುವುದು ಇವೇ ಅವನ ಪ್ರಧಾನ ಕರ್ತವ್ಯಗಳಾಗಿದ್ದವು. ಅವನು ಪಟ್ಟಣದ ಸಾಮಾಜಿಕ, ಆರ್ಥಿಕ ಚಟುವಟಿಕೆಗಳ ನಾಯಕತ್ವ ವಹಿಸುತ್ತಿದ್ದನು. ಕೆಲವು ವೇಳೆ ಪಟ್ಟಣಸ್ವಾಮಿಯು ಪಟ್ಟಣದ ಸ್ಥಾಪಕನೂ ಆಗಿದ್ದನು. ಉದಾಹರಣೆಗೆ ಕ್ರಿ.ಶ. 1328 ರ ಶಾಸನದಿಂದ (ಮದ್ದೂರು ಗ್ರಾಮ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ) ಪಟ್ಟಣವನ್ನು ಕಟ್ಟುವುದಕ್ಕೋಸ್ಕರ ಉಪ್ಪೇಂದ್ರಪುರ ಮಹಾಜನರಿಂದ ಆರು ಬಾಡಿಗೆ ರಹಿತ ಮನೆಗಳನ್ನು ಉಚಿತವಾಗಿ ಪಟ್ಟಣಸ್ವಾಮಿಗೆ ಕೊಡಮಾಡಲಾಗಿತ್ತು.[82] ಪಟ್ಟಣಸ್ವಾಮಿಯು ಬಹಳ ಆಸಕ್ತಿ ವಹಿಸಿ ಸಂತೆಗಳನ್ನು ಕಟ್ಟುತ್ತಿದ್ದನು. ಕ್ರಿ.ಶ. 1278ರ ನಂಜನಗೂಡು ಹೋಬಳಿ ಉಪ್ಪಿನಹಳ್ಳಿ

ದಾಖಲೆಯಿಂದ ಸಂಕಶೆಟ್ಟಿಯೆಂಬ ಪಟ್ಟಣಸ್ವಾಮಿಯು ಮನಾಲಿ ಎಂಬಲ್ಲಿ ಸಂತೆಗಳನ್ನು ಕಟ್ಟುತ್ತಿದ್ದನು ಎಂದು ತಿಳಿದು ಬರುತ್ತದೆ. ಪಟ್ಟಣಸ್ವಾಮಿಯು ಹಿರಿಯನಾಡಿನ ಮಹಾಪ್ರಭು ಮತ್ತು ದಂಡನಾಯಕ ಮಾಚಣ್ಣರ ಜೊತೆಗೂಡಿ ಸಂತೆಗಳನ್ನು ಕಟ್ಟುತ್ತಿದ್ದನು.[83] ಕ್ರಿ.ಶ. 1332ರ ಬೆಂಗಳೂರು ತಾಲ್ಲೂಕಿನ ಇನ್ನೊಂದು ಶಾಸನದ ದಾಖಲೆಯ ಪ್ರಕಾರ ಚಿಕ್ಕಹುಂಡಿ[84] ಎಂಬಲ್ಲಿ ಮುಕ್ತಿಶೆಟ್ಟಿ ಎಂಬ ಪಟ್ಟಣ ಸ್ವಾಮಿಯಿಂದ ಸಂತೆ ನಿಯೋಜಿಸಲ್ಪಡುತ್ತಿತ್ತು ಎಂದು ತಿಳಿದು ಬರುತ್ತದೆ.[85] 12ನೇ ಶತಮಾನದ ಪ್ರಕಾರ ಶ್ರವಣಬೆಳಗೊಳದಲ್ಲಿ ಮೊಸಳೆಯ ಸಂತೆ ಎಂಬಲ್ಲಿ ನೇಮಿಶೆಟ್ಟಿ ಎಂಬುವವನು ಪಟ್ಟಣ ಸ್ವಾಮಿಯಾಗಿದ್ದನು. ಯಾವ ಸ್ಥಳದಲ್ಲಿ ಸಂತೆ ಜರುಗುತ್ತದೋ ಅಲ್ಲಿಗೆ ಪಟ್ಟಣಸ್ವಾಮಿಯನ್ನು ಕರೆಸಿಕೊಳ್ಳಲಾಗುತ್ತಿತ್ತು.[86] ವಸ್ತುಗಳನ್ನು ಮಾರುವ ಮತ್ತು ಕೊಳ್ಳುವ ವ್ಯವಹಾರದಲ್ಲಿ ವಿಧಿಸಿದ ಕೆಲವು ತೆರಿಗೆಗಳನ್ನು ವರ್ತಕರಿಂದ ಸಂಗ್ರಹಿಸಿ ಅವುಗಳನ್ನು ಸಂತೆಗಳನ್ನು ಕಟ್ಟಲು ಉಪಯೋಗಿಸಿ ಕೊಳ್ಳಲಾಗುತ್ತಿತ್ತು. ಪಟ್ಟಣದಲ್ಲಿ ಪಟ್ಟಣಸ್ವಾಮಿಯು ಸಂತೆಗಳ ಕಟ್ಟುವ ಕಾರ್ಯ ನಿರ್ವಹಿಸುತ್ತಿದ್ದರು ಎಂದು ಈ ಮೇಲಿನ ದಾಖಲೆಗಳಿಂದ ತಿಳಿದು ಬರುತ್ತದೆ. ಹೀಗೆ ಅಂದಿನ ದಿನಗಳಲ್ಲಿ ನೀರಿನ ಟ್ಯಾಂಕು ಮತ್ತು ದೇವಸ್ಥಾನಗಳು ನಿರ್ಮಾಣಗೊಂಡಿರುವುದಕ್ಕೆ ಆರು ಪಟ್ಟಣಸ್ವಾಮಿಯು ಮಾಡಿದ ಜನಪರ ಕಲಸ ಕಾರ್ಯಗಳಿಂದ ಎಂದು ಹೇಳಬಹುದಾಗಿದೆ. ಪಟ್ಟಣದಲ್ಲಿ ಕಟ್ಟುವ ಸಂತೆಗಳು ವ್ಯಾಪಾರ ಕೇಂದ್ರಗಳು ಬೆಳೆಯಲು ತುಂಬಾ ಮಹತ್ವವಾದ ಕೊಡುಗೆಯನ್ನು ನೀಡಿದೆ. ಹಾಗೂ ಆಂತರಿಕ ವ್ಯವಹಾರಕ್ಕೆ ಅದರ ಅಭಿವೃದ್ಧಿಗೆ ತುಂಬಾ ಸಹಾಯಕಾರಿಯಾಗಿತ್ತು.

ಪಟ್ಟಣಸ್ವಾಮಿಗೆ ಸಂತೆಗಳನ್ನು ಕಟ್ಟಲು ತಗಲುವ ವೆಚ್ಚಗಳಿಗೆ ರೈತರು, ವರ್ತಕರು ಮತ್ತು ಇತರ ವ್ಯಕ್ತಿಗಳು ಒಟ್ಟಾಗಿ ಸೇರಿ ಭೂಮಿ ಮತ್ತು ತೆರಿಗೆಗಳನ್ನು ಕೊಡುತ್ತಿದ್ದರು.[87] ಭೂ ಅನುದಾನ ಅಥವಾ ಮಾನ್ಯ ಪಟ್ಟಣಸ್ವಾಮಿಗೆ ಆದಾಯದ ಪ್ರಮುಖ ಮೂಲವಾಗಿತ್ತು. ಸಂತೆಗಳನ್ನು ನಡೆಸಲು ಸಣ್ಣ ಸಣ್ಣ ತೆರಿಗೆಗಳಿಂದ ಸಂಗ್ರಹಿಸಿದ ಆದಾಯವನ್ನು ಬಳಸಿಕೊಳ್ಳಲಾಗುತ್ತಿತ್ತು. ಇದು ಪಟ್ಟಣ ಸ್ವಾಮಿಗೆ ಮತ್ತೊಂದು ರೀತಿಯ ಆದಾಯವಾಗಿರುತ್ತದೆ. ಪಟ್ಟಣಸ್ವಾಮಿಯು ಅನೇಕ ಕೊಡುಗೆ ಮತ್ತು ಅನುದಾನಗಳನ್ನು ನೀಡುತ್ತಿದ್ದನು. ಈ ಕೆಳಕಂಡ ದಾಖಲೆಗಳಿಂದ ಹೊಯ್ಸಳರ ಕಾಲದಲ್ಲಿ ಅನುದಾನ ಹೇಗಿತ್ತು ಎಂದು ನಾವು ಊಹಿಸಿಕೊಳ್ಳಬಹುದಾಗಿದೆ. ಬೆಂಗಳೂರು ಜಿಲ್ಲೆಯ ಕನಕಪುರ ತಾಲ್ಲೂಕಿನ ಕ್ರಿ.ಶ. 1316ರ ಶಾಸನದಿಂದ ತಿಳಿದು ಬರುವುದೇನೆಂದರೆ ಮಾಚಯ್ಯ ನಾಯಕ ಮತ್ತು ಹೊನ್ನಳ್ಳಿಗೆ ನಾಡು ರೈತರು ಸೇರಿ ಕೂಡಿಗೆ ಎಂಬ ಭೂಪ್ರದೇಶವನ್ನು ಚೊಕ್ಕಶೆಟ್ಟಿ ಎಂಬ ಪಟ್ಟಣಸ್ವಾಮಿಗೆ ಅನುದಾನವಾಗಿ ನೀಡಲಾಗುತ್ತಿತ್ತು. ಚೊಕ್ಕ ನಾಡುವಿನ ಗಲಿಹಾಲು ಎಂಬಲ್ಲಿ

ಸಂತೆಗಳನ್ನು ಸಂಯೋಜಿಸಲಾಗುತ್ತಿತ್ತು.[88] ಕ್ರಿ.ಶ. 1332 ರ ದಾಖಲೆಯ ಪ್ರಕಾರ ಬೆಂಗಳೂರು ತಾಲ್ಲೂಕಿನ ಒಬ್ಬ ಮುಕ್ತಿಶೆಟ್ಟಿ ಎಂಬ ಪಟ್ಟಣಸ್ವಾಮಿ ಇದ್ದನು. ಇವನಿಗೆ ಸಂತೆಗಳನ್ನು ಚಿಕ್ಕಹುಂಡಿ ಎಂಬಲ್ಲಿ ಕಟ್ಟಲು ಕೋಡಗಿ ಎಂಬ ಭೂಪ್ರದೇಶ ಸುಂಕದ ಕಟ್ಟೆಗಳು ಮತ್ತು ಇತರ ತೆರಿಗೆಗಳನ್ನು ನೀಡಲಾಗಿದ್ದಿತು.[89] ತಲಕಾಡಿನ ನಾಗರತ್ತರ್ ಎಂಬುವವನಿಂದ ಕನ್ನಡೈ ಎಂಬ ಪಟ್ಟಣಸ್ವಾಮಿಗೆ ಋಷ್ಕಿ ಭೂಮಿಯನ್ನು ಕೊಡಮಾಡಲಾಗಿತ್ತು ಎಂದು ಕ್ರಿ.ಶ. ನೇ ಹದಿಮೂರು ಮತ್ತು ಹದಿನಾಲ್ಕನೇ ಶತಮಾನದ ತಿ.ನಗಸೀಪುರ ತಾಲ್ಲೂಕಿನ ಬೆಟ್ಟಹಳ್ಳಿ ಎಂಬಲ್ಲಿ ಮೂರನೇ ಬಲ್ಲಾಳನು ಕಾಲದಲ್ಲಿ ಉಲ್ಲೇಖಗೊಂಡಿತು ಎಂದು ಮತ್ತೊಂದು ಅಂಶದಿಂದ ತಿಳಿದುಬರುತ್ತದೆ.[90] ಮುಂದೆ ಕ್ರಿ.ಶ. 1253ರ (ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ) ಕುಂಬಾರ ಮತ್ತು ದೇವಗೆರೆಗಳಲ್ಲಿ ಭೂಮಿಯನ್ನು ದೇವಮಾನ್ಯವಾಗಿ ಗುಂಡಗೆರೆಯ ಪಟ್ಟಣಸ್ವಾಮಿಗಳಾದ ತಿವಾದಿಶೆಟ್ಟಿ, ಬುಕಿಶೆಟ್ಟಿ ಮತ್ತು ಕೆಟಿಶೆಟ್ಟಿ ಇವರುಗಳು ಪಡೆದುಕೊಂಡಿದ್ದರು. ಈ ಭೂ ಅನುದಾನವನ್ನು ಕಳಲೇಶ್ವರ ದೇವಾಲಯಕ್ಕೆ ಬಳಸಿ ಕೊಳ್ಳಲಾಗಿತ್ತು. ದೇವಾಲಯದ ಪರವಾಗಿ ಪಟ್ಟಣಸ್ವಾಮಿಯು ಅನುದಾನವನ್ನು ಸ್ವೀಕರಿಸುತ್ತಿದ್ದನು.[91] ಅಲ್ಲದೆ ಪಟ್ಟಣಸ್ವಾಮಿಗಳು ಭೂದೇಣಿಗೆಗಳು ಮನೆಗಳನ್ನು, ನಿವೇಶನಗಳನ್ನು ಕೆಲವು ವೇಳೆ ಎತ್ತಿನ ಗಾಡಿಗಳನ್ನು "ಕೊಡುಗೆ" ರೂಪದಲ್ಲಿ ಪಡೆದುಕೊಂಡಿದ್ದನು. ಉದಾಹರಣಗೆ ಕ್ರಿ.ಶ. 1328ರ ಮೈಸೂರು ಜಿಲ್ಲೆ ಯಳಂದೂರು ತಾಲ್ಲೂಕು ಶಾಸನದ ದಾಖಲೆಗಳ ಪ್ರಕಾರ ದೊಡ್ಡ ಅಳತೆ ಗಳನ್ನೊಳಗೊಂಡ ಆರು ಮನೆಗಳನ್ನು (12 ಕ್ಯೂಬಿಟ್ಸ್  30 ಕ್ಯೂಬಿಟ್ಸ್) ಮಾನ್ಯದ ರೂಪದಲ್ಲಿ ಪಟ್ಟಣಸ್ವಾಮಿಗೆ ಕೊಡಲಾಗಿತ್ತು.[92] ಕ್ರಿ.ಶ. 1331 ರ ಇನ್ನೊಂದು ಶಾಸನದ ದಾಖಲೆಗಳ ಪ್ರಕಾರ ಗುಬ್ಬಿ ತಾಲ್ಲೂಕಿನಲ್ಲಿ ವೀರಬಲ್ಲಾಳ ತ್ರೈಲೋಕ್ಯ ಪಟ್ಟಣಸ್ವಾಮಿ ಕಾಳಿಶೆಟ್ಟಿಯ ಮಗ ಸಿಂಗಶೆಟ್ಟಿಯು ಸಂಪಿಗೆ ಎಂಬ ನಿವೇಶನವನ್ನು ಕೊಡುಗೆ ರೂಪದಲ್ಲಿ ಕೊಟ್ಟಿದ್ದರು.

ಈ ನಿವೇಶನಕ್ಕೆ ಯಾವುದೇ ತೆರಿಗೆ ಇರಲಿಲ್ಲ. ತೆರಿಗೆ ರಿಯಾಯಿತಿ ಇದ್ದಿತು.93 ಎತ್ತಿನ ಗಾಡಿಗಳ ಕೊಡುಗೆಗೆ ಸಂಬಂಧಿಸಿದಂತೆ ಹೇಳುವುದಾದರೆ, ಶಿವಮೊಗ್ಗ ತಾಲ್ಲೂಕಿನ 1203ರ ಶಾಸನದ ದಾಖಲೆಗಳ ಪ್ರಕಾರ ಪಟ್ಟಣಸ್ವಾಮಿ ಶೆಟ್ಟಿಯು ಒಟ್ಟು 100 ಎತ್ತಿನ ಗಾಡಿಗಳನ್ನು ಹೊಂದಿದ್ದನು. 20 ಎತ್ತಿನ ಗಾಡಿಗಳನ್ನು ಚಿಕ್ಕೇಶ್ವರ ದೇವಾಲಯಕ್ಕೆ ಕೊಟ್ಟಿದ್ದನು.[94] ಸಾಮಾನ್ಯವಾಗಿ ಪಟ್ಟಣಸ್ವಾಮಿಯು ಆ ಪಟ್ಟಣಕ್ಕೆ ಶ್ರೀಮಂತ ವರ್ತಕನಾಗಿದ್ದನೆಂದು ಇದರಿಂದ ತಿಳಿದು ಬರುತ್ತದೆ. ಹಾಗೂ ಇದಕ್ಕಾಗಿ ಅವನು ಯಾವುದೇ ಅಪೇಕ್ಷೆಯನ್ನು ಬಯಸುತ್ತಿರಲಿಲ್ಲ. ಇದಕ್ಕಾಗಿ ಅವನನ್ನು ಗೌರವಿಸಲಾಗುತ್ತಿತ್ತು.

ರಾಜ್ಯದ ಇತರ ಅಧಿಕಾರಿಗಳ ವರ್ಗದಲ್ಲಿ ಪಟ್ಟಣಸ್ವಾಮಿಯು ಸೇವಾ ಕಾರ್ಯಗಳಿಗಾಗಿ ಬಹಳ ಹೆಸರುವಾಸಿಯಾಗಿದ್ದನು. ದೇವಾಲಯಗಳ ನಿರ್ಮಾಣದಲ್ಲಿ ಉದಾರ ದೇಣಿಗೆಗಳ ನಿರ್ಮಾಣದಲ್ಲಿ ಉದಾರ ದೇಣಿಗೆಗಳಲ್ಲಿ ಅವನು ಪ್ರಾಮುಖ್ಯತೆ ಪಡೆದುಕೊಂಡಿದ್ದನು. ಈ ಕೆಳಕಂಡ ನಿದರ್ಶನಗಳಿಂದ ನಾವು ತಿಳಿದುಕೊಳ್ಳಬಹುದಾಗಿದೆ.

ಶ್ರವಣ ಬೆಳಗೊಳದಲ್ಲಿ ಕ್ರಿ.ಶ. 1195ರ ಶಾಸನದ ಪ್ರಕಾರ ರಾಜ ಎರಡನೆಯ ಬಲ್ಲಾಳನ ಪಟ್ಟಣಸ್ವಾಮಿ ನಾಗದೇವನು ಜೈನಗುರು ನಯಕೀರ್ತಿಯ ಸ್ಮರಣಾರ್ಥವಾಗಿ ನಾಗರ ಜಿನಾಲಯವನ್ನು ಕಟ್ಟಿಸಿದ್ದನು. ಹಾಗೂ ಶಿಲನ್ಯಾಸ ಮಾಡಿಸಿದ್ದನು ಮತ್ತು ಶ್ರವಣಬೆಳಗೊಳದಲ್ಲಿ ಕಾಮತ ಪಾರ್ಶ್ವ ಬಸ್ತಿಯ ಮುಂಭಾಗದಲ್ಲಿ ನೃತ್ಯ ಸಭೆಯನ್ನು ಸಹ ಸ್ಥಾಪಿಸಿದ್ದನು.[95] ಮಂಡ್ಯಜಿಲ್ಲೆ ನಾಗಮಂಗಲ ತಾಲ್ಲೋಕಿನಲ್ಲಿ ಹಟ್ಟನ ಗ್ರಾಮದಲ್ಲಿ ಕ್ರಿ.ಶ. 1178 ಇನ್ನೊಂದು ಶಾಸನದ ಪ್ರಕಾರ ರಾಜ ಸಾವಂತ ನರಸಿಂಗನಾಯಕನ ಅಧೀನದಲ್ಲಿದ್ದ ಸೋವಿಶೆಟ್ಟಿ ಎಂಬ ಪಟ್ಟಣಸ್ವಾಮಿಯು ಮೂರು ನೀರಿನ ತೊಂಬೆಗಳನ್ನು ಹಾಗೂ ಪಾರ್ಶ್ವಜಿನಾಲಯವನ್ನು ನಿರ್ಮಿಸಿದ್ದನು.[96] ಕಡೂರು ತಾಲ್ಲೂಕಿನ ಸೋಮನಹಳ್ಳಿಯಲ್ಲಿ ಅಭಿನವ ಸೋಮೇಶ್ವರ ದೇವರನ್ನು ನಿರ್ಮಿಸಿದ್ದನು.[97] ಗುಬ್ಬಿ ತಾಲ್ಲೋಕಿನಲ್ಲಿ ಕ್ರಿ.ಶ. 1238ರ ಮತ್ತೊಂದು ಶಾಸನದ ಪ್ರಕಾರ ನಿಟ್ಟೂರಿನ ಪಟ್ಟಣಸ್ವಾಮಿಯು ಸಂಪಿಗೆಯ ಮಲ್ಲಿಕಾರ್ಜುನ ದೇವರಿಗಾಗಿ ಹಿರಿಯ ಕೆರೆಯಲ್ಲಿ ಬಹುದೊಡ್ಡ ಟ್ಯಾಂಕನ್ನು ಕಟ್ಟಿಸಿದ್ದನು.[98]

ತಿಪಟೂರು ತಾಲ್ಲೋಕಿನಲ್ಲಿ ಕಿ.ಶ. 1214ರ ಇನ್ನೊಂದು ಶಾಸನದಲ್ಲಿ ಪಟ್ಟಣಸ್ವಾಮಿ ಮಹದೇವಶೆಟ್ಟಿಯು ಚನ್ನಕೇಶವ ದೇವರಿಗಾಗಿ ಸಂತೆಗಳಿಂದ ಸಂಗ್ರಹಿಸಿದ ಸುಂಕಗಳನ್ನು ದೇಣಿಗೆಯ ರೂಪದಲ್ಲಿ ನೀಡಿದ್ದನು.[99] ಮತ್ತೊಂದು ಕ್ರಿ.ಶ. 1198ರ ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೋಕಿನ ಉದ್ರಿ ಎಂಬಲ್ಲಿ ದಾಖಲೆಯ ಪ್ರಕಾರ ಶಾಂತಿನಾಥ ದೇವಾಲಯಕ್ಕೆ ದೊಡ್ಡಸೌಟು ಮತ್ತು ದೀಪ ಬೆಳಗುವುದಕ್ಕಾಗಿ ಎಣ್ಣೆಯನ್ನು ದೇಣಿಗೆಯಾಗಿ ನೀಡಿದ್ದನು.[100] ಮುಂದೆ ಅರಸೀಕೆರೆ ತಾಲ್ಲೋಕಿನಲ್ಲಿ ಕ್ರಿ.ಶ. 1220ರ ಶಾಸನದ ಪ್ರಕಾರ ಕಳ್ಳೆಶೆಟ್ಟಿ ಎಂಬ ಪಟ್ಟಣಸ್ವಾಮಿಯು ಶಾಂತಿನಾಥ ದೇವರ ಪೂಜೆಗಾಗಿ ಒಂದು ಮಳಿಗೆ ಹಾಗೂ ಎರಡು ಗದ್ಯಾಣಗಳನ್ನು ಒದಗಿಸಿದ್ದನು.[101] ಮತ್ತೊಂದು ದಾಖಲೆ ಕ್ರಿ.ಶ. 1273ರ ಅದೇ ತಾಲ್ಲೋಕಿನಲ್ಲಿ ಬೇಲೂರು ತಾಲ್ಲೋಕಿನ ಹೊರಗಡೆಯಿಂದ ಬರುವ ಬಡಬ್ರಾಹ್ಮಣರ ಬೋಜನಕ್ಕಾಗಿ ನಗದನ್ನು ಶಂಕರನೆಂಬ ಪಟ್ಟಣಸ್ವಾಮಿಯು ದೇಣಿಗೆಯ ರೂಪದಲ್ಲಿ ನೀಡಿದ್ದನು.

ಈ ಮೇಲೆ ತಿಳಿಸಿದ ಹಲವು ಬಗೆಯ ಸೇವಾ ಕಾರ್ಯಗಳನ್ನು ಮಾಡಿದ್ದೇ ಅಲ್ಲದೆ ಪಟ್ಟಣದ ಪಟ್ಟಣಸ್ವಾಮಿಗಳು ಗ್ರಾಮಕ್ಕೆ ಹೊರಗಡೆಯಿಂದ ಬರುವ ಶತ್ರುಗಳನ್ನು ತಡೆಯುವುದರಲ್ಲೂ ಸಹ ಬಹಳ ಆಸಕ್ತಿಯಿಂದ ಭಾಗವಹಿಸುತ್ತಿದ್ದರು. ಉದಾಹರಣೆಗೆ ಮಂಡ್ಯ ಜಿಲ್ಲೆಯ ಕೆ.ಆರ್.ಪೇಟೆ ತಾಲ್ಲೂಕಿನ ಅಗ್ರಹಾರ ಬಾಚಹಳ್ಳಿ ಎಂಬ ದಾಖಲೆಗಳ ಪ್ರಕಾರ ಬಾಚಹಳ್ಳಿ ಆಕ್ರಮಣ ಕಾರ್ಯದಲ್ಲಿ ಮಲೇಯಾ ಎಂಬ ಒಬ್ಬ ಪಟ್ಟಣಸ್ವಾಮಿಯು ಕಣ್ಣಾಯ ಎಂಬ ಶತ್ರುವಿನ ವಿರುದ್ಧ ಹೋರಾಡಿ ಮಡಿದಿದ್ದನು. ಮುಂದೆ ಪಟ್ಟಣಸ್ವಾಮಿಯು ದೇಣಿಗೆಗಳಿಗೆ ಒಪ್ಪಿಗೆಗಳನ್ನು ನೀಡುತ್ತಿದ್ದನು. ಉದಾಹರಣೆಗೆ ಮೈಸೂರು ಜಿಲ್ಲೆಯ ತಿ.ನರಸೀಪುರ ತಾಲ್ಲೋಕಿನ ಮೂಗೂರು ಎಂಬಲ್ಲಿ ಕ್ರಿ.ಶ. 1277ರ ದಾಖಲೆಯ ಪ್ರಕಾರ ಪಟ್ಟಣಸ್ವಾಮಿ ದಾಸಶೆಟ್ಟಿ ಎಂಬುವವನು ದೇಣಿಗೆಗಳನ್ನು ಮಾನ್ಯ ಮಾಡುತ್ತಿದ್ದನು. ಮೂಗೂರು ಗ್ರಾಮವು ಪಟ್ಟಣವಾಗಿ ಮಾರ್ಪಡುವುದನ್ನು ಮಾನ್ಯ ಮಾಡಿದ್ದನು.

ಈ ರೀತಿಯಾಗಿ ಹೊಯ್ಸಳ ಕಾಲದಲ್ಲಿ ಪಟ್ಟಣಸ್ವಾಮಿಯ ಪಟ್ಟಣದ ಆಡಳಿತ ಮತ್ತು ಆರ್ಥಿಕತೆಯಲ್ಲಿ ಮುಖ್ಯಪಾತ್ರ ವಹಿಸಿದ್ದನೆಂದು ಮೇಲಿನ ವಿಶ್ಲೇಷಣೆಯ ಅಂಶಗಳಿಂದ ತಿಳಿದು ಬರುತ್ತದೆ. ಪಟ್ಟಣದ ಸ್ಥಳೀಯ ವರ್ತಕ ಸಂಘಕ್ಕೆ ನಾಯಕನಾಗಿದ್ದನು. ಅವನು ಪಟ್ಟಣದಲ್ಲಿ ಸಂತೆಗಳನ್ನು ಸಂಯೋಜಿಸಿ ತ್ವರಿತಗತಿಯಲ್ಲಿ ವಾಣಿಜ್ಯ ವ್ಯಾಪಾರಗಳು ಅಭಿವೃದ್ಧಿ ಹೊಂದಲು ಪ್ರಮುಖ ಪಾತ್ರವಹಿಸಿದ್ದನು. ಸಾರ್ವಜನಿಕರ ಯೋಗಕ್ಷೇಮ ನೋಡಿಕೊಳ್ಳುವುದರಲ್ಲಿ ಪಟ್ಟಣಸ್ವಾಮಿ ಒಬ್ಬ ಪ್ರಮುಖ ವ್ಯಕ್ತಿಯಾಗಿದ್ದನು. ದತ್ತಿ ಸಂಸ್ಥೆಗಳ ಸ್ಥಾಪನಾಕಾರ್ಯ ವ್ಯಾಪಾರ ವಹಿವಾಟು ರಸ್ತೆ ನಿರ್ಮಾಣ ಹಾಗೂ ಇತರ ಸಾರ್ವಜನಿಕರಿಗೆ ಅತ್ಯಗತ್ಯ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದನು.

### 6.4.4 ವ್ಯಾಪಾರಿ ಸಂಘಗಳು

ಮಧ್ಯಕಾಲೀನ ಆರ್ಥಿಕ ಜೀವನದ ಇನ್ನೊಂದು ಪ್ರಮುಖ ವೈಶಿಷ್ಟತೆಯೇನೆಂದರೆ ಕುಶಲ ಕರ್ಮಿಗಳು ಹಾಗೂ ವರ್ತಕರಿಬ್ಬರನ್ನು ಹೊಂದಿದ ವ್ಯಾಪಾರಿ ಸಂಘಗಳ ಅಸ್ತಿತ್ವವಾಗಿತ್ತು. "ಭಾರತೀಯ ಕಲೆ ಹಾಗೂ ಚತುರತೆಗಳು ಈ ಜನಗಳ ಅನಿಯಮಿತ ಸಂಘಟನೆ ನಿಪುಣತೆಯ ಆಧಾರದ ಮೇಲೆ ನಿಂತಿದ್ದವು" ಎಂಬುದು ಎ.ಎನ್.ಬೋಸ್ ರವರ ಅಭಿಪ್ರಾಯವಾಗಿದೆ.[102]

ಸಂಪತ್ತಿನ ಉತ್ಪಾದನೆಗೆ ಸಂಘಟನೆ ಸಂಯೋಜನೆ ಹಾಗೂ ವಾಣಿಜ್ಯವನ್ನು ನಿಯಂತ್ರಿಸುವ ನಿಯಮಗಳ ಅವಶ್ಯಕತೆಯಿದೆ.[103]

ಸ್ಥಳೀಯ ಅಂಗಗಳನ್ನು ಉಲ್ಲೇಖಿಸುವಾಗ ಅದಕ್ಕೆ ಸಂಬಂಧಿಸಿದ ಸಂಘಟನೆಗಳನ್ನು ಕುರಿತು ಸಂಸ್ಕೃತ ಕೃತಿಗಳು ಅನೇಕ ಶಬ್ದಗಳನ್ನು ಉಪಯೋಗಿಸಿದವು. ಸಾಮಾನ್ಯವಾಗಿ ಶ್ರೇಣಿ ಹಾಗೂ ಪುಗ ಎಂಬ ಪದಗಳನ್ನು ಕೈಗಾರಿಕಾ ಹಾಗೂ ವಾಣಿಜ್ಯ ಸಂಘಟನೆಗಳಿಗಾಗಿ ಉಪಯೋಗಿಸಲಾಗುತ್ತಿತ್ತು.

### 6.3.5 ವ್ಯಾಪಾರಿ ಸಂಘಗಳ ಪ್ರಾಮುಖ್ಯತೆ

ಮಧ್ಯಕಾಲೀನ ಯುಗದ ಆರ್ಥಿಕ ಜೀವನದಲ್ಲಿ ವ್ಯಾಪಾರಿ ಸಂಘಗಳ ಪ್ರಾಮುಖ್ಯತೆ ಹಾಗೂ ನಗರ ಆರ್ಥಿಕ ಚಟುವಟಿಕೆಗಳಲ್ಲಿ ಅವುಗಳ ಮಹತ್ವವನ್ನು ಅತಿಶಯ ಮಾಡಲು ಸಾಧ್ಯವಿಲ್ಲ. ಅಪ್ಪಾ ದೊರೈ ಹೇಳುವಂತೆ ಮಧ್ಯಕಾಲೀನ ಪಟ್ಟಣದ ಆರ್ಥಿಕ ಸಂಘಟನೆಯು ಈ ವ್ಯಾಪಾರಿ ಸಂಘದ ಸುತ್ತ ಕೇಂದ್ರೀಕೃತಗೊಂಡಿತ್ತು.[104]

ಗಿಡೆನ್ ಸ್ಜೋಬರ್ಗ್‌ನ ಪ್ರಕಾರ “ವರ್ತಕ ಸಂಘಗಳು ಪಟ್ಟಣಗಳು ಹಾಗೂ ನಗರಗಳ ವಿಶಿಷ್ಟ ಭಾಗಗಳಾಗಿವೆ. ಹಾಗೂ ಗ್ರಾಮಗಳಲ್ಲಿ” ಹಾಗೂ ಕೇವಲ ಪಟ್ಟಣ ಮತ್ತು ನಗರಗಳಲ್ಲಿ ಮಾತ್ರ ಹೆಚ್ಚಿನ ಸಂಖ್ಯೆಯಲ್ಲಿ ಪೂರ್ಣಾವಧಿ ಪರಿಣಿತರು ಕಂಡುಬರುತ್ತಿದ್ದರು. ಸಾಮಾನ್ಯವಾಗಿ ಎರಡು ರೀತಿಯ ವರ್ತಕ ಸಂಘಗಳಿರುತ್ತಿದ್ದವು. ಅವುಗಳೆಂದರೆ ಕುಶಲಕರ್ಮಿಗಳ ಸಂಘ ಹಾಗೂ ವರ್ತಕ ಸಂಘ ಇವೆರಡರಲ್ಲಿ ಎರಡನೆಯದು ವ್ಯವಸ್ಥಿತ ಸಂಘಟನೆಯನ್ನು ಹೊಂದಿ ಬಹಳ ಬಲಿಷ್ಟವಾಗಿತ್ತು. ಆದರೆ ಮೊದಲನೆಯದು ಕೇವಲ ಒಂದು ಸ್ಥಳೀಯ ಸಂಘಟನೆ ಮಾತ್ರ ಆಗಿತ್ತು. ಈ ವ್ಯಾಪಾರಿ ಸಂಘಗಳ ವಿಶಿಷ್ಟತೆಗಳೇನೆಂದರೆ ಒಂದೇ ರೀತಿಯಾದ ಕಸುಬು ಹಾಗೂ ಸ್ವತಂತ್ರ ಸದಸ್ಯತ್ವವಾಗಿದ್ದವು. ಸಾಮಾನ್ಯವಾದ ಪದ್ಧತಿಯ ಪ್ರಕಾರ ಹೆಚ್ಚಿನ ಸಂಖ್ಯೆಯ ಸದಸ್ಯರು ಒಂದೇ ಜಾತಿ ಅಥವಾ ಜಾತಿಗಳಿಗೆ ಸೇರಿದವರಾಗಿರುತ್ತಾರೆ. ಕಸುಬಿನ ಪರಿಣತೆ, ವ್ಯಾಪಾರದ ಪ್ರಮಾಣದಲ್ಲಿನ ಏರಿಕೆಗಳು ವ್ಯಾಪಾರಿ ಸಂಘಟನೆಗಳ ನಿರ್ಮಾಣ ಹಾಗೂ ಬೆಳವಣಿಗೆಯ ಆರ್ಥಿಕ ಕಾರಣಗಳಾಗಿರ ಬೇಕು. ಕೈಗಾರಿಕೆಗಳ ವ್ಯಾಪಾರ ಹಾಗೂ ವಾಣಿಜ್ಯದ ವಿಸ್ತರಣೆಯಿಂದಾಗಿ ವ್ಯಾಪಾರೀ ಸಂಘಗಳು ಹಲವಾರು ಕಾರ್ಯಗಳನ್ನು ಕೈಗೆತ್ತಿಕೊಂಡವು. ಅವುಗಳ ಅಧಿಕಾರವನ್ನು ಹೆಚ್ಚಿಸಲಾಯಿತು ಹಾಗೂ ಪುರಾತನ ಮತ್ತು ಮಧ್ಯಕಾಲೀನ ಯುಗದ ನ್ಯಾಯಮೂರ್ತಿಗಳು ಇದನ್ನು ಮಾನ್ಯತೆ ಮಾಡಿದರು.

ಸ್ಮೃತಿ ಬರಹಗಾರರು ವ್ಯಾಪಾರಿ ಸಂಘಗಳ ನಿಯಮಗಳಿಗೆ ಒಂದು ಕಾನೂನುಬದ್ಧ ಅಧಿಕಾರವನ್ನು ನೀಡಿದರು.[105] ಆಳ್ವಿಕೆಗಾರರು ವ್ಯಾಪಾರಿ ಸಂಘಗಳ ಅಧಿಕಾರ ಮತ್ತು ಹಕ್ಕುಗಳನ್ನು ಮಾನ್ಯತೆ ಮಾಡಿದ್ದರು ಹಾಗೂ ಅವುಗಳ ಕಾರ್ಯ ಚಟುವಟಿಕೆಗಳಲ್ಲಿ ಅಥವಾ ಅವುಗಳ ಬಗ್ಗೆಯಾಗಲೀ ಮಧ್ಯಪ್ರವೇಶ ಮಾಡುತ್ತಿರಲಿಲ್ಲ.

### 6.4.6 ವೃತ್ತಿ ಸಂಘಗಳು

ದಕ್ಷಿಣ ಭಾರತದಲ್ಲಿ ಕಾರ್ಯೋನ್ಮುಖವಾಗಿದ್ದ ಹಲವಾರು ವೃತ್ತಿ ಸಂಘಗಳಿದ್ದವು. ಒಂದು ಶಾಸನವು ದಾಖಲಿಸುವಂತೆ ಹದಿನೆಂಟು ಪಟ್ಟಣಗಳಿದ್ದವು. ಅವುಗಳೆಂದರೆ ವ್ಯವಹಾರಿಕಗಳು, ಪಂಚಾಲರು, (ಐದು ಬಗೆಯ ಆಚಾರಿಗಳು), ಕುಂಬಾರರು, ನೇಯ್ಗೆಯವರು, ವಸ್ತ್ರಬೇಧಿಕರು, (ಬಟ್ಟೆಗೆ ಬಣ್ಣ ಹಾಕುವವರು) ತಿಳಘಟ್ಟಕರು (ಎಣ್ಣೆ ತಯಾರಕರು) ಕುರಾಂತಕರು, ವಸ್ತ್ರ ರಕ್ಷಕರು, ದೇವಾಂಗರು, ಗೋರಕ್ಷಕರು (ಗೊಲ್ಲರು) ಕಿರಾತಕರು (ಬೇಟೆಗಾರರು) ರಜಕರು (ಅಗಸರು) ಹಾಗೂ ಕ್ಷೌರಿಗಳು.[106] ವೃತ್ತಿಸಂಘವು ವೃತ್ತಿಪರ ಸಂಘಟನೆಯಾಗಿದ್ದು ಜಾತಿ ಹಾಗೂ ವಂಶವು ಪ್ರಮುಖ ವಾಗಿದ್ದವು. ಒಂದು ನಿರ್ದಿಷ್ಟ ವೃತ್ತಿಗೆ ಅಂಟಿಕೊಳ್ಳುವುದು ಒಂದು ನಿರ್ಣಾಯಕ ಅಂಶವಾದರೂ ಒಬ್ಬ ವ್ಯಕ್ತಿಯ ಆಯ್ಕೆಯು ಹೆಚ್ಚಾಗಿ ಆತನ ಜಾತಿಯನ್ನು ಅವಲಂಬಿಸಿತ್ತು. ಮಿತಾಕ್ಷರದ ಪ್ರಕಾರ ಶ್ರೇಣಿಯು ಜನರ ಒಂದು ಗುಂಪಾಗಿದ್ದು ಒಂದು ಜಾತಿಯ ಕಸುಬಿನಿಂದ ಅದು ಅಸ್ತಿತ್ವಕ್ಕೆ ಬರುತ್ತದೆ. ಪುಗವು ಒಂದು ಸ್ಥಳದಲ್ಲಿ ನೆಲೆಸಿದ್ದ ವಿವಿಧ ಜಾತಿ ಹಾಗೂ ವೃತ್ತಿಗಳ ಜನರ ಒಂದು ಸಂಘವಾಗಿತ್ತು.

ಕುಶಲಕರ್ಮಿಗಳ ಸಂಘವನ್ನು ಕರ್ನಾಟಕದ ಶಾಸನಗಳಲ್ಲಿ ಹಲವಾರು ರೀತಿಯಲ್ಲಿ ಉಲ್ಲೇಖಿಸಲಾಗಿದೆ. ಘಟಪಣದಿಯ ಪ್ರಕಾರ ಕೆಲವು ಶಾಸನಗಳಲ್ಲಿ ಶ್ರೇಣಿ ಎಂಬ ಪದವು ಈ ರೀತಿಯಾದ ಸಂಘವನ್ನು ಸೂಚಿಸಲು ಅಳವಡಿಸಲಾಗಿದೆ. ಕರ್ನಾಟಕದ ಶಾಸನಗಳಲ್ಲಿ ಕುಶಲಕರ್ಮಿ ಗಳ ಸಂಘಗಳಿಗೆ ಉಪಯೋಗಿಸಲಾದ ಬಹುಶಃ ಅತೀ ಜನಪ್ರಿಯವಾದ ಪದವೆಂದರೆ ಕೊಟ್ಟಳಿ. ಈ ಸಂಘಗಳನ್ನು ಹಿಟ್ಟುಗಳೆಂದು ಕರೆಯಲಾಗುತ್ತಿತ್ತು. ಕೆಲವೊಮ್ಮೆ ಸಮುದಾಯ ಬಕ್ಕಲು, ನಖರ ಎಂಬುವುಗಳನ್ನು ಬಳಸಲಾಗುತಿತ್ತು. ಈ ಸಂಘಗಳನ್ನು ಅವುಗಳ ಸದಸ್ಯರ ವೃತ್ತಿಗಳನ್ನು ಆಧರಿಸಿ ಉಲ್ಲೇಖಿಸುತ್ತಿದ್ದರು ಎಂಬುದು ತಿಳಿದಿರಲಿಲ್ಲ. ಉದಾಹರಣೆಗೆ ಎಣ್ಣೆ ಗಿರಣಿ ಮಾಲೀಕರ ಕುಟುಂಬಗಳ ಸಂಘಗಳು ಆಗಾಗ ತೆಲಿಗರು ಅಥವಾ ತೆರಿಗಾರಿ ವಟ್ಟೊಕ್ಕಲು ಎಂಬ ಹೆಸರಿನಿಂದ

ಕರೆಯಲ್ಪಡುತ್ತಿದ್ದವು. ಪ್ರತೀ ವೃತ್ತಿಪರ ಜಾತಿಯು ತನ್ನದೇ ಆದ ಸಂಘವನ್ನು ಹೊಂದಿತ್ತು ತಮ್ಮ ವೃತ್ತಿಗಳ ಹೆಸರುಗಳನ್ನು ಕೊಟ್ಟಳಿ ಅಂದರೆ ಸಂಘವೆಂದು ಎಂಬ ಹೆಚ್ಚುವರಿ ಹೆಸರಿನಿಂದ ಕುಶಲ ಕರ್ಮಿಗಳ ಸಂಘವು ಹೆಸರಿಸಿಕೊಳ್ಳುತ್ತಿತ್ತು.[107]

ಬಹಳ ಹಿಂದಿನಿಂದಲೂ ಈ ಕುಶಲಕರ್ಮಿಗಳ ವರ್ಗಗಳು ಒಂದು ಸಾಂಸ್ಥಿಕ ಅಂಗವಾಗಿದ್ದು ಹಾಗೂ ಸಾಮಾನ್ಯ ವಿಷಯಗಳಲ್ಲಿ ಇತರೆ ವೃತ್ತಿಪರ ಗುಂಪುಗಳು ಹಾಗೂ ವ್ಯಾಪಾರಿ ಸಂಘಗಳೊಂದಿಗೆ ಸಹಕರಿಸಿರುವುದಾಗಿ ಕಂಡು ಬರುತ್ತದೆ. ಈ ಸಂದರ್ಭಗಳಿಗಾಗಿಯೇ ಪ್ರತ್ಯೇಕ ಸ್ಥಳಗಳನ್ನು ಕಾಯ್ದಿರಿಸಲಾಗುತ್ತಿತ್ತು ಎಂಬ ಅಂಶದಿಂದ ಇವುಗಳಿಗಿದ್ದ ಮಹತ್ವವನ್ನು ನಾವು ತಿಳಿಯಬಹುದು. ಸಂಘದ ಸದಸ್ಯರು ನಗರ ಪ್ರದೇಶಗಳ ಒಂದು ನಿರ್ದಿಷ್ಟ ಸ್ಥಳದಲ್ಲಿ ವಾಸಿಸುತ್ತಿದ್ದರು. ಹಾಗೂ ದೇವಾಲಯ ಅಥವಾ ಸಂತೆಯಂತಹ ಸಾಮಾನ್ಯ ಜನಸೇರುವ ಸ್ಥಳಗಳಲ್ಲಿ ಭೇಟಿಯಾಗುತ್ತಿದ್ದರು ಹಾಗೂ ಅವರ ವ್ಯಾಪಾರವನ್ನು ನಡೆಸುತ್ತಿದ್ದರು. ಆಗಿಂದಾಗ್ಗೆ ಸಂಘಗಳು ಸಾಕಷ್ಟು ವಿಶೇಷ ಹಕ್ಕುಗಳನ್ನು ಹೊಂದುತ್ತಿದ್ದವು. ಕೆಲವು ಪ್ರದೇಶದ ಸಂಘಗಳು ಬೇರೆ ಪ್ರದೇಶದ ಸಂಘಗಳ ಮೇಲೆ ಪ್ರಭಾವವನ್ನು ಹೊಂದಿದ್ದವು. ಇವರು ಕೇವಲ ವಿಶೇಷ ಹಕ್ಕುಬಾಧ್ಯತೆಗಳನ್ನು ಹೊಂದುವ ಅಂಗವಾಗಿರದೆ ದಾನ ಮಾಡುವ ಅಂಗವು ಕೂಡ ಆಗಿದ್ದವು. ಸಂಘಗಳು ತಮ್ಮದೇ ಆದ ನಿಯಮಾವಳಿಗಳನ್ನು ಹೊಂದಿದ್ದವು. ಇವುಗಳನ್ನು ಸದಸ್ಯರು ಪಾಲಿಸುತ್ತಿದ್ದರು. ಯಾವುದೇ ಸದಸ್ಯನು ಅವುಗಳನ್ನು ಉಲ್ಲಂಘಿಸಿದ ಪಕ್ಷದಲ್ಲಿ ಅಂತಹ ತಪ್ಪಿತಸ್ತನಿಗೆ ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ಸಂಘಗಳನ್ನು ಸ್ಥಾಪಿಸುವಲ್ಲಿ ಸಮುದಾಯದ ಆಸಕ್ತಿಯು ಹೆಚ್ಚಿನ ಪಾಲನ್ನು ಹೊಂದಿತ್ತು. ಈ ಸಂಘಗಳ ಸದಸ್ಯರು ತಮ್ಮ ಕಸುಬಿನ ಹಿತಾಸಕ್ತಿಗಳನ್ನು ಕಾಪಾಡುತ್ತಿದ್ದರು. ಈ ಸಂಘಟನೆಗಳು ಹಲವು ವಿಶೇಷ ಹಕ್ಕುಗಳನ್ನು ಹೊಂದಿದ್ದವು. ಹಾಗೂ ರಾಜಕೀಯ ವಿಷಯಗಳಲ್ಲಿ ಸಹಾಯ ಮಾಡುತ್ತಿದ್ದವು. ಹಾಗೂ ಇವುಗಳಿಗೆ ಸ್ವಲ್ಪ ಮಟ್ಟಿನ ರಾಜಕೀಯ ಅಧಿಕಾರವು ಇತ್ತು. ಆಗಿಂದಾಗ್ಗೆ ಅರಸರಿಂದ ಸವಲತ್ತುಗಳನ್ನು ಪಡೆಯುತ್ತಿದ್ದರು ಈ ಸಂಘದ ಸಂಘಟನೆಗಳ ಪಾತ್ರ ಅಧಿಕಾರ ಹಾಗೂ ಕಾರ್ಯಗಳು ಅವರಿಗಿದ್ದ ವಿಶೇಷ ಹಕ್ಕುಬಾಧ್ಯತೆಗಳು ಸಮಕಾಲೀನ ಸಾಮಾಜಿಕ ಆರ್ಥಿಕ ಜೀವನ ಹಾಗೂ ಸನ್ನಿವೇಶದಲ್ಲಿ ಅದರ ಪಾತ್ರವನ್ನು ಆ ಕಾಲದ ಕೆಲವು ಪ್ರಮುಖ ವೃತ್ತಿ ಸಂಘಗಳನ್ನು ಅಧ್ಯಯನ ಮಾಡುವ ಮುಖಾಂತರ ಉದಾಹರಿಸಬಹುದು.

### 6.4.7 ಪಾಂಚಾಲರು

ಅನೇಕ ವೃತ್ತಿ ಸಂಘಗಳಲ್ಲಿ ಪಾಂಚಾಲರು, ಅಥವಾ ವೀರ ಪಾಂಚಾಲರು ಅತ್ಯಂತ ಪ್ರಮುಖರೆಂದು ತಿಳಿದು ಬರುತ್ತದೆ. ಈ ಸಂಘವು ಪಂಚಲಂವರು, ಪಂಚನಂವರು ಹಾಗೂ ಪಾಂಚಾಲರು ಎಂದು ಹೆಸರಾಗಿತ್ತು. ಪಾಂಚಾಲ ಸಂಘವು, ಕಮ್ಮಾರರು, ಅಕ್ಕಸಾಲಿಗರು, ಕಂಚುಗಾರರು, ಬಡಗಿಗಳು ಹಾಗೂ ಕಲ್ಲು ಕಟ್ಟಡ ನಿರ್ಮಾಪಕರನ್ನು ಹೊಂದಿತ್ತು. ತಮಿಳು ಪದ 'ಪಂಚಾಲತ್ತರ್' ಎಂದರೆ ಐದು ಕುಶಲಕರ್ಮಿಗಳೆಂಬ ಅರ್ಥ ಬರುತ್ತದೆ. ವೀರ ಪಾಂಚಾಲರು ಸರ್ಕಾರದ ತೆರಿಗೆಯಿಂದ ವಿಮುಕ್ತರಾಗಿದ್ದರು.

### 6.4.8 ವರ್ತಕ ಸಂಘಗಳ ಪ್ರಾಮುಖ್ಯತೆ

ಅಧಿಕಾರ ಹಾಗೂ ಪ್ರಾಬಲ್ಯದ ವಿಷಯದಲ್ಲಿ ಬಹುಶಃ ವೃತ್ತಿ ಸಂಘಕ್ಕಿಂತ ವ್ಯಾಪಾರಿ ಸಂಘವು ಹೆಚ್ಚಿನ ಪ್ರಾಮುಖ್ಯತೆಯನ್ನು ಹೊಂದಿತ್ತು. ಇದು ಅವಶಯಕವಾಗಿ ವರ್ತಕರ ಸಂಘವಾಗಿ ದೇಶದ ವಾಣಿಜ್ಯ ಜೀವನದಲ್ಲಿ ದೊಡ್ಡ ಪಾತ್ರವನ್ನು ನಿರ್ವಹಿಸಿತು ಕಸುಬಿನಲ್ಲಿ ಸಾಮರಸ್ಯತೆ ಸಮರೂಪವಾದ ಹಿತಾಸಕ್ತಿ ಸ್ಥಳೀಯ ಪ್ರದೇಶದಲ್ಲಿ ವಸತಿ ಹಾಗೂ ಹಲವು ಧಾರ್ಮಿಕ ಪಂಥಗಳ ಸದಸ್ಯತ್ವ ಇವುಗಳೆಲ್ಲವೂ ವರ್ತಕ ಸಂಘಗಳನ್ನು ರೂಪಿಸುವುದರಲ್ಲಿ ನಿರ್ಣಾಯಕ ಅಂಶಗಳಾಗಿದ್ದವು. ಅನೇಕ ಮಾರುಕಟ್ಟೆ ಪಟ್ಟಣಗಳಿದ್ದವು. ಇಂತಹವುಗಳಲ್ಲಿನ ವರ್ತಕರೊಂದಿಗೆ ರಾಜನು ಹೆಚ್ಚು ತಲೆ ಹಾಕುತ್ತಿರಲಿಲ್ಲ. ಆದರೆ ಥೇಂಬರ್‌ನ ಅಭಿಪ್ರಾಯದ ಪ್ರಕಾರ ಸ್ವತಂತ್ರ ಕಾನೂನುಗಳನ್ನು ಹೊಂದಿದ ವ್ಯಾಪಾರ ವಾಣಿಜ್ಯ ಸಂಬಂಧಗಳ ಪ್ರಾಬಲ್ಯತೆಯು ಎಲ್ಲೂ ಕಂಡುಬರಲಿಲ್ಲ.[108]

ನಗರ ಸಕಾರವು ಈ ಸಂಘಗಳನ್ನು ಸುತ್ತುವರೆದಿತ್ತು. ನಗರದ ಮುಖ್ಯಸ್ಥ ಅಥವಾ ನಗರ ಪಾಲಕನು ಸಾಮಾನ್ಯವಾಗಿ ಒಬ್ಬ ಪ್ರಮುಖ ನಾಯಕ ಅಥವಾ ಮುಕ್ಯಸ್ಥ ಇಲ್ಲವೇ ಆ ಸಂಘದ ಮುಖ್ಯಸ್ಥನಾಗಿರುತ್ತಿದ್ದನು. ಪಟ್ಟಣಸ್ವಾಮಿಯ ಪಾತ್ರ ಹಾಗೂ ಕಾರ್ಯಗಳ ಅಧ್ಯಯನವು ಆಡಳಿತ ಹಾಗೂ ಆರ್ಥಿಕ ಚಟುವಟಿಕೆಗಳ ವಿಷಯದಲ್ಲಿ ವರ್ತಕ ಸಂಘಗಳು ಹಾಗೂ ಪಟ್ಟಣಗಳ ನಡುವೆ ನಿಕಟ ಸಂಬಂಧವನ್ನು ತೋರಿಸುತ್ತದೆ. ನಮ್ಮ ಅಧ್ಯಯನ ಕಾಲದಲ್ಲಿ ವರ್ತಕ ಸಂಘಗಳು ಹೊಂದಿದ್ದ ಅಧಿಕಾರ ಹಾಗೂ ಕಾರ್ಯಗಳು ವಿಶೇಷ ಹಕ್ಕುಗಳು ಮತ್ತು ಪ್ರಾಬಲ್ಯವನ್ನು ಹಲವಾರು ಉದಾಹರಣೆಗಳನ್ನು ನೀಡುವುದರ ಮೂಲಕ ಸ್ಪಷ್ಟಪಡಿಸಬಹುದು.

### 6.4.9 ಐಯ್ಯಾವೊಳೆ

ದಕ್ಷಿಣ ಭಾರತದ ಜನ ಜೀವನದಲ್ಲಿ "ಐಯ್ಯಾವೊಳೆ" ಎಂಬ ವ್ಯಾಪಾರ ಶ್ರೇಣಿಯು ಪ್ರಮುಖ ಪಾತ್ರ ವಹಿಸಿದ್ದಿತು. ಕ್ರಿ.ಶ. 8ನೇ ಶತಮಾನದಿಂದ 17ನೇ ಶತಮಾನದವರೆಗಿನ ಭಾರತದ ಶಾಸನಗಳು ಈ ಶ್ರೇಣಿ ವಿವರಗಳನ್ನು ತಿಳಿಸುತ್ತವೆ.[109] ಅವರು ತಮ್ಮ ಚೀಲಗಳಲ್ಲಿ ಬೆಲೆಯುಳ್ಳ ಸರಕುಗಳನ್ನು ಹೊಂದಿ ಎಲ್ಲ ರಾಷ್ಟ್ರಗಳು, ಗ್ರಾಮಗಳು, ನಗರಗಳು ಮತ್ತು ಪಟ್ಟಣಗಳನ್ನು ಸುತ್ತಾಡುತ್ತಿದ್ದ ವರ್ತಕರಾಗಿದ್ದರು.

ಈ ಶ್ರೇಣಿಗೆ ಒಂದು ನಿರ್ದಿಷ್ಟ ವ್ಯವಸ್ಥೆ ಮತ್ತು ಚರಿತ್ರೆ ಇದ್ದಿತು. ಸಾಮಾನ್ಯವಾಗಿ ರಾಜ ಅಥವಾ ಅವನ ಸರ್ಕಾರ ಅವರಲ್ಲಿ ಮನಸ್ತಾಪ ಅಥವಾ ಜಗಳಗಳಿಂದ ಸರ್ಕಾರದ ಪ್ರವೇಶ ಅವಶ್ಯಕವಾಗಿರದಿದ್ದರೆ ಅವುಗಳ ಕೆಲಸದಲ್ಲಿ ಪ್ರವೇಶಿಸುತ್ತಿರಲಿಲ್ಲ. ಐಯ್ಯಾವೊಳೆ ತನ್ನದೇ ಆದ ನಿಯಮಗಳನ್ನು ಹೊಂದಿದ್ದಿತು. ಅವರು ವೀರ ಬಳಂಜ ಮತದ ರಕ್ಷಣೆ ಮಾಡುವವರೆಂದು ಹೇಳುತ್ತಿದ್ದರು. ಅದರ ಸದಸ್ಯರು ಭಗವತಿ ದೇವತೆಯ ಆರಾಧಕರಾಗಿದ್ದರು. ಆ ಶ್ರೇಣಿಯಲ್ಲಿ "ಸಾವಿರ ಜಿಲ್ಲೆಗಳ" ಮೂವತ್ತೆರಡು ಉಚ್ಛ್ರಾಯ ಸ್ಥಿತಿಯಲ್ಲಿದ್ದ ತೀರ ಪ್ರದೇಶದ ನಗರಗಳು ಹದಿನೆಂಟು ಪಟ್ಟಣಗಳು ಮತ್ತು ಅರವತ್ತನಾಲ್ಕು ವ್ಯಾಪಾರ ಸಭೆಗಳು ಇವೆ ಮುಂತಾದ ವಿಭಾಗಗಳಿದ್ದವು. ಅದರ ಸದಸ್ಯರು ಅನೇಕ ರಾಷ್ಟ್ರಗಳನ್ನು ಸುತ್ತಿ ಭೂಜಲಮಾರ್ಗಗಳಿಂದ ಆ ರಾಷ್ಟ್ರಗಳಿಗೂ ಹೋಗಿದ್ದರೆಂದು ಹೇಳುತ್ತಿದ್ದರು.[110] ಶಿಕಾರಿಪುರದ ಒಂದು ಶಾಸನವು[111] ಈ ವರ್ತಕರ ಉದ್ದವಾದ ಪ್ರಶಂಸೆಯನ್ನು ಕೊಡುತ್ತದೆ ಅವರು ಬಿಜಾಪುರ ಜಿಲ್ಲೆಯ ಬಾದಾಮಿ ತಾಲ್ಲೋಕಿನ ಐಹೊಳೆಯಲ್ಲಿ ಕೇಂದ್ರ ಕಛೇರಿ ಹೊಂದಿದ್ದರು. ಕೋಲಾರದ ಒಂದು ಶಾಸನವು ಅವರು ತಮ್ಮನ್ನು "ಐಯ್ಯಾವೊಳೆ ಪುರ ಪರಮೇಶ್ವರಿ"ಯ ಮಕ್ಕಲ್ ಮತ್ತು ಭಾಗವತಿಯ ಮಕ್ಕಲ್" ಎಂದು ಹೇಳಿಕೊಳ್ಳುತ್ತಿದ್ದರೆಂದು ತಿಳಿಸುತ್ತದೆ.[112]

ಅವರು ಕೂಡ "ಪಟ್ಟಣಸ್ವಾಮಿ" ಎಂಬ ನಾಯಕನನ್ನು ಹೊಂದಿದ್ದರೆಂದು ಕಾಣುತ್ತದೆ. ಈ ಶ್ರೇಣಿಯ ಸಂವಿಧಾನವನ್ನು ತಿಳಿಯಲಾಗುವುದಿಲ್ಲ ಆದರೆ "ಸ್ವಾಮಿಗಳು" ಯಾವಾಗಲೂ ಅದು ಐನೂರು ಸದಸ್ಯರುಗಳನ್ನೊಳಗೊಂಡ ಕಾರ್ಯ ನಿರ್ವಾಹಕ ಸಮಿತಿಯಾಗಿದ್ದಿತ್ತು. ಆ ಶ್ರೇಣಿಯು ತನ್ನಲ್ಲಿ ಗವರರು ಗತ್ರಿಗದು, ಶೆಟ್ಟಿಗಳು ಶೆಟ್ಟಿಗುಟ್ಟರು, ಅಂಕಕರರು, ಶೆಟ್ಟಿಪುತ್ರರು, ಬೀರವಣಿಗರು

ನಾನಾ ದೇಶಿಗಳು, ನಾಡು, ನಗರ ಮತ್ತು ಇತರರನ್ನೊಳಗೊಂಡಿದ್ದಿತು.[113] ಚಂದ್ರಶೇಖರ ಶಾಸ್ತ್ರಿಯವರ ಪ್ರಕಾರ ಐಯ್ಯಾವೊಳೆ ವರ್ತಕ ಶ್ರೇಣಿಗಳ ಒಂದು ಸಮಗ್ರ ಸಂಘವಾಗಿರಬಹುದು.

### 6.4.10 ವೀರಬಣಜಿಗರು

ಕರ್ನಾಟಕ ಮತ್ತು ಸುತ್ತಮುತ್ತಲ ಪ್ರದೇಶದಲ್ಲಿ ಹೊಯ್ಸಳರ ಕಾಲದಲ್ಲಿ ವೀರಬಣಜಿಗರು ವಿಶೇಷ ಪ್ರಭಾವವನ್ನು ಹೊಂದಿದ್ದರು. ಬಲ್ಲಿಗ್ರಾಮ ಅವರ ಭದ್ರವಾದ ಒಂದು ನೆಲೆಯಾಗಿತ್ತು. ಇವರು ತಮ್ಮ ಹಕ್ಕುಗಳನ್ನು ಮತ್ತು ಬಿರುದುಗಳನ್ನು ಆತ್ಮಾಭಿಮಾನದಿಂದ ರಕ್ಷಿಸಿಕೊಳ್ಳುತ್ತಿದ್ದರು. ಕ್ರಿ.ಶ. 1182ರ ಒಂದು ಶಾಸನದಲ್ಲಿ 114 ಅವರು ತಮ್ಮ ವಿಚಾರವಾಗಿ [illegible] ಪದಗಳನ್ನು ಉಪಯೋಗಿಸಿದ್ದಾರೆ.

ವೀರ ಬಣಜಿಗರು ಬಹಳ ಪ್ರಸಿದ್ಧವಾದ ವರ್ತಕರ ಗುಂಪಾಗಿದ್ದರು.115 ಸಲಿಕೆಯ ಬಲ್ಲಾಳುಗಳು ಉದ್ಯಮಿ ಸಂಘದ ಸದಸ್ಯರಾಗಿದ್ದರೆಂದು ಕಂಡುಬರುತ್ತದೆ. ಈ ಸಂಘದ ಸದಸ್ಯರಿಗೆ ಸಲಿಕೆಯ ಸಂಪರ್ಕವಿತ್ತು. ಇವರು ಪ್ರಮುಖ ನಾಗರೀಕರಾಗಿದ್ದರೆಂದು ತಿಳಿದುಬರುತ್ತದೆ. ಈ ರೀತಿಯಾಗಿ ವ್ಯಾಪಾರಿ ಸಂಘಗಳು ಹೊಯ್ಸಳರ ಕಾಲದಲ್ಲಿ ವಿಶೇಷವಾಗಿ ವ್ಯಾಪಾರ ಕೇಂದ್ರಗಳಲ್ಲಿ ಪ್ರಬಲ ಶಕ್ತಿಗಳಾಗಿದ್ದವೆಂದು ತಿಳಿದು ಬರುತ್ತದೆ. ಅವರ ಆರ್ಥಿಕ ಸ್ಥಿತಿಯು ವ್ಯಾಪಾರಿಗಳಿಗೆ ಸಮಾಜದಲ್ಲಿ ಒಂದು ಸ್ಥಾನವನ್ನು ಕಲ್ಪಿಸಿಕೊಟ್ಟಿತ್ತು. ಅವರು ಪಟ್ಟಣ ಆಡಳಿತ ವಿಷಯಗಳಲ್ಲಿ ಸ್ಥಳೀಯವಾಗಿ ಪ್ರಬಲರಾಗಿದ್ದರು ಹಾಗೂ ನಗರ ಆರ್ಥಿಕ ಚಟುವಟಿಕೆಗಳಲ್ಲಿ ಶಕ್ತಿವಂತರಾಗಿದ್ದರು.

ಈ ಸಂಘಗಳ ಆಂತರಿಕ ಸಂಘಟನೆಯು ಒಂದು ನಿರ್ದಿಷ್ಟ ವಿಧಾನವನ್ನು ಅನುಸರಿಸಿತ್ತು. ಇದನ್ನು ಒಬ್ಬ ಹಿರಿಯ ನಾಯಕನು ನಿರ್ವಹಿಸುತ್ತಿದ್ದನು. ಹಾಗೂ ಅವನ ಹುದ್ದೆಯು ವಂಶ ಪಾರಂಪರ್ಯವಾಗಿತ್ತು. ಈ ಸಂಘದ ನಾಯಕನನ್ನು ಹಿರಿಯ ಸದಸ್ಯರ ಒಂದು ಸಮಿತಿಯು ಬೆಂಬಲಿಸುತ್ತಿತ್ತು. ಪ್ರತೀ ಸಂಘವು ತನ್ನದೇ ಆದ ಚಿಹ್ನೆ ಹಾಗೂ ರಾಜಲಾಂಛನವನ್ನು ಹೊಂದಿತ್ತು. ವ್ಯಾಪಾರಿ ಸಂಘಗಳು ಹಂಚಿಕೆಯ ವಿಷಯಕ್ಕೆ ಸಂಬಂಧಿಸಿದಂತೆ ಪ್ರಬಲರಾಗಿದ್ದರೆ ವೃತ್ತಿ ಸಂಘಗಳು ಉತ್ಪಾದನಾ ವಿಷಯಗಳಲ್ಲಿ ಅಧಿಪತ್ಯವನ್ನು ಹೊಂದಿದ್ದವು. ಆರ್ಥಿಕ ಜೀವನದಲ್ಲಿ ವಿಶೇಷಚವಾಗಿ ನಗರಕ್ಕೆ ಸಂಬಂಧಪಟ್ಟಂತೆ ವೃತ್ತಿ ಹಾಗೂ ವರ್ತಕ ಸಂಘಗಳು ನಿರ್ವಹಿಸಿದ ಪಾತ್ರ ಅವುಗಳು ಹೊಂದಿದ್ದ ಅಧಿಕಾರ ಹಾಗೂ ಪ್ರಾಬಲ್ಯತೆಗಳು ಬಹಳ ಪ್ರಮುಖವಾಗಿದೆ.

### 6.4.11 ನಗರ ಸಮಾಜದ ಸ್ವರೂಪ

ವೈವಿಧ್ಯಮಯ ಸಾಮಾಜಿಕ ಲಕ್ಷಣಗಳನ್ನು ಹೊಂದಿರುವ ನಗರದ ಸ್ವರೂಪವು ಸಂಕೀರ್ಣವಾಗಿದೆ. ವೈವಿಧ್ಯತೆಯೇ ಅದರ ಗುಣವಾಗಿದೆ. ಅದರ ಸಾಮಾಜಿಕ ಸಂಯೋಜನೆ ವೈವಿಧ್ಯತೆಯೇ ಅದರ ಗುಣವಾಗಿದೆ. ಅದರ ಸಾಮಾಜಿಕ ಸಂಯೋಜನೆಯು ನಾನಾ ಬಗೆಯ ಗುಂಪುಗಳು, ಜಾತಿಗಳು ಹಾಗೂ ವರ್ಗಗಳಿಂದ ರಚಿತವಾದುದಾಗಿದೆ. ಇದರ ಜೊತೆಗೆ ಗ್ರಾಮೀಣ ಸಮಾಜಕ್ಕೆ ಹೋಲಿಸಿದ್ದಲ್ಲಿ ನಗರ ಸಮಾಜವು ಹೆಚ್ಚು ಕ್ಲಿಷ್ಟವಾಗಿಲ್ಲ. ಆದ್ದರಿಂದ ನಗರ ಸಮಾಜವು ಪ್ರಗತಿಶೀಲವಾಗಿದೆ. ನಗರಗಳು ಹೊರಗಿನವರಿಗೆ ಮುಕ್ತವಾಗಿದೆ. ಥಾಕೂರ್‌ರವರ ಪ್ರಕಾರ ನಗರದ ಸಾಮಾಜಿಕ ವ್ಯವಸ್ಥೆಯು ಬಂಧುತ್ವಕ್ಕಿಂತ ಮಿಗಿಲಾಗಿ ವಸತಿಯ ಮೇಲೆ ಆಧಾರವಾಗಿದೆ ಹಾಗೂ ನಗರ ವಾಸಿಗಳು ಹಲವಾರು ಗುಂಪುಗಳಿಗೆ ಸೇರಿದವರಾಗಿದ್ದಾರೆ.[116] ನಗರ ಸನ್ನಿವೇಶದಲ್ಲಿ ಜಾತಿಯಲ್ಲಿನ ಕಠಿಣತೆ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ. ಸಾಮಾಜಿಕ ಶ್ರೇಣಿಗೆ ಸಂಬಂಧಿಸಿದಂತೆ ಸಾಂಪ್ರದಾಯಿಕ ಆಲೋಚನೆಗಳು ನಗರದ ವಾತಾವರಣದಲ್ಲಿ ತಮ್ಮ ಬೇರುಗಳನ್ನು ಕಳೆದುಕೊಳ್ಳುತ್ತವೆ.

### 6.4.12 ಗುಂಪುಗಳು

ಹೊಯ್ಸಳರ ಕಾಲದ ನಗರ ಸಮಾಜದ ಅಧ್ಯಯನ ಹಾಗೂ ಒಂದು ನಿರ್ದಿಷ್ಟ ಪಟ್ಟಣ ಅಥವಾ ಪಟ್ಟಣಗಳಲ್ಲಿನ ಸಾಮಾಜಿಕ ಸಂಯೋಜನೆಯ ವಿಶ್ಲೇಷಣೆಯಿಂದ ನಮಗೆ ತಿಳಿದುಬರುವ ಅಂಶವೇನೆಂದರೆ ನಗರ ಸಮಾಜವು ಸಂಕೀರ್ಣವಾದುದ್ದು ಹಾಗೂ ವೈವಿಧ್ಯಮಯವಾದುದ್ದು ನಗರೀಕರಣ ಪ್ರಕ್ರಿಯೆಯು ಸ್ವಲ್ಪ ಮಟ್ಟಿನ ಸರಳತೆ ಹಾಗೂ ಬದಲಾವಣೆಯನ್ನು ನಗರ ಸಮಾಜದಲ್ಲಿ ತರುವ ಮೂಲಕ ಪಟ್ಟಣಗಳ ಸಮಾಜ ಹಾಗೂ ಸಂಸ್ಕೃತಿಯ ಮೇಲೆ ತನ್ನ ಪ್ರಭಾವ ಬೀರುವಂತೆ ಮಾಡಿತು. ಸಮಕಾಲೀನ ನಗರ ಸಮಾಜವು ಮೇಲ್ವರ್ಗ ಹಾಗೂ ಮೇಲ್ವರ್ಗೇತರ ವಿಂಗಡನೆಯನ್ನು ಹೊಂದಿತ್ತು. ಅವುಗಳಲ್ಲಿ ಆಡಳಿತ ವರ್ಗ ರಾಜ, ದೊರೆಗಳು, ಮಂತ್ರಿಗಳು ಉನ್ನತ ಆಡಳಿತ ಹಾಗೂ ಸೇನಾ ಅಧಿಕಾರಿಗಳು, ಶ್ರೀಮಂತ ವರ್ತಕರು, ಶ್ರೇಷ್ಠ ಪುರೋಹಿತರು ಹಾಗೂ ಕೆಳ ಆಡಳಿತ ಮತ್ತು ಸೇನಾ ಸಿಬ್ಬಂದಿ ವೃತ್ತಿಪರರೆಂದರೆ ಲೆಕ್ಕಿಗರು, ಲೇಖಕರು, ಬೋಧಕರು, ವರ್ತಕರು, ಕುಶಲಕರ್ಮಿಗಳು ಹಾಗೂ ಶಿಲ್ಪಿಗಳು, ಸಾರ್ವಜನಿಕ ಮನೋರಂಜಕರು, ಹಾಡುಗಾರರು, ನರ್ತಕರು, ಕಲಾವಿದರು, ಸಂಗೀತಗಾರರು ಹಾಗೂ ಇತರ ತೃತೀಯ

ಗುಂಪಿನವರೆಂದರೆ ಹೂವು ಮಾರುವವರು, ಕ್ಷೌರಿಕರು, ಅಗಸರು ಹಾಗೂ ಮನೆಗೆಲಸದ ಆಳುಗಳು ಹಾಗೂ ಈ ಗುಂಪಿನಲ್ಲಿ ವಿವಿಧ ಧಾರ್ಮಿಕ ಗಲುಂಪಿನವರು ಇದ್ದರು.

### 6.4.13 ಮೇಲ್ವರ್ಗಗಳು ಹಾಗೂ ಮೇಲ್ವರ್ಗೇತರರು

ನಗರಗಳಲ್ಲಿ ಹೆಚ್ಚು ಪ್ರಭಾವೀ ಗುಂಪೆಂದರೆ ಉನ್ನತ ವರ್ಗವಾಗಿತ್ತು. ಈ ವರ್ಗವು ಅಗಾಧವಾದ ಸಾಮಾಜಿಕ ಪ್ರಾಬಲ್ಯವನ್ನು ಹೊಂದಿತ್ತು. ಸ್ಜೋಬರ್ಗ್ ಹೇಳುವಂತೆ ನಗರದಲ್ಲಿ ಒಂದು ಸಣ್ಣ ಮೇಲ್ವರ್ಗವು ರಾಜಕೀಯ ಪ್ರದೇಶಗಳಲ್ಲಿ ಹಾಗೂ ಶೈಕ್ಷಣಿಕ ವ್ಯವಸ್ಥೆಗಳಲ್ಲಿ ಪ್ರಮುಖ ಸ್ಥಾನವನ್ನು ಹೊಂದಿತ್ತು ಹಾಗೂ ಹೆಚ್ಚು ಕಡಿಮೆ ಒಂದು ರೀತಿಯ ನಿರಂಕುಶ ನಿಯಂತ್ರಣವನ್ನು ಹೊಂದಿತು.[117]

ಈ ಉನ್ನತ ವರ್ಗವು ರಾಜ, ಮಂತ್ರಿಗಳು, ರಾಜ್ಯಪಾಲರು, ಆಡಳಿತದ ಸಮೂಹ, ಬುದ್ಧಿಜೀವಿಗಳು, ಉನ್ನತ ಪುರೋಹಿತರು ಸೇನೆಯ ಮುಖ್ಯಸ್ಥರು ಶ್ರೀಮಂತ ವರ್ತಕರು ಹಾಗೂ ಇತರರಾಗಿದ್ದರು.[118] ಉನ್ನತ ವರ್ಗವು ತನ್ನ ಅಧೀನದಲ್ಲಿ ಭೌತಿಕ ಸಂಸ್ಕೃತಿ ಹಾಗೂ ಸಂಪನ್ಮೂಲ ಗಳನ್ನು ರಾಜಕೀಯ ಪ್ರಾಬಲ್ಯ ಮತ್ತು ಪವಿತ್ರ ಸಂಪ್ರದಾಯವನ್ನು ಹೊಂದಿತ್ತು. ಅದು ರಾಜಕೀಯ ಧಾರ್ಮಿಕ ಮತ್ತು ಆರ್ಥಿಕ ಶಕ್ತಿಗಳನ್ನು ತನಗೆ ಬೇಕಾದಂತೆ ಬಳಸಿಕೊಳ್ಳುವ ಸಾಮರ್ಥ್ಯವನ್ನು ಹೊಂದಿತ್ತು. ಈ ವರ್ಗದ ಕೆಳಗೆ ಇದ್ದ ನಗರ ಕೇಂದ್ರದ ಜನಸಂಖ್ಯೆಯು ಅಪಾರ ಸಂಖ್ಯೆಯ ಮೇಲ್ವರ್ಗೇತರ ಗುಂಪುಗಳಾಗಿದ್ದರು. ವರ್ತಕರು ಅಪಾರ ಸಂಖ್ಯೆಯ ಮೇಲ್ವರ್ಗೇತರ ಗುಂಪುಗಳಾಗಿದ್ದವು. ವರ್ತಕರು ಹಾಗೂ ಕಸುಬುದಾರರು ಉತ್ಪಾದನ ಮತ್ತು ಹಂಚಿಕೆಯ ವರ್ಗಗಳು, ಸೇವಾಸಿಬ್ಬಂದಿ ಹಾಗೂ ಕೆಳಗುಂಪುಗಳನ್ನು ಮೇಲ್ವರ್ಗೇತರರು ಎಂದು ಪರಿಗಣಿಸಲಾಗಿತ್ತು. ಶಿಲಾಶಾಸನ ಹಾಗೂ ಸಾಹಿತ್ಯಿಕ ಆಧಾರಗಳು ಹೊಯ್ಸಳರ ಕಾಲದ ಅನೇಕ ನಗರಕೇಂದ್ರಗಳು ಉನ್ನತವರ್ಗ ಹಾಗೂ ಮೇಲ್ವರ್ಗೇತರ ಸಾಮಾಜಿಕ ಗುಂಪುಗಳನ್ನು ಹೊಂದಿದ್ದವು.

ನಗರ ಸಮಾಜದ ಇನ್ನೊಂದು ಕುತೂಹಲಕಾರಿಯಾದ ಅಂಶವೇನೆಂದರೆ ನಗರ ಸಮಾಜವು ಕೆಲ ವ್ಯಕ್ತಿಗಳ ಗುಂಪುಗಳ ಸಂಯೋಜನೆಯಾಗಿರದೇ ಹಲವಾರು ಜಾತಿ, ಮತ, ವರ್ಗಗಳ ರಚನೆಯಾಗಿತ್ತು ಹಾಗೂ ಗುಂಪಿನ ಜೀವನ ಆ ಕಾಲದ ವೈಶಿಷ್ಟವಾಗಿತ್ತು. ವ್ಯಕ್ತಿಗಳು ಕೆಲವು ಗುಂಪುಗಳು ಅಥವಾ ಸಂಘ ಇಲ್ಲವೇ ಜಾತಿಗಳಿಗೆ ಸೇರದ ಹೊರತು ಸಮಾಜದಲ್ಲಿ ಯಾವುದೇ

ಸ್ಥಾನವನ್ನು ಹೊಂದಿರಲಿಲ್ಲ. ಸಮಕಾಲೀನ ನಗರ ಸನ್ನಿವೇಶದ ಸಾಮಾಜಿಕ, ಆರ್ಥಿಕ, ಜೀವನದಲ್ಲಿ ಗುಂಪು ಸಂಘಟನೆಯು ಅತ್ಯಂತ ಪ್ರಮುಖ ಅಂಶವಾಗಿತ್ತು. ದಾನದತ್ತಿಗಳನ್ನು ಕೊಡುವುದರ ಜೊತೆಗೆ ಗುಂಪು ಚಟುವಟಿಕೆಯು ಸಂತೆಗಳನ್ನು ನಡೆಸುವುದು, ಹಳ್ಳಿಗಳನ್ನು ಪಟ್ಟಣಗಳಾಗಿ ಪರಿವರ್ತಿಸುವುದು. ಹೊಸ ಪಟ್ಟಣಗಳನ್ನು ನಿರ್ಮಿಸುವುದು ಇತ್ಯಾದಿ ಚಟುವಟಿಕೆಗಳಿಂದ ಗುಂಪು ಚಟುವಟಿಕೆಯು ಗಮನ ಸೆಳೆದಿತ್ತು.

ಇಂತಹ ಚಟುವಟಿಕೆಗಳಲ್ಲಿ ಸ್ಥಳೀಯ ಅಂಗಗಳು ವೃತ್ತಿ ಸಂಘಟನೆಗಳು ಹಾಗೂ ಇತರ ಗುಂಪುಗಳು ಪಾಲ್ಗೊಳ್ಳುತ್ತಿದ್ದವು. ನಗರ ಚಟುವಟಿಕೆಗಳಲ್ಲಿ ವ್ಯಯಕ್ತಿಕ ಪಾಲ್ಗೊಳ್ಳುವಿಕೆಗೇನು ಕೊರತೆಯಿರಲಿಲ್ಲ ಎಂಬುದು ನಿಜ. ಆದರೆ ಅಂತಹ ಸಂದರ್ಭಗಳಲ್ಲಿ ವ್ಯಕ್ತಿಗಳು ಹೆಚ್ಚಾಗಿ ಆಡಳಿತ ವರ್ಗಕ್ಕೆ ಸೇರಿದವರಾಗಿರುತ್ತಿದ್ದರು. ಅಥವಾ ಶ್ರೀಮಂತ ವರ್ತಕರಾಗಿರುತ್ತಿದ್ದರು. ಅಥವಾ ಉನ್ನತ ವರ್ಗಕ್ಕೆ ಸೇರಿದ ಧಾರ್ಮಿಕ ವ್ಯಕ್ತಿಗಳಾಗಿದ್ದರು. ಅವರು ಸೇರಿದ್ದ ಒಂದು ಗುಂಪನ್ನು ಅವರು ಪ್ರತಿನಿಧಿಸುತ್ತಿದ್ದರು. ಇದರ ಜೊತೆಗೆ ಸಾಮಾಜಿಕ ಗುಂಪುಗಳು ತಮ್ಮ ಸಾಮಾಜಿಕ ಸ್ಥಾನಮಾನ ಗಳನ್ನು ಸುಧಾರಿಸಿಕೊಳ್ಳುವ ದೃಷ್ಟಿಯಿಂದ ಒಂದನ್ನೊಂದು ಪೈಪೋಟಿ ನಡೆಸುತ್ತಿದ್ದವು. ಇದು ನಗರದ ಲಕ್ಷಣವನ್ನು ಸೂಚಿಸುತ್ತಿತ್ತು. ನಗರೀಕರಣದ ಒತ್ತಡಕ್ಕೆ ಮಣಿದು ಈ ಬದಲಾವಣೆಗಳು ಮಾರ್ಪಟ್ಟವು.

### 6.4.14 ಪಟ್ಟಣದಲ್ಲಿನ ಜೀವನ

**ಎ. ಹಬ್ಬಗಳು**

ಪಟ್ಟಣಗಳಲ್ಲಿನ ಜೀವನವು ಹಲವು ವಿಧಗಳಲ್ಲಿ ಹಳ್ಳಿಗಿಂತ ಭಿನ್ನವಾಗಿತ್ತು. ಹಬ್ಬಗಳು, ಆಟಗಳು ಮನೋರಂಜನೆಗಳು ಪಟ್ಟಣದ ಜನರ ಬೇಸರ, ಆಲಸ್ಯ ಹಾಗೂ ಒಂದೇ ವಿಧವಾದ ದುಡಿಮೆಯಿಂದ ದೂರವಾಗಿದ್ದವು. ಹಬ್ಬಗಳು ಸ್ವರೂಪದಲ್ಲಿ ಧಾರ್ಮಿಕವಾಗಿದ್ದರು ರಾಜಕೀಯ ಹಾಗೂ ಸಾಮಾಜಿಕ ಪ್ರಾಮುಖ್ಯತೆಯನ್ನು ಹೊಂದಿದ್ದವು. ಇವುಗಳು ಜನಜೀವನದ ಮೇಲೆ ಅಗಾಧವಾದ ಪರಿಣಾಮವನ್ನು ಬೀರಿದ್ದವು. ಸಮಕಾಲೀನ ಮೂಲಗಳು ವಿಶೇಷವಾಗಿ ಹಾಗೂ ನಗರಗಳಲ್ಲಿ ಜರುಗುತ್ತಿದ್ದ ಹಬ್ಬಗಳ ಬಗ್ಗೆ ಒಂದು ಸಂಪೂರ್ಣ ಚಿತ್ರಣವನ್ನು ನೀಡುತ್ತವೆ.

ಹೊಯ್ಸಳರ ಕಾಲದಲ್ಲಿ ಆಚರಿಸಲಾಗುತ್ತಿದ್ದ ಹಬ್ಬಗಳಲ್ಲಿ ಶಿವರಾತ್ರಿ, ದೀಪಾವಳಿ, ಸಂಕ್ರಮಣ, ಕಾರ್ತಿಕ ಹಬ್ಬಗಳು ಪ್ರಮುಖವಾಗಿದ್ದವು. ಸಾಮ್ರಾಜ್ಯದಲ್ಲಿ ಜನತೆ ಕುಸ್ತಿ, ಜೂಜಾಟ (ಪಗಡೆ ದಾಳ) ಸಂಗೀತ ಮತ್ತು ನೃತ್ಯ ಬೇಟೆಯಾಡುವುದು, ಈಜುವುದು, ನಾಟಕವನ್ನು ಮನೋರಂಜನೆಗಾಗಿ ಆಡುತ್ತಿದ್ದರು ಮತ್ತು ರಂಗಭೂಮಿ ನಾಟಕಗಳನ್ನು ಆಡುತ್ತಿದ್ದರು. ಇವರ ಶಾಸನಗಳ ಪ್ರಕಾರ ಆಗಿನ ಕಾಲದ ದೇವಸ್ಥಾನಗಳಲ್ಲಿ ಹಾಡುಗಾರರು, ನೃತ್ಯ ಕಲೆಗಾರ್ತಿಯರು, ನೃತ್ಯಗಾರರು ಇದ್ದರು. ಕಲೆಗೆ ದೊರೆಗಳು ಮತ್ತು ಗಣ್ಯವ್ಯಕ್ತಿಗಳು ಪ್ರೋತ್ಸಾಹ ನೀಡುತ್ತಿದ್ದರು. ಮದ್ದಳೆ, ತಾಳ ಮುಂತಾದ ರೀತಿಯ ಸಂಗೀತ ವಾದ್ಯಗಳ ವಿಷಯ ಸಮಕಾಲೀನ ಸಾಹಿತ್ಯದಲ್ಲಿ ಕಂಡುಬಂದಿದೆ. ಸಂಗೀತವನ್ನು ವಿಶೇಷಚವಾಗಿ ಅಭ್ಯಾಸ ಮಾಡಿ ಮೆಚ್ಚಿಕೊಳ್ಳುತ್ತಿದ್ದರೆಂದು ತೋರುತ್ತದೆ. ರಾಣಿ ಶಾಂತಲಾದೇವಿ ಸಂಗೀತ ಮತ್ತು ನೃತ್ಯಗಳಲ್ಲಿ ಪ್ರವೀಣೆಯಾಗಿದ್ದಳು.

ಈ ರೀತಿಯಾಗಿ ಹಬ್ಬಗಳು ಲಲಿತಕಲೆಗಳಲ್ಲಿನ ಆಟಗಳು ಹಾಗೂ ಇತರ ಪ್ರದರ್ಶನಗಳು ಜನಜೀವನದ ಅವಿಭಾಜ್ಯ ಅಂಗವಾಗಿದ್ದು ಅತ್ಯಂತ ಮಹತ್ವವಾದ ಸಾಮಾಜಿಕ ಪ್ರಾಮುಖ್ಯತೆಯನ್ನು ಹೊಂದಿದ್ದವು. ಪಟ್ಟಣಗಳಲ್ಲಿನ ಜೀವನವು ಹಳ್ಳಿಯ ಜೀವನಕ್ಕಿಂತ ಭಿನ್ನವಾಗಿತ್ತು ಎಂದು ಹೇಳಬಹುದು.

## ಅಧ್ಯಾಯ ಮೂರರಿಂದ ಅಧ್ಯಾಯ ಆರರವರೆಗಿನ ಅಡಿಟಿಪ್ಪಣಿಗಳು

1. ಲೂಯಿಸ್ ಮುನ್ ಪೋರ್ಡ್ – ಚರಿತ್ರೆಯಲ್ಲಿ ಇತಿಹಾಸ ಲಂಡನ್ 1961 ಪು. 4
2. ಲೂಯಿಸ್ ಮುನ್ ಪೋರ್ಡ್ – ಅದೇ ಲಂಡನ್ 1961 ಪು. 5
3. ಹಾಸರ್, ಪಿ.ಎಂ – ಅರ್ಬನೈಜೇಷನ್ ಆನ್ ಓವರ್ ವ್ಯೂ ಮತ್ತು ರೋನಾಲ್ಡ ಜೋನ್ಸ್, ಎಸ್ಪೇಸ್ ಆನ್ ವರ್ಲ್ಡ್ ಅರ್ಬನೇಜೇಷನ್ ಲಂಡನ್ 1975 ಪು.49
4. ಥಾಕೂರ್ ವಿ.ಕೆ–ಅರ್ಬನೈಜೇಷನ್ ಇನ್ ಏಸ್ಸಿಯಂಟ್ ಇಂಡಿಯಾ ದೆಹಲಿ 1981 ಪು.30
5. ಹೆನ್ರಿಪಿರಿನ್ – ಮಿಡಿವಲ್ ಸಿಟೀಸ್ 1925 ಪು.10
6. ಗಿಡನ್ ಸ್ಟೆಬರ್ಗ್ – ದ ಪ್ರಿ ಇಂಡಸ್ಟ್ರಿಯಲ್ ಸಿಟಿ, ನ್ಯೂಯಾರ್ಕ್ 1969 ಪು.32
7. ಐಡನ್ ಸೌದಾಲ್ ಮತ್ತು ಪಾಕ್ಸ್ ಆರ್.ಜಿ.–ಅರ್ಬನ್ ಆಂದ್ರೋಪಾಲಜಿ ನ್ಯೂಯಾರ್ಕ್ 1973 ಪು.12
8. ಸ್ಟ್ಯಾನ್ಲಿ ಕೆ. ಶುಲ್ಸ್ – ಆನ್ ಅಪ್ರೋಚ್ ಟು ಥಿಯರಿ ಅಪ್ ಅರ್ಬನೈಜೇಷನ್ ಸ್ಟಡೀಸ್ ಇನ್ ಅರ್ಬನ್ ಹಿಸ್ಟರಿ ಅಮೃತಸರ ಪು.80
9. ಮಿಶ್ರ ಎಸ್.ಸಿ – ಅರ್ಬನ್ ಹಿಸ್ಟರಿ ಇನ್ ಇಂಡಿಯಾ ಪಾಸಿ ಬಲಿಟೀಸ್ ಅಂಡ್ ಪರ್ ಸ್ಪೆಕ್ಟೀವ್ಸ್ ಆಕೇಶನಲ್ ಪೇಪರ್ ಸೀರಿಸ್ (U, H, A, i)
10. ಮಿಶ್ರ ಎಸ್.ಸಿ. – ಅದೇ 1982 ಪು.87
11. ಮಿಶ್ರ ಎಸ್.ಸಿ. – ಅದೇ 1982 ಪು.88
12. ದತ್.ಬಿ.ಬಿ. – ಟೌನ್ ಪ್ಲಾನಿಂಗ್ ಇನ್ ಏಸ್ಸಿಯಂಟ್ ಇಂಡಿಯಾ ಚಿತ್ತಗಾಂಗ್ 1924 ಪು.50
13. ಸ್ಟುವರ್ಟ್ ಪಿಗಟ್ – ಸಮ್ ಏಸ್ಸಿಯಂಟ್ ಸಿಟೀಸ್ ಆಫ್ ಇಂಡಿಯಾ ಆಕ್ಸ್‌ಫರ್ಡ್ 1928 ಪು.58
14. ಪಾರಸ್ಟೆ. ಇ.ಡಬ್ಲ್ಯು – ಸಿಟೀಸ್ ಆಫ್ ಇಂಡಿಯಾ ನ್ಯೂಡೆಲ್ಲಿ 1977 ಪು.43
15. ಪೂರಿ. ಬಿ.ಎನ್ – ಸಿಟೀಸ್ ಆಫ್ ಎಸ್ಸಿಯಂಟ್ ಇಂಡಿಯಾ ಮೀರತ್ 1966 ಪು.36
16. ಅಮಿತಾರಾಯ್ – ವಿಲೇಜ್ ಟೌನ್ ಅಂಡ್ ಸೆಕ್ಯೂಲರ್ ಬಿಲ್ಡಿಂಗ್ ಇನ್ ಏಸ್ಸಿಯಂಟ್ ಇಂಡಿಯಾ ಕ್ರಿ.ಪೂ. ಸುಮಾರು 150 ಕ್ರಿ.ಶ. ಸುಮಾರು 350 ಕಲ್ಕತ್ತ ಪು.88
17. ಘರಿಯೇ ಜಿ. – ಎನ್ ಸಿಟೀಸ್ ಅಂಡ್ ಸಿವಿಲೈಜೇಷನ್ ಬಾಂಬೆ 1962 ಪು.60

18. ಘೋಷ್ ಎ. – ದಿ ಸಿಟಿ ಇನ್ ಅರ್ಲಿ ಹಿಸ್ಟರಿಕಲ್ ಇಂಡಿಯಾ ಶಿಮ್ಲಾ 1963 ಪು.80

19. ಥಾಕೂರ್ ವಿ.ಕೆ. – ಅದೇ ದೆಹಲಿ 1981 ಪು.32

20. ಅಪ್ಪಾದೊರೈ ಎ. – ಏಕನಾಮಿಕ್ ಕಂಡೀಷನ್ ಇನ್ ಏಸ್ಸಿಯಂಟ್ ಇಂಡಿಯಾ (ಕ್ರಿ.ಶ. 1000–1300) ಮದ್ರಾಸ್ 1936 ಮತ್ತು ದೀಪಕ್ ರಂಜನ್ ದಾಸ್ ದ ಏಕನಾಮಿಕ್ ಹಿಸ್ಟರಿ ಆಫ್ ಡೆಕ್ಕನ್ ಪು.100

21. ಬರ್ಟನ್ ಸ್ಟೈನ್ – ದ ಸ್ಟೇಟ್ ಅಂಡ್ ದಿ ಅಗ್ರೇರಿಯನ್ ಆರ್ಡ್‌ರ್ ಇನ್ ಸೌತ್ ಇಂಡಿಯಾ ದೆಹಲಿ 1976 ಪು.33

22. ಟೆಲ್‌ಬಾಯ್ ವ್ಹೀಲರ್ – ಮದ್ರಾಸ್ ಇನ್ ದ ಓಲ್ಡ್ ಟೈಮ್ಸ್ ಮದ್ರಾಸ್ 1891 ಪು.40

23. ಶ್ರೀನಿವಾಸಚಾರ್ ಸಿ.ಆರ್. – ಕಂಚೀಪುರಂ ಥ್ರೂ ದಿ ಏಜಸ್ ದೆಹಲಿ 1979 ಪು.83

24. ತಿರುಮಲೈ ಆರ್. – ಸ್ಟಡೀಸ್ ಇನ್ ಏಸ್ಸಿಯಂಟ್ ಟೌನ್‌ಷಿಪ್ ಆಫ್ ಪುಡುಕೊಟ್ಟೈ, ಮದ್ರಾಸ್ 1981 ಪು.51

25. ದತ್ತ್. ಬಿ.ಬಿ – ಟೌನ್ ಪ್ಲಾನಿಂಗ್ ಇನ್ ಏಸ್ಸಿಯಂಟ್ ಇಂಡಿಯಾ ಪು.285

26. ನಕ್ವಿ. ಹೆಚ್.ಕೆ. – ಅರ್ಬನ್ ಗ್ರೋತ್ ಇನ್ ದ ಪಂಜಾಬ್ ಪು.61

27. ಸಿಂಗ್ ಕೆ.ಎನ್. ದ ಟೆಂಟೋರಿಯಲ್ ಟೇಸಿಸ್ ಆಫ್ ಮಿಡೀವಲ್ ಟೌನ್ ಅಂಡ್ ವಿಲೇಜ್ ಇನ್ ಈಸ್ಟನ್ ಉತ್ತರ ಪ್ರದೇಶ್ ಸಂ. 58 1968 ಪು.203

28. ಡಂಕನ್ – ಕಮ್ಯೂನಿಟಿ ಸ್ಟೇಜ್ ಅಂಡ್ ದ ರೂರಲ್ ಅರ್ಬನ್ ಕಂಟಿನಮ್ ಪು.35

29. ಡೇವಿಡ್ ಪ್ರಕಾಕ್ – ಸೋಶಿಯಾಲಾಜೀಸ್ ಅರ್ಬನ್ ಅಂಡ್ ರೂರಲ್ ಪು.18

30. ಮಿಶ್ರ ಎಸ್.ಸಿ. – ಅದೇ ಪು.90

31. ಮಿಶ್ರ ಎಸ್.ಸಿ. –ಸಮ್ ಆ್ಯಸ್ಪೆಕ್ಟ್ಸ್ ಆಫ್ ದಿ ಸೆಲ್ಸ್ ಅಂಡ್ ಮಿನಿ ಸ್ಟರಿಂಗ್ ಇನ್‌ಸ್ಟಿಟ್ಯೂಷನ್ ಮಿಡೀವಲ್ ಇಂಡಿಯನ್ ಟೌನ್ ಪು.83

32. ಮಿಶ್ರ ಎಸ್.ಸಿ. – ಅದೇ 84

33. ಆಚಾರ್ಯ ವಿ.ಕೆ – ಮಾನಸಾರ. ಸಂ.6 ಪು. 102

34. ರಾವ್ ಎಮ್.ಎ 0 ಥಿಯೋರೆಟಿಕಲ್ ಪ್ರಾಬ್ಲಮ್ ಇನ್ ಡೆಕ್ಕನ್ ಅರ್ಬನ್ ಸೋಶಿಯಾಲಜಿ ಪು.16

35. ಜೈನ್ ಕೆ.ಸಿ. – ಏನ್ಸಿಯಂಟ್ ಸಿಟೀಸ್ ಅಂಡ್ ಟೌನ್ಸ್ ಆಫ್ ರಾಜಾಸ್ಥಾನ್ ದೆಹಲಿ 1972 ಪು. 78 79

36. ಮದ್ವಾಚಾರ್ಯ – ಪರಿಸರ ಮಾಧವ ಕಲ್ಕತ್ತ 1890 ಪು. 265

37. ವಿಜ್ಞಾನೇಶ್ವರ – ಮಿತಾಕ್ಷರ ಸಂಹಿತೆ ಪು.167

38. ವಿಜ್ಞಾನೇಶ್ವರ – ಅದೇ ಪು.169

39. ಆಚಾರ್ಯ ಪಿ.ಕೆ. – ಮನಸಾರ ಸಂ. 6 ಪು. 102 103

40. ಅಪ್ಪಾದೊರೈ ಎ – ಅದೇ ಪು.102

41. ಘರಿಯೇ ಜಿ.ಎಸ್. – ಸಿಟೀಸ್ ಅಂಡ್ ಸಿವಿಲೈಜೇಷನ್ ಬಾಂಬೆ 1962 ಪು.4

42. ಅಪ್ಪಾದೊರೈ ಎ – ಅದೇ ಪು.56

43. ಥಾಕೂರ್ ವಿ.ಕೆ. – ಅದೇ ಪು.46

44. ಥಾಕೂರ್ ವಿ.ಕೆ – ಅದೇ ಪು.48

45. ಸ್ಟೋಬರ್ಗ್ ಫ್ರೀ – ಇಚಿಡಸ್ಟ್ರಿಯಲ್ ಸಿಟಿ ಪು.31

46. ಥಾಕೂರ್ ವಿ.ಕೆ – ಅದೇ ಪು.47

47. ಥಾಕೂರ್ ವಿ.ಕೆ – ಅದೇ ಪು.48

48. ECV, BI 75

49. ಮೇಜರ್ ಇಂಡಿಯಾ – ಇನ್ ದ ಪೀಟೀನ್ ಸೆಂಚುರಿ ಪು.23

50. ಸ್ಟೋಬರ್ಗ್ – ಅದೇ ಪು.31

51. ಸ್ಟೋಬರ್ಗ್ – ಅದೇ ಪು.34

52. ಥಾಕೂರ್ ವಿ.ಕೆ – ಪು.50

53. ನಕ್ವಿ ಹೆಚ್.ಕೆ. – ಅರ್ಬನೈಜೇಷನ್ ಅಂಡ್ ಅರ್ಬನ್ ಅಂಡರ್ ದ ಗ್ರೇಟ್ ಮೋಘಲ್ ಪು.161

54. EC, Vol XI Cd 2

55. ಮಹಾಲಿಂಗಂ ಟಿ.ವಿ. – ಸೌತ್ ಇಂಡಿಯನ್ ಪಾಲಿಟಿ ಮದ್ರಾಸ್ 1967 ಪು 372

56. ಚಂಪಕ ಲಕ್ಷ್ಮಿ – ಅರ್ಬನ್ ಪ್ರೋಸಸ್ ಇನ್ ಅರ್ಲಿಮಿಡೀವಲ್ ತಮಿಳ್‌ನಾಡು ಆಕೇಶನಲ್ ಪೇಪರ್ ಸೀರೀಸ್ ವಿ.ಹೆಚ್.ವಿ. 1982 ಪುಟ 10
57. ನಾರಾಯಣಗುಪ್ತ – ಟೌನ್ಸ್ ಅಂಡ್ ಟ್ಯಾಂಕ್ ಟೆಂಪಲ್ಸ್ ಸಮ್ ಆ್ಯಸ್ಪೆಕ್ಟ್ಸ್ ಆಫ್ ಅರ್ಬನಿಸಂ ಇನ್ ಸೌತ್ ಇಂಡಿಯಾ ಫ್ಯಿಯ್‌ಟೀಂತ್ ಅಂಡ್ ನೈನ್‌ಟೀಂತ್ ಸೆಂಚುರೀಸ್ 1983 ಪು.30
58. ನೀಲಕಂಠಶಾಸ್ತ್ರಿ ಕೆ.ಎ – ದಕ್ಷಿಣ ಭಾರತದ ಇತಿಹಾಸ ಪು 35–36
59. ಸಾಲೆತೊರೆ. ಬಿ.ಎ – ಕರ್ನಾಟಕಸ್ ಟ್ರಾಸ್ ಓಶಿಯಾನಿಕ್ ಕಾಂಟ್ರ್ಯಾಕ್ಸ್ ಧಾರವಾಡ 1956 ಪು.18
60. ಫಾಕ್ಸ್ ಆರ್.ಜಿ. – ಅರ್ಬನ್ ಆಂಥ್ರೋಪಾಲಜಿ ಪು.22–23
61. EC NII (R) PC x VI
62. EC NII VI 61
63. EC IV (R) Y.A1
64. M.A.R. 1939 ಪು.101-102
65. ECV BI 52
66. ರೈಸ್. ಬಿ.ಎಲ್ – ಮೈಸೂರು ಅಂಡ್ ಕೂರ್ಗ್ ಫ್ರಮ್ ಇನ್‌ಸ್ಕ್ರಿಪ್ಷನ್ ಲಂಡನ್ 1909 ಪು.155
67. E C V B U 233, 78.4
68. ರವೀಂದ್ರಕುಮಾರ – ಚೇಂಜಿಂಗ್ ಸ್ಟ್ರಕ್ಚರ್ ಆಫ್ ಅರ್ಬನ್ ಸೋಸೈಟಿ ಇನ್ ಕಾಲೋನಿಯಲ್ ಇಂಡಿಯಾ ದಿ ಇಂಡಿಯನ್ ಹಿಸ್ಟಾರಿಕಲ್ ರಿವ್ಯೂ ಸಂ 5 1979 ಪು 200
69. ಕಾಶಿ, ಎನ್.ಸಿಂಗ್ – ದ ಟೆರಿಟೋರಿಯಲ್ ಬೇಸಿಸ್ ಆಫ್ ಮೀಡೀವಲ್ ಟೌನಂ ಅಂಡ್ ವಿಲೇಜ್ ಸೆಟ್ಲ್‌ಮೆಂಟ್ ಇನ್ ಇಸ್ಟನ್ ಉತ್ತರ ಪ್ರದೇಶ್ ಸಂ. 58 1968 ಪು.203
70. E.C Ch VP 171
71. E.C VBI 75
72. E.C. Ch III P.105
73. SIIVII -298-299 ಶೆಟ್ಟರ್ ಎಸ್ – ಅರಸೀಕೆರೆ ಅಂಡರ್ ದ ಹೊಯ್ಸಳಾಸ್ ಜರ್ನಲ್ ಆಫ್ ಕರ್ನಾಟಕ ಯೂನಿವರ್ಸಿಟಿ ಸಂ. 7 1963

74. ಮೇಜರ್ – ಇಚಿಡಿಯಾ ಇನ್ ದ ಪಿಟೀನ್ ಸೆಂಚುರಿ ಪು. 20–22

75. ಶ್ರೀನಿವಾಸ್ ಎಂ.ವಿ. – ದಿ ಎವಲೂಶನ್ ಆಫ್ ದಿ ಆಫೀಸ್ ಆಫ್ ದ ಪಟ್ಟಣಸ್ವಾಮಿ ಇನ್ ದಿ ಮಿಡೀವಲ್ ಕರ್ನಾಟಕ ಧಾರವಾಡ, ಶಾಸನ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧ

76. E.C. Vol X V B L 332 ಪು.86

77. ದೀಕ್ಷಿತ್ ಜಿ.ಎಸ್. – ಮಧ್ಯಕಾಲೀನ ಕರ್ನಾಟಕದಲ್ಲಿ ಸ್ಥಳೀಯ ಸರ್ಕಾರ ಪು.30

78. ಓಲ್ಡ್ ಎ.ಕೆ. ಸಂ. ಹೊಸಹೊಳಲು ಕೆ.ಆರ್.ಪೇಟೆ ತಾ. ನಂ. 3 ಪು.118

79. ಎ.ಕ.ಸಂ. VII ಹಟ್ಟಣ ನಾಗಮಂಗಲ ತಾ. ಪು.118

80. ಎ.ಕ.ಸಂ. 211 SB. INS. No.457 ಪು 278

81. ಎ.ಕ.ಸಂ. XI ದಾವಣಗೆರೆ ತಾ. ಪು 173

82. ಎ.ಕ.ಸಂ. IV ಮದ್ದೂರು ಗ್ರಾಮ, ಯಳಂದೂರು ತಾ. ಚಾಮರಾಜನಗರ ಜಿಲ್ಲೆ ಪು.744

83. ಎ.ಕ.ಸಂ. III ಉಪ್ಪಿನ ಹಳ್ಳಿ ನಂಜನಗೂಡು ತಾ.ಪು. 406

84. ಎ.ಕ.ಸಂ. IX ಪು 13

85. ಎ.ಕ.ಸಂ. XI ಪು 173

86. ಎ.ಕ.ಸಂ. ಪು. 168

87. ಎ.ಕ.ಸಂ. IX ಪು 31

88. ಎ.ಕ.ಸಂ. IX ಪು 13

89. ಎ.ಕ.ಸಂ. V ಪು 472

90. ಎ.ಕ.ಸಂ. VII ಪು 360

91. ಎ.ಕ.ಸಂ. IV ಪು 744

92. ಎ.ಕ.ಸಂ. XII ಪು 69

93. ಎ.ಕ.ಸಂ. I ಪು 34

94. ಎ.ಕ.ಸಂ. II ಪು 278

95. ಎ.ಕ.ಸಂ. VII ಪು 118

96. ಎ.ಕ.ಸಂ. VI ಪು 59

97. ಎ.ಕ.ಸಂ. XII ಪು 23

98. ಎ.ಕ.ಸಂ. XII ಪು 48

99. ಎ.ಕ.ಸಂ. V ಪು 325

100. ಎ.ಕ.ಸಂ. V ಪು 100

101. ಬೋಸ್ ಎ.ಎನ್ – ಅರ್ಲಿ ಇಂಡಸ್ಟ್ರಿಯಲ್ ಆರ್ಗನೈಜೇಷನ್ ಇನ್ ನಾರ್ತ್ ಇಂಡಿಯಾ ಪು.167

102. ಬೋಸ್ ಎ.ಎನ್ – ಅದೇ ಪು 169

103. ಅಪ್ಪಾದೊರೈ ಎ. – ಏಕನಾಮಿಕ್ ಕಂಡೀಷನ್ ಪು.357

104. ಬೋಸ್ ಎ,ಎನ್ – ಅದೇ ಪು 172

105. ಎ.ಆರ್.ಎಸ್.ಐ.ಇ. 1918 ಪ್ಯಾರಾ 84 85 E.I. X X ಪು 90

106. ಘಟಪಣನದಿ ಎಸ್.ಜಿ. – ಗಿಲ್ಡ್ ಅಫ್ ಆರ್ಟಿಸಾನ್ ಇನ್ ಮಿಡೀವಲ್ ಕರ್ನಾಟಕ ಸಂ.6 ಪು.195

107. ಥೇಂಬರ್ – ಅದೇ ಪು.80

108. ARSIE 1918 Copper Plate 18

109. E C I No. 4 E C V A K – 13

110. E C X, K I, 170

111. E C VII, SK, 94, 1094 A.D

112. ಚಂದ್ರಶೇಖರ ಶಾಸ್ತ್ರಿ – ಹೊಯ್ಸಳ ಕಾಲದ ಆರ್ಥಿಕ ಇತಿಹಾಸ ಪು.223

113. E C V BI – 75

114. SII VII - 185

115. ಥಾಕೂರ್ ವಿ.ಕೆ – ಅದೇ ಪು.140

116. ಸ್ಟೋಬರ್ಗ್ – ಅದೇ ಪು.11

# ಅಧ್ಯಾಯ 7

## 7.1 ಸೋಮನಾಥಪುರದ ಐತಿಹಾಸಿಕ ಹಿನ್ನಲೆ

ತಿರುಮಕೂಡಲು ನರಸೀಪುರ ತಾಲ್ಲೋಕಿನಲ್ಲಿರುವ ಸೋಮನಾಥಪುರ ಅಂತರ ರಾಷ್ಟ್ರೀಯ ಪ್ರವಾಸೋದ್ಯಮ ದೃಷ್ಟಿಯಿಂದ ಚಾರಿತ್ರಿಕ ಸ್ಮಾರಕಗಳುಳ್ಳ ಮಹತ್ವದ ಸ್ಥಳವಾಗಿದೆ. ಪ್ರದೇಶ ದೃಷ್ಟಿಯಿಮದ ಈ ತಾಲ್ಲೋಕಿಗೆ ಕಳಶಪ್ರಾಯವೆಂಬ ಸ್ಥಳವೆಂಬುದರಲ್ಲಿ ಎರಡು ಮಾತಿಲ್ಲ. ದೇಶ ವಿದೇಶಗಳಿಂದ ಪ್ರವಾಸಿಗರನ್ನು ಆಕರ್ಷಿಸುತ್ತಿರುವ ಸ್ಥಳ ಸೋಮನಾಥಪುರವಾಗಿದೆ. ಈ ತಾಲ್ಲೋಕಿನಲ್ಲಿ ಹರಿಯುವ ಕಾವೇರಿ ನದಿ ಎಷ್ಟು ಪ್ರಾಮುಖ್ಯತೆ ಪಡೆದಿದೆಯೋ ಅಷ್ಟೆ ಪ್ರಾಮುಖ್ಯತೆಯನ್ನು ಈ ಚಾರಿತ್ರಿಕ ಸ್ಥಳ ಪಡೆದಿದೆ. ಹದಿಮೂರನೇ ಶತಮಾನದ ಅಗ್ರಹಾರವನ್ನು ಒಂದು ರೀತಿಯಲ್ಲಿ ದೇವಾಲಯಗಳ ನಗರವೆಂದು ಕರೆಯಬಹುದು.[1]

ಸೋಮನಾಥಪುರ ನಲವತ್ತು ಕಿ.ಮೀ ದೂರದಲ್ಲಿ ಕಾವೇರಿ ನದಿಯ ಎಡದಂಡೆಯ ಮೇಲಿದೆ. ಇದು ತಿರುಮಕೂಡಲಿಗೆ ಹತ್ತು ಕಿ.ಮೀ ದೂರದಲ್ಲಿದೆ. ಇಲ್ಲಿನ ಜನಸಂಖ್ಯೆ 3,197 ಇದೆ. ಹದಿಮೂರನೇ ಶತಮಾನದಲ್ಲಿ ಇದೊಂದು ಅಗ್ರಹಾರವಾಗಿತ್ತು. ಈ ಅಗ್ರಹಾರಕ್ಕೆ ಸರ್ವಸಮಸ್ಯ ಮಹಾಗ್ರಹಾರ. ವಿದ್ಯಾನಿಧಿ ಪ್ರಸನ್ನ ಸೋಮನಾಥಪುರ ಅಥವಾ ಚತುರ್ವೇಧಿ ಮಂಗಲ ವಿದ್ಯಾನಿಧಿ ಪ್ರಸನ್ನ ಸೋಮನಾಥಪುರ ಎಂಬ ಹೆಸರಿದ್ದಿತು. ಈ ಊರಿನಲ್ಲಿರುವ ಒಂಭತ್ತು ಶಾಸನಗಳಲ್ಲದೆ ಹರಿಹರದಲ್ಲಿರುವ ಒಂದು ಶಾಸನವು ಹೆಬ್ಬಕವಾಡಿಯಲ್ಲಿರುವ ಮತ್ತೊಂದು ಶಾಸನವು ಅಗ್ರಹಾರದ ಬಗೆಗೆ ಮತ್ತು ಇಲ್ಲಿನ ದೇವಾಲಯಗಳ ಬಗ್ಗೆ ಸಾಕಷ್ಟು ವಿವರಗಳನ್ನು ಒದಗಿಸುತ್ತದೆ. ಕಲೆ ಮತ್ತು ವಿದ್ಯಾಭ್ಯಾಸಕ್ಕೆ ಈ ಅಗ್ರಹಾರ ಆಗರವಾಗಿತ್ತೆಂದು ಶಾಸನಗಳು ವರ್ಣಿಸುತ್ತವೆ. ಹೊಯ್ಸಳ ಚಕ್ರವರ್ತಿ ಮೂರನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಆತನ ಸಂಧಿವಿಗ್ರಹಿಯು ಮಂತ್ರಿಯು ಮತ್ತು ದಂಡನಾಯಕನು ಆಗಿದ್ದ ಸೋಮನಾಥ ಈ ಅಗ್ರಹಾರವನ್ನು ಕ್ರಿ.ಶ. 1268 ರಲ್ಲಿ ನಿರ್ಮಿಸಿ ತನ್ನ ಹೆಸರಿನಲ್ಲಿ ಸೋಮನಾಥಪುರವೆಂದು ಕರೆದು ಇಲ್ಲಿ ಒಂದು ಕೇಶವ (ವಿಷ್ಣು) ದೇವಾಲಯವನ್ನು, ಒಂದು ಪಂಚಲಿಂಗ (ಶಿವಾಲಯ) ದೇವಾಲಯವನ್ನು ಕಟ್ಟಿಸಿದನು. ಈ ದೇವಾಲಯಗಳಲ್ಲದೆ ಕಾವೇರಿ ನದಿಯ ದಡಕ್ಕೆ ಹೊಂದಿಕೊಂಡಂತೆ ಲಕ್ಷ್ಮಿನರಸಿಂಹ ಯೋಗನಾರಾಯಣ ಪುರಹರ ಮತ್ತು (ತ್ರಿಪುರಾಂತಕ) ಮತ್ತು ನಾರಸಿಂಹೇಶ್ವರ ದೇವಾಲಯಗಳನ್ನು ಪಂಚಲಿಂಗ ದೇವಾಲಯದ ಬಳಿ ಸೋಮಲೇಶ್ವರವೆಂಬ ಮತ್ತೊಂದು ಶಿವದೇವಾಲಯವನ್ನು ಈತನು ಕಟ್ಟಿಸಿದುದಾಗಿ ತಿಳಿದು

ಬರುತ್ತದೆ. ಸುಮಾರು 3.8 ಮೀ ಉದ್ದ 2 ಕಿ.ಮೀ ಅಗಲವಿರುವ ಈ ಅಗ್ರಹಾರಕ್ಕೆ ಕೋಟೆಯನ್ನು ಕಟ್ಟಿಸಿದನು. ಈಗ ಸೋಮನಾಥಪುರದಲ್ಲಿ ಮೂಲ ಅಗ್ರಹಾರದ ಬೀದಿಗಳಾಗಲಿ ಕೋಟೆಯ ಗೋಡೆಗಳಾಗಲಿ ಉಳಿದು ಬಂದಿಲ್ಲ. ಅಲ್ಲಲ್ಲಿ ಕೋಟೆಯ ಗೋಡೆಯ ಪಾಳನ್ನು ಮಾತ್ರ ಗುರುತಿಸಬಹುದು. ಕೇಶವ ದೇವಾಲಯದ ಮುಂದೆ ಅದರ ಈಶಾನ್ಯಕ್ಕೆ ಮಾತ್ರ ಈಗಿನ ಹಳ್ಳಿ ಸೀಮಿತಗೊಂಡಿದೆ. ಹಿಂದಿನ ಕಾಲದ ಕಟ್ಟಡಗಳಲ್ಲಿ ಕೇಶವ ದೇವಾಲಯವೊಂದನ್ನು ಬಿಟ್ಟು ಉಳಿದವುಗಳನ್ನು ಕೇಳುವವರಿಲ್ಲದಂತಾಗಿದೆ. ಪಂಚಲಿಂಗೇಶ್ವರ ಮತ್ತು ಲಕ್ಷ್ಮಿನರಸಿಂಹ ದೇವಾಲಯಗಳು ಹೆಚ್ಚು ಶಿಥಿಲಾವಸ್ಥೆಯಲ್ಲಿ ಉಳಿದು ಬಂದಿದ್ದರೆ ಸೋಮಲೇಶ್ವರ, ನರಸಿಂಹೇಶ್ವರ ಮತ್ತು ಯೋಗ ನಾರಾಯಣ ದೇವಾಲಯಗಳು ಅವುಗಳಿದ್ದ ಕುರುಹು ಉಳಿಯದಂತೆ ನಾಶವಾಗಿದೆ.[2]

ಈಗ ಲಕ್ಷ್ಮಿ ನರಸಿಂಹ ದೇವಾಲಯದ ಬಳಿ ಬಿದ್ದಿರುವ ಯೋಗ ನಾರಾಯಣಮೂರ್ತಿ ಬಹುಶಃ ಯೋಗ ನಾರಾಯಣ ದೇವಾಲಯಕ್ಕೆ ಸೇರಿದ್ದುದಾಗಿರಬೇಕು. ಲಕ್ಷ್ಮಿ ನರಸಿಂಹ ದೇವಾಲಯ ಬಳಪದ ಕಲ್ಲಿನಲ್ಲಿ ನಿರ್ಮಾಣವಾಗಿದೆ. ಇದರಲ್ಲಿ ಹೆಚ್ಚು ಅಲಂಕರಣಗಳಿಲ್ಲ. ಒಂದು ಗರ್ಭಗೃಹ ಒಂದು ಸುಕನಾಸಿ. ಒಂದು ನವರಂಗ ಮತ್ತು ಅದರ ಮುಂದೆ ಒಂದು ಕಣದ ಮುಖ ಮಂಟಪವಿರುವ ದೇವಾಲಯವಾಗಿದೆ.

ಕೇಶವ ದೇವಾಲಯವು ವಿಜಯನಗರದ ಕೊನೆಯ ಕಾಲದ ವೇಳೆಗೆ ಶಿಥಿಲವಾಗಿದ್ದಿರಬೇಕು. ಬಹುಶಃ ಹದಿನಾರನೆ ಶತಮಾನದಲ್ಲಿ ಪ್ರಕಾರಕ್ಕೆ ಸೇರಿದ ಉತ್ತರ ಪಶ್ಚಿಮ ಭಾಗಗಳ ಸುತ್ತಾಲಯದ ಭಾಗಗಳು ಬಿದ್ದು ಹೋಗಿದ್ದು ಅವನ್ನು ಪುನಃ ನಿರ್ಮಿಸಲಾಗಿದೆ. ಮೊದಲಿದ್ದ ಬಳಪದ ಕಲ್ಲಿನ ಗುಂಡು ಕಂಬಗಳಿಗೆ ಬದಲಾಗಿ ಒರಟಾದ ಕಗ್ಗಲಿನ ಚಾಕ ಕಂಬಗಳನ್ನು ಚಾವಣಿಗೆ ಒರಟು ತೊಲೆಗಳನ್ನು ಬಳಸಿದೆ. ಬಹುಶಃ ಇದೇ ಕಾಲದಲ್ಲಿಯೇ ದೇವಾಲಯದ ಮುಂದಿನ ಉನ್ನತವಾದ ದೀಪಸ್ತಂಭವನ್ನು ಪೂರ್ವ ದಿಕ್ಕಿನಲ್ಲಿ ದೇವಾಲಯದಿಂದ ಸುಮಾರು 100 ಮೀಟರ್ ಅಂತರದಲ್ಲಿ ನಿಂತಿರುವ ಮಂಟಪವನ್ನು ನಿರ್ಮಿಸಿರಬೇಕು. ಹತ್ತೊಂಬತ್ತನೇ ಶತಮಾನದಲ್ಲಿ ಆಂಗ್ಲ ವಿದ್ವಾಂಸರು ಈ ದೇವಾಲಯ ಬಗ್ಗೆ ತಾಳಿದ ಆಸಕ್ತಿ ಮತ್ತು ಅವರು ಅದನ್ನು ವರ್ಣಿಸಿ ವಿವರಗಳನ್ನು ಪ್ರಕಟಿಸಿದರ ಫಲವಾಗಿ ಆಗಿನ ಮೈಸೂರು ಸರ್ಕಾರ ಈ ದೇವಾಲಯವನ್ನು ಸ್ವಲ್ಪ ಮಟ್ಟಿಗೆ ದುರಸ್ಥಿಗೊಳಿಸಿತು. ಮುಂದೆ 1924ರಲ್ಲಿ ಹೆಚ್ಚಿನ ಅಭಿವೃದ್ಧಿ ಕಾರ್ಯವನ್ನು ಕೈಗೊಂಡಿತು. ಮಹಾದ್ವಾರದ ಎರಡು ಕಡೆಯು ಬಿಟ್ಟುಹೋಗಿದ್ದ ಸುತ್ತಾಲಯದ ಗುಡಿಗಳನ್ನು ತೆಗೆದು

ಹಾಕಲಾಯಿತು. ಮಹಾದ್ವಾರವನ್ನು ಸರಿಪಡಿಸಲಾಯಿತು ಮತ್ತು ಮೂಲ ದೇವಾಲಯವನ್ನು ಭದ್ರಪಡಿಸಲಾಯಿತು. ಕ್ರಿ.ಶ. 1953 ರಲ್ಲಿ ಈ ದೇವಾಲಯದ ಒಳಭಾಗದ ಅಪರಿಮಿತ ಸೌಂದರ್ಯವನ್ನು ನೋಡಿ ಆನಂದಿಸಲು ಅನುಕೂಲವಾಗುವಂತೆ ವಿದ್ಯುದ್ದೀಪದ ಸೌಕರ್ಯವನ್ನು ಒದಗಿಸಲಾಯಿತು. ಈಗ ಈ ದೇವಾಲಯ ಕೇಂದ್ರ ಸರ್ಕಾರದ ರಕ್ಷಣೆಗೆ ಒಳಪಟ್ಟು ಸುಸ್ಥಿತಿಯಲ್ಲಿದೆ.

### 7.2 ಸೋಮನಾಥಪುರದ ಆಡಳಿತ

ಸೋಮನಾಥಪುರವು ಅಗ್ರಹಾರ ಚತುರ್ವೇಧಿ ಮಂಗಳ ವಿದ್ಯಾನಿಧಿ ಪ್ರಸನ್ನ ಎಂಬುದಾಗಿ ಪ್ರಸಿದ್ಧವಾಗಿತ್ತು. ಆದರೆ ಈಗ ಉದ್ಭವಿಸುವ ಪ್ರಶ್ನೆಯೆಂದರೆ ಹೊಯ್ಸಳ ಆಡಳಿತದಲ್ಲಿ ಈ ಅಗ್ರಹಾರದ ಸ್ಥಾನವು ಏನಾಗಿತ್ತು ಎಂಬುದಾಗಿದೆ. ಅಗ್ರಹಾರ ಎಂಬುದೊಂದು ಸಮುಚ್ಛಯ ಪದವಾಗಿದ್ದು ಅಗ್ರ ಮತ್ತು 'ಅಹರ' ಎಂಬ ಪದಗಳನ್ನೊಳಗೊಂಡಿದೆ. ಅಗ್ರವೆಂದರೆ ಶ್ರೇಷ್ಠವೆಂದು ಹಾಗೂ ಅಹರವೆಂದರೆ ಸ್ಥಳವೆಂಬ ಅರ್ಥ ಬರುತ್ತದೆ. ಆದ್ದರಿಂದ ಅಗ್ರಹಾರವೆಂದರೆ ಸರ್ವೋತ್ತಮರಿಗೆ ಅಂದರೆ ಬ್ರಾಹ್ಮಣರಿಗೆ ನೀಡುವ ಸ್ಥಳವಾಗಿದೆ. ಆ ಕಾಲದ ರಾಜಕೀಯ ಸ್ಥಿತಿಗತಿಯಲ್ಲಿ ನೋಡುವುದಾದರೆ ಈ ವಸಾಹತುವಿಗೆ ಇಲ್ಲಿ ದೊರೆತ ಶಾಸನಗಳ ಪ್ರಕಾರ ನಿರ್ಬಂಧವಾದ ಅಧಿಕಾರವನ್ನು ನೀಡಲಾಗಿತ್ತು. ಇವುಗಳಿಗೆ ಅಧಿಕಾರವೆಷ್ಟಿತ್ತೆಂದರೆ ಹೊಯ್ಸಳರ ಕಂದಾಯ ಅಥವಾ ಇನ್ನಿತರೆ ಅಧಿಕಾರಿಗಳ ಪ್ರವೇಶವನ್ನು ನಿರ್ಬಂಧಿಸಲಾಗಿತ್ತು. ಈ ಸ್ಥಳದ ಅಧಿಕಾರವು ಬ್ರಾಹ್ಮಣ ಮಹಾಜನರ ಕೈಯಲ್ಲಿತ್ತು. ಇವರುಗಳು ಭೂಹಿಡುವಳಿದಾರರು ಅಥವಾ ವೃತ್ತಿದಾರರಾಗಿದ್ದರು. ಇವರು ಘನ ಸವಲತ್ತುಗಳನ್ನು ಅನುಭವಿಸುತ್ತಿದ್ದರು. ಈ ವರ್ಗವನ್ನು ಮೂರನೇ ನರಸಿಂಹನು ಸೃಷ್ಟಿಸಿದನು. ಅವರ ವಸಾಹತುಗಳನ್ನು ತತ್ತುಗಳಾಗಿ ವಿಂಗಡಿಸಲಾಯಿತು. ಮುಖ್ಯವಾಗಿ ಅಗ್ರಹಾರದಲ್ಲಿ ಎರಡು ಪಂಗಡಗಳಿದ್ದವು. 1. ಶ್ರೀ ವೈಷ್ಣವ ಪಂಗಡ 2. ಶೈವ ಪಂಗಡ ಈ ವಿಷಯವು ಶಾಸನಗಳಿಂದ ತಿಳಿದುಬರುತ್ತದೆ. ಪ್ರತೀ ಧಾರ್ಮಿಕ ಪಂಗಡವು ತನ್ನದೇ ಆದ ನಿರ್ದಿಷ್ಟ ವ್ಯಾಪ್ತಿಯಲ್ಲಿ ತನ್ನ ವಿಷಯಗಳನ್ನು ತನ್ನ ತತ್ತುಗಳೊಂದಿಗೆ ನಿಯಂತ್ರಿಸುತ್ತಿದ್ದಿತು. ಬೇರೆ ಮಾತುಗಳಲ್ಲಿ ಹೇಳುವುದಾದರೆ ಅಗ್ರಹಾರದಲ್ಲಿನ ಆಡಳಿತವನ್ನು ಧಾರ್ಮಿಕ ಹಾಗೂ ಸಮ ರೂಪವಾದ ಅನೇಕ ಪಂಗಡಗಳಿಗಾಗಿ ವಿಭಾಗಿಸಲಾಗುತ್ತಿತ್ತು.

ಅಗ್ರಹಾರದ ಮಹಾಜನರು ಯಾವುದೇ ರೀತಿಯಲ್ಲಿ ಸರ್ಕಾರದ ಅಧಿಕಾರದ ಮನ್ನಣೆಯನ್ನು ಯಾಚಿಸದೆ ಮೂರು ಪ್ರಮುಖ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಅವುಗಳೆಂದರೆ

1) ಆಡಳಿತ

2) ಆರ್ಥಿಕ ಕಾರ್ಯಗಳು

3) ನ್ಯಾಯಯುತ ಕಾರ್ಯಗಳು (ನ್ಯಾಯಕ್ಕೆ ಸಂಬಂಧಿಸಿದ)

ಈ ರೀತಿಯಾಗಿ ಅಗ್ರಹಾರವಾದ ಸೋಮನಾಥಪುರವು ರಾಜ್ಯದಲ್ಲಿ ಒಂದು ಪ್ರತ್ಯೇಕ ರಾಜ್ಯವಾಗಿತ್ತು. ಕಾರಣವೇನೆಂದರೆ ಸ್ಥಳೀಯ ಪಂಗಡವಾಗಿ ಮಹಾಜನರು ಎಲ್ಲಾ ರೀತಿಯ ಸಾರ್ವಭೌಮತ್ವಾಧಿಕಾರವನ್ನು ಹೊಂದಿದ್ದರು. ಅವರು ರಾಜ್ಯಕ್ಕೆ ಯಾವುದೇ ರೀತಿಯ ತೆರಿಗೆಗಳನ್ನು ಸಲ್ಲಿಸುತ್ತಿರಲಿಲ್ಲ. ಏಕೆಂದರೆ ಅದೊಂದು ಸರ್ವಮಾನ್ಯವಾದ ಅಗ್ರಹಾರವಾಗಿತ್ತು.

### 7.3 ಕೃಷಿ ವ್ಯವಸ್ಥೆ

ಸೋಮನಾಥಪುರ ದೇವಾಲಯ ಸಂಕೀರ್ಣದ ಶಾಸನದ ಸಾಕ್ಷಿಯಿಂದ ಹೊರಬರುವ ಕೃಷಿ ವ್ಯವಸ್ಥೆಯ ಚಿತ್ರಣವು ಬಹಳ ಕುತೂಹಲಕಾರಿಯಾಗಿದೆ. ಆ ಸ್ಥಳದ ಸ್ವಲ್ಪವೇ ಆಧಾರವನ್ನು ಹೆಚ್ಚಿಸುವ ಉದ್ದೇಶದಿಂದ ಹಾಗೂ ನಮ್ಮ ಅರಿವಿನಲ್ಲಿ ಇರುವ ಕೆಲವು ನ್ಯೂನ್ಯತೆಗಳನ್ನು ಮುಚ್ಚಿಸುವ ಉದ್ದೇಶದಿಂದಾಗಿ ಸಮಕಾಲೀನ ಶಿಲಾಶಾಸನ ಆಧಾರಗಳನ್ನು ಹುಡುಕಿ ಇವುಗಳಿಂದ ಹೊರಬರುವ ಚಿತ್ರಣವು ಸ್ಪಷ್ಟವಾಗಿ ಹಾಗೂ ಹೆಚ್ಚು ಮೌಲ್ಯಯುತವಾಗಿ ಕಂಡುಬರುವ ಉದ್ದೇಶದಿಂದ ಸೂಕ್ತವಾದ ಸ್ಥಳಗಳಲ್ಲಿ ಉಪಯೋಗಿಸಲಾಗುವುದು. ಮೂರನೇ ನರಸಿಂಹನ ಆಳ್ವಿಕೆಯ ಕಾಲದಲ್ಲಿ ಮೈಸೂರು ಜಿಲ್ಲೆಯ ಸೋಮನಾಥಪುರದ ಸುತ್ತಮುತ್ತಲಿನ ಶಾಸನಗಳನ್ನು ಈ ಉದ್ದೇಶಕ್ಕಾಗಿ ಬಳಸಿ ಕೊಳ್ಳಲಾಗಿದೆ.

ಕೃಷಿಯು ಪ್ರಧಾನವಾದ ಕಸುಬಾಗಿತ್ತು ಹಾಗೂ ದೇವಾಲಯ ಸಮುಚ್ಛಯದ ಎಲ್ಲ ಚಟುವಟಿಕೆಗಳಿಗೂ ಬೆಂಬಲದಾಯಕವಾಗಿತ್ತು. ಅಗ್ರಹಾರದ ಜೊತೆಯಲ್ಲಿ ಸೋಮನಾಥಪುರ ದೇವಾಲಯ ಸಮುಚ್ಛಯವು ಕಾವೇರಿ ನದಿತೀರದಲ್ಲಿ ನೆಲೆಸಿತ್ತು. ಆದ್ದರಿಂದ ಆ ಸ್ಥಳದ ಕೃಷಿ ವ್ಯವಸ್ಥೆಯಲ್ಲಿ ನೀರಾವರಿ ಬೇಸಾಯ ಪದ್ಧತಿಯು ಪ್ರಮುಖವಾಗಿತ್ತು. ಈ ಅಂಶವು ಆ ಸ್ಥಳದಲ್ಲಿ ದೊರೆತಿರುವ ಶಾಸನಗಳಿಂದ ತಿಳಿದು ಬರುತ್ತದೆ. ನದಿಯಿಂದ ಕಾಲುವೆಗಳನ್ನು ಹರಿಸಲಾಯಿತು. ಹಾಗೆಯೇ ದೇವರಿಗೆ ಸೇರಿದ ಭೂಮಿಯನ್ನು ನೀರಾವರಿ ಭೂಮಿಯನ್ನಾಗಿ ಮಾಡಲಾಯಿತು. ಈ ರೀತಿಯಾಗಿ ಮೇಲಿನ ಅರ್ಥಕ್ಕೆ ಸರಿಹೊಂದುವಂತಹ ಒಂದು ವಾಕ್ಯವನ್ನು ನಾವು ಒಂದು ಶಾಸನದಲ್ಲಿ ನೋಡಬಹುದು.

"ಹೊಳೆಯ ತಡಿಯ ಕಾಲುವೆಯಲ್ಲಿ ಆ ದೇವರ ಕೊಡುಗೆಯ ಗದ್ದೆ ಸಾಲಾಗೆ ಇನ್ನೂರನ್ನು" ಇದೇ ರೀತಿಯಾಗಿ "ಮೂಡಲು ಕಾಲುವೆ" ಎಂಬ ಪದ ಸಮೂಹವನ್ನು ಇನ್ನೊಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಇನ್ನೊಂದು ಶಾಸನದಲ್ಲಿ "ಆ ಬಾಗಿಲುವಿನ ಬಿಳಿಯ ಬಣ್ಣ ಸಮುದ್ರದಿಂದ ಬಾಗೇವೂರಿನ ಕಡೆ ಹರಿಯುವ ಕಾಲುವೆಯ ಕೆಳಗಿನ ಅರ್ಧ ವೃತ್ತಿ ಎಂದು ಹೇಳಲಾಗಿದೆ. ಇನ್ನೊಂದು ಆ ಬಾಗಿಲುವಿನ ಬಿಳಿಯ ಬಣ್ಣ ಸಮುದ್ರದಿಂದ ಬಾಗೇವೂರಿಗೆ ಹರಿಯುವ ಇನ್ನೊಂದು ನೀರಾವರಿ ಕಾಲುವೆಯನ್ನು ಸೋಮನಾಥಪುರದ ಶಾಸನದಲ್ಲಿ ಉಲ್ಲೇಖಿಸ ಲಾಗಿದೆ. ಈ ಕಾಲುವೆಯನ್ನು ಮಳೆ ನೀರಾಧಾರಿತ ಅಥವಾ ಕಾವೇರಿ ನದಿ ನೀರಿನ ಮೂಲವನ್ನು ಹೊಂದಿದ್ದ ಕೆರೆಯಿಂದ ತೋಡಲಾಗಿತ್ತು ಎಂಬ ವಿಚಾರವು ಬಹಳ ಕುತೂಹಲಕಾರಿಯಾಗಿದೆ. ಆದ್ದರಿಂದ ಈ ಪ್ರದೇಶದಲ್ಲಿ ಕಾಲುವೆ ನೀರಾವತಿ ಕೆರೆ ನೀರಾವರಿ ಹಾಗೂ ನದಿಗಳ ಮೂಲಕ ನೀರಾವರಿ ಪದ್ಧತಿ ಅಸ್ಥಿತ್ವದಲ್ಲಿತ್ತು.

ಎರಡು ರೀತಿಯಾದ ಭೂಗೇಣಿಯನ್ನು ಉಲ್ಲೇಖಿಸಲಾಗಿದೆ. ಅಗ್ರಹಾರವು ಒಂದಾದರೆ ದೇವಾಲಯವು ಮತ್ತೊಂದಾಗಿದೆ. ಅಗ್ರಹಾರ ಭೂಮಿಗಳನ್ನು ಸೋಮನಾಥಪುರದ ಬ್ರಾಹ್ಮಣ ಭೂ ಒಡೆಯರು ಅನುಭವಿಸುತ್ತಿದ್ದರು. ಆ ಭೂಮಿಗಾಗಿ ಅವರು ಯಾವುದೇ ವಿಧವಾದ ತೆರಿಗೆಯನ್ನು ನೀಡುತ್ತಿರಲಿಲ್ಲ.

ಇದೇ ರೀತಿಯಾಗಿ ದೇವದಾಯ ಭೂಮಿಯನ್ನು ಸ್ಥಳೀಯ ದೇವತೆಗಳಿಗೆ ನೀಡಲಾಗುತ್ತಿತ್ತು. ಹಾಗೆಯೇ ಇವುಗಳು ಕೂಡ ತೆರಿಗೆ ವಿನಾಯಿತಿಯನ್ನು ಹೊಂದಿದ್ದವು. ಇಲ್ಲಿ ಕುತೂಹಲಕಾರಿಯಾದ ಅಂಶವೇನೆಂದರೆ ಭೂಭಾಗಗಳನ್ನು ವೃತ್ತಿಗಳಾಗಿ ವಿಭಜಿಸಲಾಗುತ್ತಿತ್ತು. ಇವುಗಳನ್ನು ಪ್ರತ್ಯೇಕವಾಗಿ ದೇವರು ಹಾಗೂ ಬ್ರಾಹ್ಮಣರಿಗೆ ನೀಡಲಾಗುತ್ತಿತ್ತು. ಭೂಮಿಯನ್ನು ದೇವರಿಗೆ ನೀಡುತ್ತಿದ್ದ ಸಂದರ್ಭಗಳಲ್ಲಿ ಅಂತಹ ದತ್ತಿಗಳನ್ನು ತೆರಿಗೆ ವಿನಾಯಿತಿ ಮಾಡಲಾಗುತ್ತಿತ್ತು ಹಾಗೂ ಇದಕ್ಕೂ ಮುನ್ನ ಸಾಗುವಳಿಯ ಖರ್ಚನ್ನು ಅದರಿಂದ ಕಳೆಯಲಾಗುತ್ತಿತ್ತು. ಉದಾಹರಣೆಗೆ ಒಂದು ಶಾಸನವು ಬರೆಯುವಂತೆ ದುಗ್ಗನಹಳ್ಳಿ, ಕಡಲೇಯ ಹಳ್ಳಿ, ಮಿಕ್ಕಗೆರೆ ಹಾಗೂ ಶೆಟ್ಟಿಯ ಹಳ್ಳಿಗೆ ಸೇರಿದ ತೋಟಗಳ ಸಾಗುವಳಿ ವೆಚ್ಚವನ್ನು ಕಳೆದ ನಂತರ ಹಾಗೂ ಆ ತೋಟಗಳನ್ನು ತೆರಿಗೆ ಮುಕ್ತಿಗೊಳಿಸಿದ ನಂತರ ದೇವರಿಗೆ ಕೊಡುಗೆ ನೀಡಲಾಯಿತು. ಎಂಭತ್ತು ಗದ್ಯಾಣಗಳು ಸೇರಿವೆ. ಇಲ್ಲಿ ಒಂದು ಕುತೂಹಲಕಾರಿಯಾದ ಅಂಶವೇನೆಂದರೆ ದೇವರಿಗೆ ನೀಡಿದ ಗೇಣಿಯನ್ನು ನಗದಿನ

ರೂಪದಲ್ಲಿ ದಾಖಲಿಸಲಾಗಿದೆ. ಆದರೆ ಯಾವುದೇ ರೀತಿಯ ವಸ್ತುವಿನ ಮೂಲಕವಲ್ಲ ಇದರ ಜೊತೆಯಲ್ಲಿ ಸಾಗುವಳಿ ಯೋಗ್ಯ ಭೂಮಿಗೆ ನೀಡಬಾಕಾಗಿದ್ದ ಗುತ್ತಿಗೆಯ ಪ್ರಮಾಣದ ದರವನ್ನು ಈ ಶಾಸನವು ನೀಡುತ್ತದೆ. ಗುತ್ತಿಗೆಯ ಆಧಾರದ ಮೇಲೆ ನಿಗದಿಪಡಿಸಲಾಗಿದ್ದು ಗೇಣಿಯೆಂದರೆ ನೀರಾವರಿ ಜಮೀನಿನ ಒಂದು ಸಲಿಗೆಗೆ ಗುತ್ತಿಗೆಯು ಒಂದು ಗದ್ಯಾಣವಾಗಿತ್ತು. ಕಾಲುವೆಯ ಮೂಲದ 200 ಸಲಿಗೆ ನೀರಾವರಿ ಭೂಮಿಗೆ ಗುತ್ತಿಗೆಯು 150 ಗದ್ಯಾಣಗಳಾಗಿತ್ತು.

ದೇವಾಲಯಕ್ಕೆ ಹೊಂದಿಕೊಂಡಿದ್ದ ಶಿಕ್ಷಕರಿಗೆ ಸಂಬಳದ ಬದಲಾಗಿ ಭೂದತ್ತಿಯನ್ನು ನೀಡಲಾಗಿತ್ತು. ಇಂತಹ ಭೂಕೊಡುಗೆಯನ್ನು ತೀರ್ಥ ವೃತ್ತಿ ಎಂದು ಕರೆಯಲಾಗುತ್ತಿತ್ತು.

ಸೋಮನಾಥಪುರದಲ್ಲಿ ವಾಸವಾಗಿದ್ದ ಬ್ರಾಹ್ಮಣ ಜಮೀನ್ದಾರರು ಅವಶ್ಯಕತೆ ಬಂದಾಗ ಭೂಮಿಯನ್ನು ಮಾರುತ್ತಿದ್ದರು. ಈ ರೀತಿಯಾದ ವ್ಯವಹಾರಗಳಿಂದ ಆ ಸ್ಥಳದಲ್ಲಿ ಭೂಮಿಗೆ ಹೆಚ್ಚಿದ ಮೌಲ್ಯವು ನಮಗೆ ತಿಳಿದು ಬರುತ್ತದೆ. ಹೊರ ಪ್ರದೇಶಗಳಿಂದ ವಲಸೆ ಬರುತ್ತಿದ್ದುದರಿಂದ ಭೂಮಿಯ ಮೇಲೆ ಹೆಚ್ಚು ಒತ್ತಡವಿರುತ್ತಿದ್ದುದು ಕಂಡು ಬರುತ್ತದೆ. ಆರ್ಥಿಕ ಕಾರಣಗಳಿಂದ ಕೆಲವು ಬ್ರಾಹ್ಮಣ ಮಹಾಜನರು ತಮ್ಮ ಜಮೀನನ್ನು ಇತರೆ ಬ್ರಾಹ್ಮಣ ಮಹಾಜನ ಭೂ ಒಡೆಯರಿಗೆ ಮಾರಾಟ ಮಾಡಿರುವ ಸಾಧ್ಯತೆಗಳು ಕೂಡ ಬಹಳಷ್ಟಿದೆ. ಆದ್ದರಿಂದ ಕ್ರಿ.ಶ. 1326ರ ಶಾಸನವೊಂದು ದಾಖಲಿಸುವಂತೆ ಸೋಮನಾಥಪುರದ ವೈಷ್ಣವ ಮಹಾಜನರಿಂದ ಮೂವತ್ತು ಸಲಿಗೆ ಭೂಮಿಯು ವ್ಯಾಪಾರವಾಗಿತ್ತು ಎಂದು ತಿಳಿದು ಬರುತ್ತದೆ.

ಸೋಮನಾಥಪುರದ ಮಹಾಜನರು ಆಗಾಗ ದೇವಾಲಯ ಜಮೀನನ್ನು ಭೋಗ್ಯಕ್ಕೆ ಪಡೆದು ಅದಕ್ಕೆ ನಗದಿನ ರೂಪದಲ್ಲಿ ಗೇಣಿಯನ್ನು ಕೊಡುತ್ತಿದ್ದರು. ಒಂದು ಶಾಸನದ ಮಾಹಿತಿಯ ಪ್ರಕಾರ ಆರು ತತ್ತುಗಳ ಮಹಾಜನರು ಕ್ರಿ.ಶ. 1326 ರಲ್ಲಿ ಕೇಶವ ದೇವನಿಗೆ 210 ಗದ್ಯಾಣಗಳನ್ನು ನೀಡಿದರು ಹಾಗೂ ಈ ಕೊಡುಗೆಯನ್ನು ಹೆಗ್ಗದ-ಹಡಿಕೆ ಎಂದು ಕರೆಯಲಾಗುತ್ತಿತ್ತು. ಸ್ವತಃ ಮಹಾಜನರಲ್ಲೇ ಕ್ರಿ.ಶ. 1326 ರ ಶಾಸನವು ದಾಖಲಿಸುವಂತೆ ಎರಡು ವರ್ಗಗಳಿವೆ. ಇದರ ಕರಾರಿನ ಪ್ರಕಾರವಾಗಿ ಹದಿನಾಲ್ಕು ವೃತ್ತಿಗಳ ಮೂವತ್ತು ವೈಷ್ಣವ ಮಹಾಜನರು ಒಂದು ಕೆರೆ ಹಾಗೂ ಕಾಲುವೆಯ ನಿರ್ವಹಣೆಯ ಉದ್ದೇಶಕ್ಕಾಗಿ ಆರು ತತ್ತುವಿನ ಮಹಾಜನರಿಗೆ ಕಿತ್ತು ಗುತ್ತಿಗೆಯಾಗಿ ಪ್ರತೀ ವರ್ಷವು ಆರು ಗದ್ಯಾಣಗಳನ್ನು ನೀಡಬೇಕಾಗಿತ್ತು. ಆ ಎರಡು ವರ್ಗಗಳೆಂದರೆ 1.

ಜಮೀನ್ದಾರರು 2. ಭೂಹಿಡುವಳಿದಾರರು, ಈ ಎರಡು ವರ್ಗಗಳು ಬ್ರಾಹ್ಮಣ ವರ್ಗಗಳಾಗಿದ್ದು ಸೋಮನಾಥಪುರದ ಮಹಾಜನರು ಎಂದು ಗುರುತಿಸಲ್ಪಡುತ್ತಿದ್ದರು. ಮೂವತ್ತು ವೈಷ್ಣವ ಮಹಾಜನರನ್ನೊಳಗೊಂಡಿದ್ದ ಒಂದು ಗುಂಪು ಹದಿನಾಲ್ಕು ವೃತ್ತಿಗಳನ್ನು ಗೇಣಿಯಾಗಿ ಹೊಂದಿತ್ತು ಹಾಗೂ ಇನ್ನೊಂದು ವರ್ಗವು ಭೂ ಮಾಲೀಕರಾದ ಆರು ತತ್ತುಗಳ ಮಹಾಜನರನ್ನೊಳಗೊಂಡಿತ್ತು. ಶಾಸನದಲ್ಲಿ ತೋರ್ಪಡುವಂತೆ ಭೂಮಾಲೀಕರು ತಮ್ಮದೇ ಸ್ವತಃ ಹಣದಿಂದ ಒಂದು ಕೆರೆ ಹಾಗೂ ಕಾಲುವೆಯನ್ನು ನೀರಾವರಿಯ ಉದ್ದೇಶದಿಂದ ನಿರ್ಮಿಸುತ್ತಿದ್ದರು. ಆದರೂ ಗುತ್ತಿಗೆ ಮಾಡಿಕೊಂಡಿದ್ದ ಮಹಾಜನರು ಕತ್ತುಗುತ್ತಿಗೆ ಎಂಬ ವಾರ್ಷಿಕ ಬಾಕಿಯನ್ನು ಕೊಡಬೇಕಾಗಿತ್ತು. ಗುತ್ತಿಗೆ ಎಂಬ ಪದವೇ ಹೇಳುವಂತೆ ಗೇಣಿದಾರರು ಹೊಂದಿದ್ದ ಒಂದು ಬಗೆಯ ಗೇಣಿಯು ಇದಾಗಿತ್ತು. ಹೊಯ್ಸಳರ ಕಾಲದ ಅನೇಕ ಶಾಸನಗಳಲ್ಲಿ ಕತ್ತು ಕೊಡುಗೆ, ಕೆರೆ ಕೊಡುಗೆ ಕೆರೆ ಕತ್ತು ಕೊಡುಗೆ ಬಿಟ್ಟು ದತ್ತ ಎಂಬವುಗಳ ಬಗ್ಗೆ ಉಲ್ಲೇಖವಿದೆ. ಇವುಗಳೆಲ್ಲವೂ ಕೆರೆ ಹಾಗೂ ನೀರಾವರಿಯ ಇನ್ನಿತರ ವಿಧಗಳ ನಿರ್ವಹಣೆಗೆಂದು ನೀಡಲಾದ ಕೊಡುಗೆಗಳೆಂಬ ಮಾಹಿತಿಯನ್ನು ನೀಡುತ್ತವೆ. ಅದರಂತೆ ಇನ್ನಿತರ ಶಾಸನಗಳಲ್ಲಿ ಕತ್ತು ಗುತ್ತಿಗೆಯ ಬಗ್ಗೆ ಸ್ವಲ್ಪ ಪ್ರಮಾಣದ ಉಲ್ಲೇಖವನ್ನು ನೀಡಲಾಗಿದೆ. ಸೋಮನಾಥಪುರ ಪ್ರದೇಶದಲ್ಲಿ ಬಹುಶಃ ಸಾಗುವಳಿಗಾಗಿ ಜಮೀನ್ದಾರರಿಂದ ನೀರಾವರಿ ಮೂಲಗಳನ್ನು ಭೋಗ್ಯಕ್ಕೆ ಪಡೆಯುವುದು ಒಂದು ಪದ್ಧತಿಯೆಂದು ತೋರುತ್ತದೆ. ಇದರಂತೆ ಕತ್ತು ಗುತ್ತಿಗೆಯನ್ನು ಇಬ್ಬರು ವ್ಯಕ್ತಿಗಳು ಬರುವ ಒಂದು ಒಪ್ಪಂದದಲ್ಲಿ ಕತ್ತು ಗುತ್ತಿಗೆಯನ್ನು ಉಪಯೋಗಿಸಲಾಗುತ್ತಿತ್ತು.

ದೇವದಾಯವೆಂಬ ಪದಕ್ಕೆ ಹೆಚ್ಚುವರಿಯಾಗಿ ಸೋಮನಾಥಪುರ ಶಾಸನಗಳು ತಮಿಳು ಪದವಾದ ತಿರುವಿದ್ಯೈಯಾತ್ತಮ್ ಎಂಬುದರ ದಾಖಲೆಯನ್ನು ನೀಡುತ್ತದೆ. ಇದರ ಅರ್ಥವೇನೆಂದರೆ ದೇವದಾಯ ಎಂದಾಗುತ್ತದೆ. ಅಂದರೆ ದೇವಾಲಯಗಳ ಅಧೀನದಲ್ಲಿದ್ದ ಭೂಮಿ ಎಂದರ್ಥ. ಇಲ್ಲಿ ಬಹಳ ಕುತೂಹಲಕಾರಿಯಾದ ಅಂಶವೇನೆಂದರೆ ಮೂರನೇ ನರಸಿಂಹನ ಆಳ್ವಿಕೆಗೆ ಸೇರಿದ ಒಂದು ಕನ್ನಡ ಶಾಸನದಲ್ಲಿ ಈ ತಮಿಳು ಪದವನ್ನು ಉಪಯೋಗಿಸಲಾಗಿದೆ. ಇವನ ಕಾಲದಲ್ಲೇ ಸೋಮನಾಥಪುರ ದೇವಾಲಯ ಸಮುಚ್ಛಯವು ಉಗಮಗೊಂಡಿತು. ದೇವಾಲಯ ಸಂಕೀರ್ಣವು ಅಸ್ತಿತ್ವಕ್ಕೆ ಬಂದ ಸ್ಥಳವನ್ನು ಹೊಯ್ಸಳರ ಪೂರ್ವ ಯುಗದಲ್ಲಿ ಗಂಗವಾಡಿ ಎಂದೇ ಕರೆಯಲಾಗುತ್ತಿತ್ತು. ಬಹಳ ದೀರ್ಘಕಾಲದವರೆಗೆ ಸೋಮನಾಥಪುರದ ಬಳಿಯೇ ಇದ್ದ ತಲಕಾಡಿನ ಪಶ್ಚಿಮ ಗಂಗರ ಅಧೀನದಲ್ಲಿ ಈ ಪ್ರದೇಶವು ಇತ್ತು. ಅವರ ಅವನತಿಯ ನಂತರ ಈ ಸ್ಥಳವನ್ನು

ತಂಜಾವೂರಿನ ಚೋಳರು ಆಕ್ರಮಿಸಿಕೊಂಡರು ಹಾಗೂ ಸಮಾಜದ ಉನ್ನತ ಶ್ರೇಣಿಯ ತಮಿಳೀಕರಣವು ಪ್ರಾರಂಭಗೊಂಡಿತು.

ಆ ಸಮಯದಲ್ಲಿ ದೇವಾಲಯಕ್ಕೆ ನೀಡಲಾಗುತ್ತಿದ್ದ ಭೂ ಕೊಡುಗೆಯನ್ನು ತಿರುವಿ ದೈಯಾತ್ತಮ್ ಎಂದು ಪರಿಗಣಿಸಲಾಗುತ್ತಿತ್ತು. ಇದರ ಜೊತೆಗೆ ಚೋಳನ ಮಧ್ಯಂತರ ಆಳ್ವಿಕೆಯಲ್ಲಿ ಗಂಗವಾಡಿ ಪ್ರದೇಶಕ್ಕೆ ದೊಡ್ಡ ಪ್ರಮಾಣದಲ್ಲಿ ತಮಿಳು ವಲಸೆಯು ಸಾಗಿತ್ತು. ಆದಾಗ್ಯೂ ಈ ಪದವು ಹೊಯ್ಸಳರ ಅವರ ಭೂ ಕೊಡುಗೆಯೊಂದಿಗೆ ಮುಂದುವರೆಯಿತು.

ಸೋಮನಾಥಪುರದ ಭೂ ಹಕ್ಕುಗಳ ಬಗ್ಗೆ ಶಾಸನಗಳಲ್ಲಿ ದಾಖಲೆಗಳಿವೆ. ಅವುಗಳು ಸ್ಥಳಗಳು ಅಥವಾ ಆ ಪ್ರದೇಶದ ಹಕ್ಕುಗಳಾಗಿದ್ದವು. ಕರ್ನಾಟಕದ ವಿವಿಧ ಭಾಗಗಳಲ್ಲಿ ಅಸ್ತಿತ್ವದಲ್ಲಿದ್ದ ಪುರಾತನ ಪದ್ಧತಿಯಂತೆ ಇಲ್ಲಿಯು ಕೂಡ ಎಂಟು ರೀತಿಯ ಅಷ್ಟ ಬೋಗತೇಜ-ಸೌಮ್ಯ ಎಂದು ಕರೆಯಲಾದ ಎಂಟು ಹಕ್ಕುಗಳ ಬಗ್ಗೆ ನಾವು ಮಾಹಿತಿಯನ್ನು ಪಡೆಯುತ್ತೇವೆ. ಅಂದರೆ ಭೂಮಿಯಲ್ಲಿನ ಒಡೆತನದ ಬಗ್ಗೆ ಹೊಂದಿದ್ದ ಹಕ್ಕುಗಳು ಇವಾಗಿವೆ. ಇದು ಮಣ್ಣಿನ ಮೇಲೆ ಅವರು ಹೊಂದಿದ್ದ ಸಂಪೂರ್ಣ ಹಕ್ಕನ್ನು ತಿಳಿಸುತ್ತದೆ. ಆ ಎಂಟು ಹಕ್ಕುಗಳೇನೆಂದರೆ 1. ನಿಧಿ 2. ನಿಕ್ಷೇಪ 3.ಜಾಲ 4.ಪಾಶಾಣ 5.ಅಕ್ಷಿಣ 6.ಅಗಾಮಿ 7.ಸಿದ್ಧ ಹಾಗೂ 8.ಸಾಧ್ಯ, ಇವುಗಳನ್ನು ಅನುವಾಸಿದಿದ್ದಲ್ಲಿ ಹುದುಗಿಸಲಾಗಿರುವ ನಿಧಿ, ನೀರು, ಕಲ್ಲು ಬರುವ ಲಾಭ ಮಾಡಲಾಗಿರುವ ಆಸ್ತಿ ಹೆಚ್ಚಿಸಲಾಗಿರುವ ಆಸ್ತಿ ಎಂದಾಗುತ್ತದೆ. ಇದರ ಜೊತೆಗೆ ನಾಸ್ತ ಹಾಗೂ ತೂಷ್ಟ ಎಂಬ ಹಕ್ಕುಗಳ ಬಗ್ಗೆಯೂ ಉಲ್ಲೇಖವನ್ನು ಮಾಡಲಾಗಿದೆ.

ಕೊಡುಗೆ ಹಾಗೂ ಕೂಡಿಗೆ ಭೂಗೇಣಿ ಪದ್ಧತಿಯ ಹೊಯ್ಸಳರ ಕಾಲಕ್ಕಿಂತ ಮೊದಲೇ ಕರ್ನಾಟಕದಲ್ಲಿ ಅಸ್ಥಿತ್ವದಲ್ಲಿತ್ತು. ಕೊಡುಗೆ ಎಂಬುದು ಕನ್ನಡ ಪದವಾಗಿದೆ. ಕೊಡುಗೆಯನ್ನು ಭೂಮಿಯ ರೂಪದಲ್ಲಿ ದೇವಾರಿಯ ಬ್ರಾಹ್ಮಣರು ಹಾಗೂ ಎಲ್ಲಾ ಬಗೆಯ ಅಧಿಕಾರಿಗಳಿಗೂ ನೀಡಲಾಗುತ್ತಿತ್ತು. ಸೋಮನಾಥಪುರದಲ್ಲಿ ಕೊಡುಗೆ (ಭೂಕೊಡುಗೆಗಳು). ಅಸ್ಥಿತ್ವದಲ್ಲಿತ್ತು ಹಾಗೂ ಇದನ್ನು ದೇವಾಲಯಗಳು ನಿಯಂತ್ರಿಸುತ್ತಿದ್ದವು. ಕ್ರಿ.ಶ. 1281 ರ ಶಾಸನವೊಂದು ಕೊಡುಗೆಯೆಂದು ಕಾವೇರಿ ನದಿಯ ತೀರದಲ್ಲಿದ್ದ ಕಾಲುವೆಯಡಿಯಲ್ಲಿದ್ದ ಕೆಲವು ತೋಟಗಳು ಹಾಗೂ 200

ಸಾಲಗೆಗಳ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ಬಹುಶಃ ಇದು ಹೊಯ್ಸಳ ದೊರೆ ಮೂರನೇ ನರಸಿಂಹನಿಗೆ ಸೇರಿತ್ತು ಎಂದು ಹೇಳಲಾಗಿದೆ.

ವಿಶಾಲವಾಗಿ ಹೇಳುವುದಾದರೆ "ವಿದ್ಯಾನಿಧಿ ಪ್ರಸನ್ನ ಸೋಮನಾಥಪುರ ಮಹಾಗ್ರಹಾರ" ದಲ್ಲಿ ಶೈವಸ್ಥಾನ ಹಾಗೂ ವೈಷ್ಣವ ಸ್ಥಾನಕ್ಕೆ ಸೇರಿದ ಎರಡು ವರ್ಗಗಳ ಭೂಮಾಲೀಕರ ಪಂಗಡಗಳಿದ್ದವು. ಅಗ್ರಹಾರದಲ್ಲಿ ಈ ರೀತಿಯಾದ ಧಾರ್ಮಿಕ ಪಂಗಡಗಳು ಸಾಮಾನ್ಯವಾಗಿ ಹುಟ್ಟಿಕೊಂಡಿದ್ದವು. ಏಕೆಂದರೆ ಎರಡು ಪ್ರಮುಖ ದೇವಾಲಯ ಸಂಕೀರ್ಣಗಳು ಅಂದರೆ ಶೈವ ಸ್ಥಾನಕ್ಕೆ ಸೇರಿದ್ದ ಪಂಚಲಿಂಗ ಹಾಗೂ ವೈಷ್ಣವ ಸ್ಥಾನಕ್ಕೆ ಸೇರಿದ್ದ ಕೇಶವ ದೇವಾಲಯಗಳಿದ್ದವು. ಆದರೂ ಅವರು ಆ ಪ್ರದೇಶದಲ್ಲಿ ಭೂಮಾಲೀಕರಾಗಿ ಮಹಾಜನರು ಎಂಬ ಪದವಿಯನ್ನು ಹೊಂದಿದ್ದರು. ಹಾಗೂ ತಮ್ಮ ಸ್ಥಾನಮಾನದ ಆಧಾರದ ಮೇಲೆ ಭೂ ಆಸ್ತಿಯಲ್ಲಿ ವೃತ್ತಿಗಳು ಅಥವಾ ಪಾಲುಗಳನ್ನು ಹೊಂದಿದ್ದರು.

ಮಹಾಜನರು ಹೊಯ್ಸಳ ಸರ್ಕಾರಕ್ಕೆ ಹಾಗೂ ನಂತರದ ವಿಜಯನಗರ ಸರ್ಕಾರಕ್ಕೆ ತೆರಿಗೆಗಳನ್ನು ನೀಡುತ್ತಿರಲಿಲ್ಲ. ಅವರು ಭೂಮಿಯನ್ನು ಸರ್ವಮಾನ್ಯ ಅಥವಾ ಎಲ್ಲ ತೆರಿಗೆಗಳಿಂದಲೂ ಮುಕ್ತ ಎಂದು ಭಾವಿಸುತ್ತಿದ್ದರು. ಆದರೆ ಸರ್ಕಾರವು ಬ್ರಾಹ್ಮಣರ ಭೂಮಾಲೀಕರಿಗೆ ತೆರಿಗೆ ಸಂಗ್ರಹಿಸುವ ಹಕ್ಕನ್ನು ಬಿಟ್ಟುಕೊಟ್ಟಿತ್ತು. ಈ ಸನ್ನಿವೇಶಗಳಲ್ಲಿ ಹೊಯ್ಸಳ ಸಮಾಜದಲ್ಲಿ ಅವರೊಂದು ಪ್ರತಿಷ್ಠಿತ ಭೂಮಾಲೀಕರಾಗಿದ್ದ ವರ್ಗ ಎಂದು ಹೇಳಬಹುದು. ಅವರು ಈ ಕೆಳಕಂಡ ತೆರಿಗೆಗಳನ್ನು ಸಂಗ್ರಹಿಸುತ್ತಿದ್ದರು.

1. ನೀರು ಕೂಲಿ
2. ನಿಚಂದಿ
3. ಮನೆ, ವನ (ಗೃಹ ತೆರಿಗೆ)
4. ಬೆಡುಗೆ
5. ಮಂದೆ ಗದ್ಯಾಣ (ತೆರಿಗೆ ಸುಂಕ)

ದೇವಾಲಯ ಭೂಮಿಯನ್ನು ಸ್ಥಾನಿಕರು ಅಥವಾ ವ್ಯವಸ್ಥಾಪಕರು ನಿರ್ವಹಿಸುತ್ತಿದ್ದರು ಹಾಗೂ ದೇವಾಲಯ ಭೂಮಿಯನ್ನು ಸಾಗುವಳಿ ಮಾಡುತ್ತಿದ್ದವರನ್ನು ದೇವರ ಒಕ್ಕಲು ಎಂದು

ಕರೆಯಲಾಗುತ್ತಿತ್ತು. ಅವರನ್ನು ಗೌಡರು ಎಂದು ಕರೆಯಲಾಗುತ್ತಿತ್ತು. ಒಕ್ಕಲಿನಿಂದ ನೀಡಲಾಗುತ್ತಿದ್ದ ಪಾಲನ್ನು ಸರ್ವ ಪ್ರಾಪ್ತಿ ಎಂದು ಕರೆಯಲಾಗುತ್ತಿತ್ತು. ಮೂರನೇ ನರಸಿಂಹನ ಆಳ್ವಿಕೆಯ ಕಾಲದ್ದೆಂದು ಹೇಳಲಾದ ಕ್ರಿ.ಶ. 1269 ಒಂದು ಶಾಸನವು ಗುರುಗಳಿಗೆ ನೀಡಲಾದ ತೀರ್ಥ ವೃತ್ತಿ ಎಂಬ ಭೂ ಕೊಡುಗೆಯ ಒಂದು ಅಪರೂಪದ ಉದಾಹರಣೆಯನ್ನು ನೀಡುತ್ತದೆ. ಈ ಕೊಡುಗೆಗೆ ಪಾತ್ರರಾದ ಗುರುಗಳು ಧಾರ್ಮಿಕ ಹಾಗೂ ವೈಜ್ಞಾನಿಕ ಗ್ರಂಥಗಳಲ್ಲಿ ಪಾಂಡಿತ್ಯವನ್ನು ಗಳಿಸಿದ್ದವರಾಗಿದ್ದರು. ಅವರು ತಾವು ಹೊಂದಿದ್ದ ನೀರಾವರಿ ಅಥವಾ ಖುಷ್ಕಿ ಜಮೀನಿಗೆ ಯಾವುದೇ ರೀತಿಯ ತೆರಿಗೆಯನ್ನು ನೀಡುತ್ತಿರಲಿಲ್ಲ.

ಹಳ್ಳಿಗಳ ಮೇಲೆ ಹೇರಲಾಗುತ್ತಿದ್ದ ಹಲವಾರು ಬಗೆಯ ತೆರಿಗೆಗಳ ಬಗ್ಗೆ ಸೋಮನಾಥಪುರ ಶಾಸನವು ದಾಖಲೆಯನ್ನು ನೀಡುತ್ತದೆ. ಈ ತೆರಿಗೆಗಳನ್ನು ಆ ಪ್ರದೇಶದ ಬ್ರಾಹ್ಮಣ ಭೂಮಾಲೀಕರೆ ಸಂಗ್ರಹಿಸುತ್ತಿದ್ದರು. ಅವರು ದೇವರಿಗೆ ಸೇರಿದ ಗ್ರಾಮಗಳ ಮೇಲೂ ವಿಧಿಸಲಾಗುತ್ತಿದ್ದ ತೆರಗೆಗಳನ್ನು ಸಂಗ್ರಹಿಸುತ್ತಿದ್ದರು. ಈ ಶಾಸನವು ಹಳ್ಳಿಗಳು, ಪಟ್ಟಣಗಳು, ತೋಟಗಳು ಹಾಗೂ ನೀರಾವರಿ ಭೂಮಿಗಳಿಂದ ಬರುತ್ತಿದ್ದ ಆದಾಯದ ಬಗ್ಗೆ ಉಲ್ಲೇಖವನ್ನು ನೀಡುತ್ತವೆ. ದೇವಾಲಯ ಸಮುಚ್ಛಯಕ್ಕೆ ಸೇರಿದ್ದ ಎಲ್ಲ ಭೂಮಿಯು ಒಣಭೂಮಿ ಹಾಗೂ ನೀರಾವರಿ ಭೂಮಿಯಾಗಿಯೇ ಇತ್ತು. ಏಕೆಂದರೆ ದೇವಾಲಯ ಸಮುಚ್ಛಯವು ಕಾವೇರಿನದಿ ತೀರದ ಮೇಲೆ ನೆಲೆಸಿತ್ತು ಹಾಗೂ ಆ ನದಿಯಿಂದ ನಿರ್ಮಿಸಲಾಗಿದ್ದ ಕಾಲುವೆಗಳು ವ್ಯವಸಾಯಕ್ಕೆ ಸಾಕಷ್ಟು ನೀರನ್ನು ಒದಗಿಸುತ್ತಿದ್ದವು.

ತೆರಿಗೆಗಳ ಸಾಲಿನಲ್ಲಿ ಸಿದ್ದಾಯ ಎಂಬುದು ಶಾಸನದಲ್ಲಿ ಬಹಳ ಪ್ರಮುಖವಾಗಿ ಕಂಡು ಬರುತ್ತದೆ. ಈ ಪದವು ಸಾಮಾನ್ಯವಾಗಿ ಹೊಯ್ಸಳ ಪೂರ್ವ ಆಳ್ವಿಕೆಯ ಕಾಲದಲ್ಲಿ ಅಧಿಕಾರದಲ್ಲಿದ್ದ ಹಲವು ವಂಶಗಳಿಗೆ ಸೇರಿದ್ದ ಬಹುತೇಕ ಎಲ್ಲಾ ಶಾಸನಗಳಲ್ಲೂ ಉಪಯೋಗಿಸಲ್ಪಡುತ್ತಿದ್ದ ಒಂದು ಸಾಮಾನ್ಯ ಪದವಾಗಿತ್ತು.

ಸಿದ್ದಾಯ ಎಂಬುದನ್ನು ಸಾಮಾನ್ಯವಾಗಿ ನಿಶ್ಚಿತ ತೆರಿಗೆ ಎಂದು ಅನುವಾದಿಸಲಾಗಿದೆ. ಈ ತೆರಿಗೆಯನ್ನು ಯಾರು ಕೊಡುತ್ತಿದ್ದರು ಎಂಬುದು ಈಗ ಉದ್ಭವಿಸುವ ಪ್ರಶ್ನೆಯಾಗಿದೆ. ಇದಕ್ಕೆ ಉತ್ತರವೇನೆಂದರೆ ಸೋಮನಾಥಪುರದ ಮಹಾಜನರಿಂದ ಭೋಗ್ಯಕ್ಕೆ ಪಡೆದು ಸಿದ್ದಾಯವನ್ನು ನೀಡಿದ ಗೇಣಿದಾರರು ಎಂದು ಹೇಳಲಾಗಿದೆ. ಈ ಭೋಗ್ಯದ ಆಧಾರದ ಮೇಲೆ ದೇವಾಲಯಕ್ಕೆ

ಸಂಬಂಧಿಸಿದ ಭೂಮಿಯನ್ನು ನೀಡಲಾಯಿತು. ಈ ಪದವು ಬ್ರಾಹ್ಮಣ ಭೂಮಾಲೀಕರು ಹಾಗೂ ಒಕ್ಕಲು ಗೇಣಿದಾರರ ನಡುವೆ ಇದ್ದ ಆಂತರಿಕ ಬಾಂಧವ್ಯವನ್ನು ಸೂಚಿಸುವುದು. ಈ ಅವಧಿಯಲ್ಲಿ ನೀಡಲಾದ ಭೂಮಿಯನ್ನು ಭೋಗ್ಯಕ್ಕೆ ಪಡೆದ ಒಕ್ಕಲು ಸಾಗುವಳಿಗಾರರು ವಾರ್ಷಿಕವಾಗಿ ಒಂದು ನಿರ್ದಿಷ್ಟ ಪ್ರಮಾಣದ ಮೊತ್ತವನ್ನು ಕೊಡುವುದಾಗಿ ಒಪ್ಪಂದ ಮಾಡಿಕೊಂಡಿದ್ದರು. ಹಾಗೂ ಇದನ್ನು ಯಾವುದೇ ಕಾರಣದಿಂದಲೂ ಬದಲಾಯಿಸುವಂತಿರಲಿಲ್ಲ. ಇದು ಬ್ರಾಹ್ಮಣ ಭೂಮಾಲೀಕರು ಹಾಗೂ ಶೂದ್ರ ಒಕ್ಕಲಿರಿಬ್ಬರಿಗೂ ಬಹಳ ಪ್ರಯೋಜನಕಾರಿಯಾಗಿತ್ತು. ಬ್ರಾಹ್ಮಣ ಭೂಮಾಲೀಕರಿಗೆ ನಗದು ಅಥವಾ ವಸ್ತುವಿನ ರೂಪದಲ್ಲಿ ಒಂದು ನಿರ್ದಿಷ್ಟವಾದ ಉತ್ಪನ್ನದ ಪಾಲನ್ನು ನೀಡುವ ಭರವಸೆಯನ್ನು ನೀಡಲಾಗಿತ್ತು. ಇನ್ನೊಂದೆಡೆಯಲ್ಲಿ ಒಕ್ಕಲಿನವರು ವಾರ್ಷಿಕವಾಗಿ ತಾವು ಎಷ್ಟು ಸಿದ್ದಾಯವನ್ನು ನೀಡಬೇಕಾಗಿತ್ತು ಎಂಬುದನ್ನು ಚೆನ್ನಾಗಿ ಅರಿತಿದ್ದಿರು. ಒಕ್ಕಲಿನವರು ನಿರ್ಧರಿಸಿದ್ದ ಸಿದ್ದಾಯ ಪ್ರಮಾಣವನ್ನು ಅವರು ಉಳಿಸಿಕೊಂಡಿದ್ದರು. ಉತ್ತಮ ಏಳ್ಗೆಯ ಸಂದರ್ಭಗಳಲ್ಲಿ ಸಿದ್ದಾಯ ಭೋಗ್ಯದ ಷರತ್ತುಗಳು ಅವರಿಗೆ ಉತ್ತೇಜನಕಾರಿಗಳಾಗಿ ಸಂಭವಿಸುತ್ತಿದ್ದವು. ಆದರೆ ಯಾವುದೇ ಅನಿರೀಕ್ಷಿತ ಸಂದರ್ಭಗಳಿಂದಾಗಿ ನಷ್ಟವುಂಟಾದರೆ ಈ ಮೊದಲೇ ತೀರ್ಮಾನವಾಗಿದ್ದಂತೆ ಒಕ್ಕಲಿನವರು ಸಿದ್ದಾಯದ ಪ್ರಕಾರವಾಗಿ ಅದೇ ಪ್ರಮಾಣದ ಗೇಣಿ (ತೆರಿಗೆ)ಯನ್ನು ನೀಡಬೇಕಾಗಿತ್ತು.

ಸೋಮನಾಥಪುರದಲ್ಲಿ ಸಿದ್ದಾಯವನ್ನು ಇಡೀ ಒಂದು ಹಳ್ಳಿಗೆ ಸೇರಿಸಿ ವಿಧಿಸಲಾಗುತ್ತಿತ್ತು. ಸಿದ್ದಾಯವನ್ನು ನೀಡುತ್ತಿದ್ದ ಹಳ್ಳಿಗಳನ್ನು ಸೋಮನಾಥಪುರ ದೇವಾಲಯ ಹಾಗೂ ಅಗ್ರಹಾರಕ್ಕೆ ಸೇರಿಸಲಾಗಿತ್ತು. ಸಿದ್ದಾಯವನ್ನು ನಗದಿನ ರೂಪದಲ್ಲಿ ಸಂಗ್ರಹಿಸಲಾಗುತ್ತಿತ್ತು. ಈ ರೀತಿಯಾಗಿ ಒಂದು ಶಾಸನವು ಹೇಳುವಂತೆ ಸೋಮನಾಥಪುರ ದೇವಾಲಯ ಸಮುಚ್ಚಯಕ್ಕೆ ಸೇರಿದ್ದ ಕಿರು ಹೊಂಗೂರಿನಿಂದ ಸಂಗ್ರಹಿಸಲಾಗಿದ್ದ ಸಿದ್ದಾಯವು ವಾರ್ಷಿಕವಾಗಿ 193 ಗದ್ಯಾಣವನ್ನು ಹಾಗೂ ಎರಡು ಹಾಗಗಳನ್ನು ಒಳಗೊಂಡಿತ್ತು.

ನಿಡುಘಟ್ಟ ಹಾಗೂ ಚೋಳೇನಹಳ್ಳಿ ಎಂಬ ಎರಡು ಗ್ರಾಮಗಳ ಒಟ್ಟು ಆದಾಯವನ್ನು ದಾಖಲಿಸುತ್ತಿರುವ ಸಂದರ್ಭದಲ್ಲಿ "ಶಾಸನದ ಮರ್ಯಾದವು ನಿರ್ಧರಿಸಿದಂತೆ ಆದಾಯವು 250 ಗದ್ಯಾಣಗಳು ಎಂದು ಶಾಸನವು ಉಲ್ಲೇಖಿಸುತ್ತದೆ". ಈ ಪದದ ಪ್ರಾಮುಖ್ಯತೆಯ ಬಗ್ಗೆ ಪ್ರಶ್ನೆ ಉದ್ಭವಿಸುತ್ತದೆ. ಬಹುಶಃ ಈ ಪದದ ಅರ್ಥ ಪುರಾತನ ವ್ಯವಸ್ಥೆಯ ಪ್ರಕಾರ ಎಂದಾಗುತ್ತದೆ. ಶಾಸನ ಎಂದರೆ ವ್ಯವಸ್ಥೆ ಹಾಗೂ ಮರ್ಯಾದ ಅಂದರೆ ಸಂಪ್ರದಾಯ ಎಂದರ್ಥ.

ಉದಾಹರಣೆಗೆ ಶಾಸನಗಳಲ್ಲಿ ನಾವು ಪೂರ್ವ ಮರ್ಯಾದದ ಬಗ್ಗೆ ತಿಳಿಯುತ್ತೇವೆ. ಇದು ಹಿಂದಿನ ಸಂಪ್ರದಾಯದ ಸ್ಥಾಪನೆಯನ್ನು ಎತ್ತಿ ಹೇಳುತ್ತದೆ. ಈ ಸಂದರ್ಭದಲ್ಲಿ ಶಾಸನ ಮರ್ಯಾದವು ಹೇಳುವಂತೆ ಸರ್ಕಾರವು ನಿಶ್ಚಯಿಸಿದ ಪ್ರಮಾಣದಲ್ಲೇ ಎರಡು ಗ್ರಾಮಗಳು ನೀಡಬೇಕಾಗಿತ್ತು.

ಕ್ರಿ.ಶ. 1269ರ ಒಂದು ಶಾಸನದಲ್ಲಿ ಎರಡು ಬಗೆಯ ತೆರಿಗೆಗಳನ್ನು ಉಲ್ಲೇಖಿಸಲಾಗಿದೆ. ಅವುಗಳೇನೆಂದರೆ ಶೇಷ ಹಾಗೂ ಅಪೂರ್ಬಾಯ ದೇವಾಲಯದ ನೆರವಿಗೆಂದು ಸಂಗ್ರಹಿಸಲಾಗುತ್ತಿದ್ದ ಒಂದು ಸ್ಥಳೀಯ ತೆರಿಗೆ ಶೇಷ ಎಂಬುದು ಸೂಚಿಸಬಹುದು. ಅಪೂರ್ಬಾಯದ ಬಗ್ಗೆ ಹೇಳುವುದಾದಲ್ಲಿ ಇದೊಂದು ಜೋಡಿ ಅಪೂರ್ವ ಹಾಗೂ ಆಯ ಎಂಬುವುಗಳ ಸಂಗಮವಾಗಿದೆ, ಅಪೂರ್ವ ಎಂದರೆ ಅಪರೂಪ ಹಾಗೂ ಆಯ ಎಂದರೆ ತೆರಿಗೆ ಎಂದಾಗುತ್ತದೆ. ಇದನ್ನು ಬಹುಶಃ ನಿರ್ದಿಷ್ಟ ಸಂದರ್ಭಗಳಲ್ಲಿ ವಿಧಿಸಲಾಗುತ್ತಿತ್ತು ಹಾಗೂ ಇದನ್ನು ನಿರಂತರವಾಗಿ ವಿಧಿಸುತ್ತಿರಲಿಲ್ಲ.

ದೇವಾಲಯದ ಗೇಣಿದಾರರು ನೀಡಬೇಕಾಗಿದ್ದ ಒಂದು ಹೆಚ್ಚುವರಿ ತೆರಿಗೆಯು ಇದಾಗಿತ್ತು. ಇನ್ನೊಂದು ಶಾಸನವು ಸೋಮನಾಥಪುರ ಹಳ್ಳಿಗಳ ಮೇಲೆ ವಿಧಿಸಲಾದ ಪೂರ್ಬಾಯದ ಬಗ್ಗೆ ಉಲ್ಲೇಖವನ್ನು ನೀಡುತ್ತದೆ. ಇದರಲ್ಲಿ ಕುತೂಹಲದಿಂದ ಸಂಗತಿಯೇನೆಂದರೆ ಇದನ್ನು ನಾಡ ಮರ್ಯಾದೆ ಅಥವಾ ನಾಡಿನ ಪದ್ಧತಿಯ ಅನುಗುಣದ ಆಧಾರದ ಮೇಲೆ ನಿರ್ಧರಿಸಿ ಸಂಗ್ರಹಿಸಲಾಗುತ್ತಿತ್ತು.

ಸೋಮನಾಥಪುರವು ಕೇವಲ ದೇವಾಲಯ ಪಟ್ಟಣವಲ್ಲದೆ ಒಂದು ವ್ಯಾಪಾರ ನಗರವು ಕೂಡ ಆಗಿತ್ತು. ಈ ಒಂದು ಅಭಿಪ್ರಾಯಕ್ಕೆ ಬರಲು ಕಾರಣವೇನೆಂದರೆ ದೇವಾಲಯದ ಆಚರಣೆಗಳು ಹಾಗೂ ವಿಧಿಗಳಲ್ಲಿ ದೇವಾಲಯಗಳಲ್ಲಿ ಬಳಸಲಾಗುತ್ತಿದ್ದ ವಸ್ತುಗಳ ಒಂದು ವಿಸ್ತೃತ ಪಟ್ಟಿಯಾಗಿದೆ. ಶಾಸನದಲ್ಲಿ ಹೇಳಲಾಗಿರುವ ಎಲ್ಲಾ ವಸ್ತುಗಳನ್ನು ಖಂಡಿತ ಸೋಮನಾಥಪುರ ಉತ್ಪಾದಿಸುತ್ತಿರಲಿಲ್ಲ. ಆದ್ದರಿಂದ ಸೋಮನಾಥಪುರವು ನಾನಾ ಬಗೆಯ ಬಟ್ಟೆ, ಉಪ್ಪು, ಸಾಂಬಾರ ಪದಾರ್ಥಗಳು ಎಣ್ಣೆ ಹಾಗೂ ಆಭರಣಗಳಂತಹ ಪದಾರ್ಥಗಳನ್ನು ಬಹಳ ದೊಡ್ಡ ಪ್ರಮಾಣದಲ್ಲಿ ಆಮದು ಮಾಡಿಕೊಳ್ಳುತ್ತಿತ್ತು. ಈ ಸನ್ನಿವೇಶದಲ್ಲಿ ಸೋಮನಾಥಪುರದ ಶಾಸನದಲ್ಲಿ ಕಂಡುಬರುವ ಶಾಸನದ ಪಠ್ಯದಲ್ಲಿ ಕಂಡುಬರುವ ಒಂದು ಪದವನ್ನು ಇಲ್ಲಿ ಉಲ್ಲೇಖಿಸುವುದು ಬಹಳ

ಅವಶ್ಯಕವಾಗಿದೆ. ಸ್ಥಳಗಳಾಯಗಳನು ಎಂಬ ಪದವು ಹಲವಾರು ಪದಾರ್ಥಗಳ ಮೇಲೆ ವಿಧಿಸಲಾಗುತ್ತಿದ್ದ ಆಮದು ಹಾಗೂ ರಫ್ತು ತೆರಿಗೆಯನ್ನು ಸೂಚಿಸುತ್ತದೆ. ಇದರ ಜೊತೆ ಸ್ಥಳಗಳ ಸುವರ್ಣಾಯ ಎಂಬ ಪದವು ಆ ಸ್ಥಳಗಳ ಚಿನ್ನದ ಮುಖಾಂತರ ಬರುತ್ತಿದ್ದ ಕಂದಾಯದ ಬಗ್ಗೆ ಉಲ್ಲೇಖವನ್ನು ನೀಡುತ್ತದೆ. ಈ ರೀತಿಯಾಗಿ ಆಮದು ಹಾಗೂ ರಫ್ತಿನ ಮೇಲೆ ವಿಧಿಸಲಾಗುತ್ತಿದ್ದ ತೆರಿಗೆಯನ್ನು ಚಿನ್ನದ ನಾಣ್ಯಗಳ ಮೂಲಕ ಸಂಗ್ರಹಿಸಲಾಗುತ್ತಿತ್ತು. ಆ ಸ್ಥಳದಿಂದ ಬರುತ್ತಿದ್ದ ಎಲ್ಲಾ ಬಗೆಯ ಆದಾಯವನ್ನು ಸರ್ವಪ್ರಾಪ್ತಿ ಎಂದೇ ಕರೆಯಲಾಗುತ್ತಿತ್ತು. ಆದಾಗ್ಯೂ ಕ್ರಿ.ಶ. 1497ರ ಸೋಮನಾಥಪುರ ಶಾಸನವೊಂದು ಇದರ ಬಗ್ಗೆ ಉಲ್ಲೇಖವನ್ನು ನೀಡುತ್ತದೆ.

### 7.4 ಕೈಗಾರಿಕೆಗಳು

ಸೋಮನಾಥಪುರವು ಭೂ ಕೊಡುಗೆ ಹಾಗೂ ಧನ ಸಹಾಯದಿಂದಾಗಿ ತಮ್ಮದೇ ಆದ ಐತಿಹಾಸಿಕ ಪ್ರೋತ್ಸಾಹವನ್ನು ಹೊಂದಿದ್ದ ಅನೇಕ ದೇವಾಲಯಗಳು ಹಾಗೂ ದೇವಾಲಯಗಳಿಗೆ ಹೊಂದಿಕೊಂಡಂತೆ ಇದ್ದ ಬಹಳಷ್ಟು ಸಂಖ್ಯೆಯ ಬ್ರಾಹ್ಮಣರಿಂದಾಗಿ ಕೃಷಿ ಹಾಗೂ ಕೃಷಿಯೇತರ ಉತ್ಪನ್ನಗಳಿಗೆ ಹೆಚ್ಚು ಬೇಡಿಕೆ ಉಂಟಾಯಿತು. ಆರ್ಥಿಕ ದೃಷ್ಟಿಯಿಂದ ಸೋಮನಾಥಪುರ ದೇವಾಲಯವು ಒಂದು ದೊಡ್ಡ ಅನುಭೋಗಿಯಾಗಿ ಪರಿಗಣಿಸಬಹುದು. ಆ ಸ್ಥಳವು ಹಲವು ಶಾಸನಗಳು ಅಲ್ಲಿನ ಕೆಲವು ಆರ್ಥಿಕ ಚಟುವಟಿಕೆಗಳ ಬಗ್ಗೆ ಒಂದು ಅಂತರ್ ನೋಟವನ್ನು ಒದಗಿಸಿ ಕೊಡುತ್ತದೆ.

ದೇವಾಲಯಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಬಳಸಲ್ಪಡುತ್ತಿದ್ದ ಪ್ರಮುಖ ವಸ್ತುವು ಎಣ್ಣೆಯಾಗಿತ್ತು. ಶಾಸನವು ಹೇಳುವಂತೆ ಎಣ್ಣೆಯನ್ನು ದೀವಟಿಗೆ ಎಣ್ಣೆ ಎಂದು ಕರೆಯಲಾಗುತ್ತಿತ್ತು. ಎಳ್ಳು ಹಾಗೂ ತುಪ್ಪದ ಎಣ್ಣೆಯನ್ನು ಈ ಉದ್ದೇಶದಿಂದ ಬಳಸಲಾಗುತ್ತಿತ್ತು ಎಂಬುದನ್ನು ಶಾಸನಗಳು ತಿಳಿಸುತ್ತದೆ. ಶಾಸನದಲ್ಲಿ ಒಂದು ಕಡೆ ದೇವಾಲಯಗಳು ಸುಮಾರು 95 ಸಾಲಗೆಗಳು, 18 ಕೊಳಗಗಳು ಹಾಗೂ ಎರಡು ಬಳ್ಳದಷ್ಟು ಎಣ್ಣೆಯನ್ನು ಉಪಯೋಗಿಸುತ್ತಿದ್ದವು. ಇನ್ನೂ ಮುಂದುವರೆದಂತೆ ಈ ಪ್ರಮಾಣದ ಎಣ್ಣೆಯನ್ನು 379 ಸಾಲಗೆಗಳು ಹಾಗೂ 14 ಕೊಳಗ ಎಳ್ಳಿನಿಂದ ತೆಗೆಯಲಾಯಿತೆಂದು ದಾಖಲೆಯನ್ನು ಒದಗಿಸಲಾಗಿದೆ.

ಈಗಿರುವ ಪ್ರಶ್ನೆಯೆಂದರೆ ಸೋಮನಾಥಪುರವು ಎಳ್ಳಿನಿಂದ ಎಣ್ಣೆಯನ್ನು ತೆಗೆಯಲು ಯಾವುದಾದರೂ ಸೌಲಭ್ಯಗಳನ್ನು ಹೊಂದಿತ್ತೆ? ಎಂಬುದು ಈ ಪ್ರಶ್ನೆಗೆ ಸೋಮನಾಥಪುರ ದೇವಾಲಯ ಸಂಕೀರ್ಣದಲ್ಲಿ ಎಣ್ಣೆ ಗಿರಣಿಗಳು ಸ್ಥಾಪನೆಗೊಂಡಿದ್ದರ ಬಗ್ಗೆ ಸೋಮನಾಥಪುರದ ಸುತ್ತಮುತ್ತ ದೊರೆತಿರುವ ಶಾಸನಗಳಿಂದ ಮಾಹಿತಿಯನ್ನು ಪಡೆಯಬಹುದು. ಬಹಳ ಹಿಂದಿನ ಕಾಲದಿಂದಲೂ ಕರ್ನಾಟಕದಲ್ಲಿ ದೇವಾಲಯಗಳಿಗೆ ಎಣ್ಣೆ ಗಿರಣಿಗಳನ್ನು ದಾನ ಮಾಡುವುದು ಧರ್ಮದ ಕಾಯಕವೇ ಎಂದು ನಂಬಲಾಗಿತ್ತು. ಸೋಮನಾಥಪುರದಲ್ಲಿನ ದೇವಾಲಯ ಸಂಕೀರ್ಣವು ಬಹಳ ಪ್ರಮಾಣದ ಎಣ್ಣೆಯನ್ನು ಅನುಭೋಗಿಸುವ ಸಾಮರ್ಥ್ಯವನ್ನು ಹೊಂದಿದ್ದರಿಂದ ಎಣ್ಣೆ ಗಿರಣಿಗಳು ವಾಸ್ತವವಾಗಿ ಅಸ್ತಿತ್ವದಲ್ಲಿದ್ದವು.

ಉದಾಹರಣೆಗೆ ಮೂರನೇ ನರಸಿಂಹನ ಕಾಲದ್ದೆಂದು ಹೇಳಲಾದ ಒಂದು ಶಾಸನವು ಹೇಳುವಂತೆ ಓಜಮಂಗಲದ ಕೆಲವು ಗೌಡರು ಆ ಸ್ಥಳದಲ್ಲಿ ಗಾನ ಎಂಬ ಎಣ್ಣೆ ಗಿರಣಿಯನ್ನು ಸ್ಥಾಪಿಸಿದರು. ಇದೇ ರೀತಿಯಾಗಿ ಚಮರಾಜನಗರ ತಾಲ್ಲೋಕಿನಲ್ಲಿ ಆಲೂರು ಒಂದು ದೊಡ್ಡ ವ್ಯಾಪಾರ ಕೇಂದ್ರವಾಗಿದ್ದು ತೆಂಕಣ ಅಯ್ಯಾವೊಳೆ ಅಥವಾ ದಕ್ಷಿಣ ಅಯ್ಯಾವೊಳೆ ಎಂದು ಕರೆಯಲ್ಪಡುತ್ತಿತ್ತು. ಅಯ್ಯಾವೊಳೆಯು ಅನಾದಿ ಕಾಲದಿಂದಲೂ ವರ್ತಕ ಸಂಘಗಳ ಒಕ್ಕೂಟದ ಒಂದು ಪ್ರಮುಖ ಕೇಂದ್ರವಾಗಿತ್ತು ಹಾಗೂ 500 ಸ್ವಾಮಿಗಳು ಅಯ್ಯಾವೊಳೆ ಎಂದು ಕರೆಯಲ್ಪಡುತ್ತಿತ್ತು. ಈ ಮಾದರಿಯಲ್ಲೇ ಸೋಮನಾಥಪುರದ ಬಳಿಯ ಆಲೂರನ್ನು ದಕ್ಷಿಣ ಅಯ್ಯಾವೊಳೆ ಎಂದು ಕರೆಯಲಾಗುತ್ತಿತ್ತು. ಈ ವ್ಯಾಪಾರ ಕೇಂದ್ರದಲ್ಲಿ ದೊಡ್ಡ ಸಂಖ್ಯೆಯ ತೈಲಿಗರು ಬಂದು ನೆಲೆಸಿದ್ದರು ಹಾಗೂ ಅವರು ದೇವಾಲಯಗಳಿಗೆ ದಾನ ಮಾಡುವಷ್ಟು ಶ್ರೀಮಂತರಾಗಿದ್ದರು. ಆದ್ದರಿಂದ ಸೋಮನಾಥಪುರದ ಸುತ್ತಮುತ್ತ ಎಣ್ಣೆ ಗಿರಣಿಯು ಉತ್ತಮವಾಗಿ ಸ್ಥಾಪನೆಗೊಂಡಿತ್ತು. ಹಾಗೂ ಪ್ರತ್ಯೇಕವಾದ ತೈಲಿಗರ ಒಂದು ಪಂಗಡವು ಕೇವಲ ದೇವಾಲಯಕ್ಕೆ ಮಾತ್ರವಲ್ಲದೆ ಆ ಪ್ರದೇಶದ ಪಟ್ಟಣ ಹಾಗೂ ಗ್ರಾಮಗಳಿಗೂ ಎಣ್ಣೆಯನ್ನು ಪೂರೈಕೆ ಮಾಡುತ್ತಿದ್ದರು.

ದೇವಾಲಯ ಹಾಗೂ ಅಲ್ಲಿದ್ದ ಜನರಿಬ್ಬರಿಗೂ ಅವಶ್ಯಕವಾಗಿದ್ದ ಇನ್ನೊಂದು ಪ್ರಮುಖ ವಸ್ತುವೆಂದರೆ ಅದು ಉಪ್ಪಾಗಿತ್ತು. ಮೂರನೇ ನರಸಿಂಹನ ಆಳ್ವಿಕೆಯದ್ದೆಂದು ಹೇಳಲಾದ ಕ್ರಿ.ಶ. 1283ರ ಒಂದು ಶಾಸನವು ವೃತ್ತಿಪರ ಉಪ್ಪು ತಯಾರಿಕರಾಗಿದ್ದ ಉಪ್ಪಿಳಿಗರ ಬಗ್ಗೆ ಒಂದು

ಉಲ್ಲೇಖವನ್ನು ನೀಡುತ್ತದೆ. ಅವರನ್ನು ಶಾಸನದಲ್ಲಿ ಬೇಸ-ಒಕ್ಕಲು ಎಂದು ಕರೆಯಲಾಗಿದೆ. ತೈಲಿಗರ ಹಾಗೆಯೇ ಉಪ್ಪಿಳಿಗರೂ ಕೂಡ ಆ ಪ್ರದೇಶದಲ್ಲಿ ಉಪ್ಪನ್ನು ಪೂರೈಸುತ್ತಿದ್ದರು.

ಸೋಮನಾಥಪುರದ ಶಾಸನಗಳ ಅಧ್ಯಯನದಿಂದ ಉತ್ತರ ಹಾಗೂ ದಕ್ಷಿಣಗಳೆರಡಲ್ಲೂ ಸಂಬಂಧವನ್ನು ಹೊಂದಿದ ಒಂದು ನಗರ ಕೇಂದ್ರವಾಗಿತ್ತು ಎಂಬ ವಿಷಯವನ್ನು ಬೆಳಕಿಗೆ ತರುತ್ತದೆ. ಸೋಮನಾಥಪುರವನ್ನು ನಿಜವಾಗಿಯೂ ಗ್ರಾಮವೆಂದು ಹೇಳಲಾಗುವುದಿಲ್ಲ. ಅದೊಂದು ಪುರ ಅಥವಾ ಪಟ್ಟಣವಾಗಿತ್ತು. ಅದರ ನಗರ ವೈಶಿಷ್ಯಗಳು ಮೂರು ಮೂಲಗಳಿಂದ ನಿಯೋಜಿತವಾಗಿದ್ದಿತು. 1. ದೇವಾಲಯಗಳ ಒಂದು ಸಮುಚ್ಚಯದ ಅಸ್ಥಿತ್ವದಿಂದಾಗಿ 2. ದೊಡ್ಡ ಸಂಖ್ಯೆಯಲ್ಲಿ ನೆಲೆಸಿದ್ದ ಕೃಷಿಯೇತರ ಜನಸಂಖ್ಯೆ ಹಾಗೂ 3. ದೇವಾಲಯ ಸಮುಚ್ಚಯಕ್ಕೆ ಬಾಕಾಗಿದ್ದ ವಿವಿಧ ಬಗೆಯ ಪದಾರ್ಥಗಳನ್ನು ಸ್ಥಳೀಯವಾಗಿ ಉತ್ಪಾದಿಸದೆ ಇದ್ದರಿಂದ ಉಂಟಾದ ಬೇಡಿಕೆಯಿಂದಾಗಿ ಸೋಮನಾಥಪುರವೊಂದು ಪಟ್ಟಣವಾಗುವ ಸಂಭವವನ್ನು ಸೃಷ್ಟಿಸಿಕೊಂಡಿತು. ಉದಾಹರಣೆಗೆ ಶಾಸನವೊಂದು ಸೋಮನಾಥಪುರದಲ್ಲಿ ಅನುಭೋಗಿಸಲಾಗುತ್ತಿದ್ದ ಕೃಷಿಯೇತರ ಉತ್ಪನ್ನಗಳ ಈ ಕೆಳಕಂಡ ಒಂದು ಪಟ್ಟಿಯು ಉಲ್ಲೇಖವನ್ನು ನೀಡುತ್ತದೆ.

1. ಮುಕ್ಕೊಡೆ ಮತ್ತು ಹಂಜಾರ ಅಥವಾ ಛತ್ರಿ 2. ಛತ್ರಿಯ ವಸ್ತ್ರ 3. ಚೌರಿ 4. ಕಸ್ತೂರಿ 5. ಹಳದಿ 6. ಗೋಚೋರ್ಣ 7. ಜಾರ 8. ಬಿಬ್ಬಲು (ಬಿದಿರಿನ ಮುಚ್ಚಳ) 9. ಹೆಡಗೆ 10. ಕೇಸರು (ಚೌಕಾಕಾರದ ಹೆಡಗೆ) 11. ಬಟ್ಟೆಗಳ ವಿವಿಧ ಬಗೆಯ ವಸ್ತ್ರಗಳು 12. ರೇಷ್ಮೆ ಹಾಗೂ ಅರಳೆ ಸೀರೆಗಳು.

ಈ ಕೆಳಕಂಡ ಕೃಷಿ ಉತ್ಪನ್ನಗಳನ್ನು ದೇವಾಲಯ ಸಮುಚ್ಚಯದಲ್ಲಿ ಕೊಂಡುಕೊಳ್ಳಲಾಗುತ್ತಿತ್ತು.
1. ತುಪ್ಪ 2. ಮೊಸರು 3. ಸೀಗೆಕಾಯಿಪುಡಿ 4. ಭತ್ತ 5. ಹೆಸರುಕಾಳು 6. ಕಾಳು ಮೆಣಸು 7. ವಡ್ಡ ಮಧುರ ಕಾಯಿ 8. ಎಣ್ಣೆ 9. ಗೋಧಿ 10. ಉದ್ದು 11. ತೊಗರಿ 12. ಸೌದೆ 13. ಅರಿಶಿನ 14. ಏಲಕ್ಕಿ 15. ಚಂದನ 16. ಎಳ್ಳು 17. ಬೆಲ್ಲ 18. ಅಡಿಕೆ 19. ಅಕ್ಕಿ.

ಇದರ ಜೊತೆಯಲ್ಲಿ ಮೇಲಿನ ಪದಾರ್ಥಗಳಿಗೆ ವಿಧಿಸಲಾಗುತ್ತಿದ್ದ ಧಾರಣೆಯನ್ನು ಶಾಸನಗಳಲ್ಲಿ ನೀಡಲಾಗಿದೆ.

1) **ತುಪ್ಪ**: ಒಂದು ಗದ್ಯಾಣದಿಂದ ಎರಡು ಕೊಳಗ ತುಪ್ಪವನ್ನು 103 ಗದ್ಯಾಣ ಹಾಗೂ ಎರಡು ಹಣದಿಂದ 25 ಸಾಲಗೆ, 15 ಕೊಳಗ, 3 ಬಳ್ಳ, 2 ಮಣ ತುಪ್ಪವನ್ನು ಕೊಂಡುಕೊಳ್ಳಬಹುದಾಗಿತ್ತು.

2) **ಮೊಸರು**: ಮೊಸರನ್ನು ಸಾಲಗೆ, ಕೊಳಗ ಹಾಗೂ ಬಳ್ಳಗಳಲ್ಲಿ ಅಳೆಯಲಾಗುತ್ತಿತ್ತು. 4 ಸಾಲಗೆ ಮೊಸರಿನ ಬೆಲೆಯು 1 ಗದ್ಯಾಣಕ್ಕೆ ಸಮವಾಗಿತ್ತು.

3) **ಅಡಿಕೆಕಾಯಿ**: 10 ಗದ್ಯಾಣದಿಂದ 1 ಲಕ್ಷ ಅಡಿಕೆಕಾಯಿ ದೊರೆಯುತ್ತಿದ್ದವು.

4) **ಛತ್ರ**: 5 ಸಾಲಗೆ ಭತ್ತಕ್ಕೆ 1 ಗದ್ಯಾಣವು ಧಾರಣೆಯಾಗಿತ್ತು. ಈ ಪ್ರಮಾಣದಲ್ಲೇ 5555 ಸಾಲಗೆ, 14 ಕೊಳಗ, ಹಾಗೂ ಬಳ್ಳ ಭತ್ರದ ಬೆಲೆಯು 1111 ಗದ್ಯಾಣಗಳು, 1 ಹಣ, 1 ಅಡ್ಡ, 1 ಬೆಲೆಯಾಗಿದೆ.

5) **ಹೆಸರುಕಾಳು**: ಎರಡು ಸಾಲಗೆ ಹೆಸರುಕಾಳಿಗೆ ಬೆಲೆಯು 1 ಗದ್ಯಾಣವಾಗಿತ್ತು. ಈ ಪ್ರಮಾಣದಲ್ಲಿ 38 ಗದ್ಯಾಣಗಳಷ್ಟು ಬೆಲೆ ಬಾಳುವ ಹೆಸರನ್ನು ದೇವಾಲಯವು ಅನುಭೋಗಿಸುತ್ತಿತ್ತು.

6) **ಕಾಳು ಮೆಣಸು**: 1 ಗದ್ಯಾಣಕ್ಕೆ 5 ಕೊಳಗ ಕಾಲು ಮೆಣಸು ದೊರಕುತ್ತಿತ್ತು. ಇದೇ ದರದಲ್ಲಿ ಒಂದು ವರ್ಷದ ಅವಧಿಯಲ್ಲಿ ಅನುಭೋಗಿಸಲಾದ ಕಾಳು ಮೆಣಸಿನ ಮೌಲ್ಯವು 11 ಗದ್ಯಾಣ ಹಾಗೂ 7 ಹಣಗಳಾಗಿದ್ದವು.

7) **ಸೀಗೆಕಾಯಿ**: 1 ಗದ್ಯಾಣದಿಂದ 2 ಸಾಲಗೆ ಹಾಗೂ 10 ಕೊಳಗ ಸೀಗೆಕಾಯಿಪುಡಿ ದೊರೆಯುತ್ತಿತ್ತು.

8) **ಬಟ್ಟೆ**: ಒಂದು ವರ್ಷಕ್ಕೆ 5 ಹಣಗಳು ಹಾಗೂ 154 ವಸ್ತ್ರಗಳಿಗೆ 17 ಗದ್ಯಾಣಗಳಾಗಿದ್ದವು. 89 ಪಟ್ಟೆಗಳಿಗೆ 26 ಗದ್ಯಾಣಗಳು ಹಾಗೂ 7 ಹಣಗಳಾಗಿದ್ದವು. 1 ಬಟ್ಟೆಗೆ, ದರವು 3 ಹಣಗಳಾಗಿದ್ದವು.

9) **ಉಪ್ಪು**: ಒಂದು ಗದ್ಯಾಣದಿಂದ 1 ಸಲಗೆ ಹಾಗೂ 10 ಕೊಳಗ ಉಪ್ಪು ದೊರಕುತ್ತಿತ್ತು. 6 ಗದ್ಯಾಣ, 3 ಹಣ, 1 ಹಾಗ ಹಾಗೂ 1 ಬೆಲೆಯಿಂದ 9 ಸಾಲಗೆ ಹಾಗೂ 10 ಕೊಳಗ ಉಪ್ಪು ದೊರಕುತ್ತಿತ್ತು.

10) **ಎಳ್ಳು**: 2 ಸಾಲಗೆ 10 ಕಬಳಗ ಎಳ್ಳಿನ ಒಂದು ದರವು ಗದ್ಯಾಣವಾಗಿತ್ತು. 156 ಗದ್ಯಾಣ ಹಾಗೂ 7 ಹಣದಿಂದ 391 ಸಾಲಗೆ ಹಾಗೂ 15 ಕೊಳಗ ಎಳ್ಳು ದೊರಕುತ್ತಿತ್ತು.

ಸೋಮನಾಥಪುರ ದೇವಲಯ ಸಮುಚ್ಛಯದಲ್ಲಿ ಉಪಯೋಗಿಸಲಾಗುತ್ತಿದ್ದ (ಅನುಭೋಗಿಸಲಾಗುತ್ತಿದ್ದ) ನಾನಾ ಬಗೆಯ ಸಾಮಗ್ರಿಗಳ ಪಟ್ಟಿಯನ್ನು ಶಾಸನಗಳ ಅಧ್ಯಯನ ಆಧಾರದಿಂದ ಈ ಕೆಳಗೆ ನೀಡಲಾಗಿದೆ.

**ಅಕ್ಕಿಯ ಅನುಭೋಗ**

ಸೋಮನಾಥಪುರ ದೇವಾಲಯ ಸಮುಚ್ಛಯದಲ್ಲಿ ದೇವರಿಗೆ ಪ್ರತಿನಿತ್ಯ ಅರ್ಪಿಸುತ್ತಿದ್ದ ನೈವೇದ್ಯಕ್ಕಾಗಿ 5 ಸಾಲ, 16 ಕೊಳಗ, ಒಂದು ಬಳ್ಳ ಹಾಗೂ 3 ಮಣದಷ್ಟು ಅಕ್ಕಿಯನ್ನು ಬಳಸಲಾಗುತ್ತಿತ್ತು.

**ವಿವಿಧ ಉತ್ಪನ್ನದ ಬಳಕೆ**

**ಮೆಣಸು**: ಒಂದು ವರ್ಷದ ಅವಧಿಯಲ್ಲಿ ಇದರ ಅನುಭೋಗವು, 2 ಸಾಲಗ, 18 ಕೊಳಗ, 2 ಬಳ್ಳ ಹಾಗೂ 2 ಮಣಗಳಾಗಿದ್ದವು. ಪ್ರತೀ ದಿನಕ್ಕೊಮ್ಮೆ ಅನುಭೋಗವು 2 ಮಣ ಹಾಗೂ 2 ಸಾಲಗಗಳಾಗಿದ್ದವು.

**ವಡ್ಡಮಧುರಾಕಾಯಿ**: ಪ್ರತೀ ದಿವಸ ಎರಡು ಹಾಗಗಳಷ್ಟು ಉಪಯೋಗಿಸಲಾಗುತ್ತಿತ್ತು.

**ಗೋಧಿ**: ಎಲ್ಲಾ ಶುಭಕಾರ್ಯಗಳಲ್ಲೂ 4 ಗದ್ಯಾಣಗಳಷ್ಟು ಗೋಧಿಯನ್ನು ಉಪಯೋಗಿಸ ಲಾಗುತ್ತಿತ್ತು. 3 ಗದ್ಯಾಣಗಳಷ್ಟು ಬೆಲ್ಲ, 1 ಗದ್ಯಾಣಗಳಷ್ಟು ಉದ್ದು ತೊಗರಿ ಹಾಗೂ ಪಲ್ಲವಾಲಿಗೆ ಹಾಗೂ ಬೇಳೆಗೆ 1 ಗದ್ಯಾಣದಷ್ಟು ದರವನ್ನು ವಿಧಿಸಲಾಗುತ್ತಿತ್ತು.

ಸೀಗೆಪುಡಿಯನ್ನು ಪ್ರತೀ ವಾರದಲ್ಲಿ ಎರಡು ಕೊಳಗದಷ್ಟು ಪ್ರಮಾಣದಲ್ಲಿ ಉಪಯೋಗಿಸಲಾಗುತ್ತಿತ್ತು. 102 ದಿವಸಗಳಿಗೆ 10 ಸಾಲಗೆ ಹಾಗೂ 4 ಕೊಳಗದಷ್ಟನ್ನು ಉಪಯೋಗಿಸಲಾಗುತ್ತಿತ್ತು. ಈ ಪದಾರ್ಥದ ಮೇಲೆ ಪ್ರತೀ ವರ್ಷದಲ್ಲಿ 4 ಗದ್ಯಾಣ ಹಾಗೂ 1 ಹಣವನ್ನು ವ್ಯಯಿಸಲಾಗುತ್ತಿತ್ತು.

**ಸೌದೆ**: (ಪಠ್ಯ ಪುಟ 479) ಒಂದು ವರ್ಷಕ್ಕೆ ದೇವಾಲಯ ಸಮುಚ್ಛಯದ ಅಡಿಗೆ ಮನೆಯಲ್ಲಿ 75 ಗದ್ಯಾಣಗಳಷ್ಟು ಉರುವಲನ್ನು ಬಳಸಲಾಗುತ್ತಿತ್ತು.

ಒಂದು ತಿಂಗಳಿಗೆ 2 ಹಣದಷ್ಟು ಮೌಲ್ಯದ ಗಂಧದಕಡ್ಡಿಯನ್ನು (ಧೂಪವನ್ನು) ಬಳಸಲಾಗುತ್ತಿತ್ತು. ಇದೇ ರೀತಿಯಲ್ಲಿ 2 ಗದ್ಯಾಣಗಳು ಹಾಗೂ 5 ಹಣವನ್ನು ಇದೇ ಪದಾರ್ಥದ ಮೇಲೆ ವೆಚ್ಚ ಮಾಡಲಾಗುತ್ತಿತ್ತು.

ಪ್ರತೀ ದಿನಕ್ಕೆ 1 ಹಣದಷ್ಟು ಮೊತ್ತದ ಗಂಧದ ಹಿಟ್ಟನ್ನು ಉಪಯೋಗಿಸಲಾಗುತ್ತಿತ್ತು. ಒಂದು ವರ್ಷದಲ್ಲಿ 37 ಗದ್ಯಾಣ ಹಾಗೂ 5 ಹಣಗಳಷ್ಟು ಮೊತ್ತದ ಗಂಧದ ಹಿಟ್ಟನ್ನು ಉಪಯೋಗಿಸಲಾಗುತ್ತಿತ್ತು.

ಆರತಿ ಬೆಳಗಲು ಕರ್ಪೂರವನ್ನು ಉಪಯೋಗಿಸಲಾಗುತ್ತಿತ್ತು. ಪ್ರತೀ ದಿವಸದ ಬಳಕೆಯು 3 ಗದ್ಯಾಣಗಳ ತೂಕದಷ್ಟಿತ್ತು. 62 1/2 ಪಾಲುಗಳಷ್ಟು ತೂಕದವುಗಳಿಗೆ 7 ಗದ್ಯಾಣಗಳನ್ನು ನೀಡಬೇಕಾಗಿತ್ತು.

1) 1 ಗದ್ಯಾಣದಷ್ಟು ಮೌಲ್ಯದ ಅರಿಶಿನವನ್ನು ಪ್ರತೀ ದಿವಸ ಬಳಸಲಾಗುತ್ತಿತ್ತು. ಸಾದುವಿಗಾಗಿ 1 ಗದ್ಯಾಣವನ್ನು ಉಪಯೋಗಿಸಲಾಗುತ್ತಿತ್ತು. ಕುಡಿಯುವ ನೀರಿನಲ್ಲಿ ಉಪಯೋಗಿಸಲಾಗುತ್ತಿದ್ದ ಏಲಕ್ಕಿಗಾಗಿ 6 ಹಣಗಳನ್ನು ಬಳಸಲಾಗುತ್ತಿತ್ತು.

### 7.5 ದೇವರ ವಸ್ತ್ರ ವಿನ್ಯಾಸ

ಆದಿ ದೇವತೆಗಾಗಿ 4 ಸೀರೆಗಳು

5 ದೇವರುಗಳಿಗಾಗಿ 20 ಸೀರೆಗಳು

ಆ ಗುಡಿಯೊಳಗೆ ನೆಲೆಸಿದ್ದ 64 ದೇವತೆಗಳಿಗಾಗಿ 128 ಸೀರೆಗಳು ಯೋಗ ನಾರಾಯಣ ದೇವನಿಗಾಗಿ 2 ಸೀರೆಗಳು ಮೆರವಣಿಗೆಗೆ ಹೊರಡಿಸುತ್ತಿದ್ದ ದೇವತೆಗಾಗಿ 4 ಸೀರೆಗಳು ಒಟ್ಟಾರೆ 154 ಉಡುಪು ತೊಡುಪುಗಳು.

### 7.6 ಮುತ್ತಿಯ ಪಟ್ಟಿ ರೇಷ್ಮೆ ಬಟ್ಟೆ

ಆದಿ ದೇವತೆಗಳಿಗೆ 25 ಪಟ್ಟೆಗಳು ಗುಡಿಗಳಲ್ಲಿ ನೆಲೆಸಿದ್ದ 64 ದೇವತೆಗಳಿಗಾಗಿ 64 ಪಟ್ಟೆಗಳು ಯೋಗ ನಾರಾಯಣ ದೇವನಿಗಾಗಿ 1 ಪಟ್ಟೆ ಮೆರವಣಿಗೆಯಲ್ಲಿ ತರಲಾಗುತ್ತಿದ್ದ ದೇವರುಗಳಿಗಾಗಿ ನಾಲ್ಕು ಪಟ್ಟೆಗಳಿರುತ್ತಿದ್ದವು. ದೇವಾಲಯ ಸಮುಚ್ಛಯವು ವಾರ್ಷಿಕವಾಗಿ

3,30,000 ಅಡಿಕೆ ಕಾಯಿಗಳನ್ನು ಉಪಯೋಗಿಸುತ್ತಿತ್ತು ಹಾಗೂ ಇದರ ಹಣದ ಮೌಲ್ಯವು ಸರಿ ಸುಮಾರು ಮೂವತ್ತಮೂರು ಗದ್ಯಾಣಗಳಾಗಿದ್ದವು.

ಅನುಭೋಗಿ ಪದಾರ್ಥಗಳು ಹಾಗೂ ಮೇಲೆ ನೀಡಲಾದ ಅನುಭೋಗ ಹಾಗೂ ದರದ ಪಟ್ಟಿಯ ಮೂಲಕ ಅನೇಕ ಅಭಿಪ್ರಾಯಗಳನ್ನು ತಳೆಯಬಹುದು. ಮೊದಲನೆಯದಾಗಿ ಪ್ರಮುಖವಾಗಿ ಸೋಮನಾಥಪುರವು ನೀರಾವರಿ ಸಾಗುವಳಿ ಪ್ರದೇಶವಾಗಿದ್ದರೂ ದೇವಾಲಯದ ಆರಾಧನೆ, ಆಚರಣೆಗಳು ಹಾಗೂ ಹಲವು ಬಗೆಯ ವರ್ಗಗಳ ಜನಗಳ ಅನುಭೋಗಕ್ಕಾಗಿ ಅವಶ್ಯಕವಾಗಿದ್ದ ಎಲ್ಲಾ ಪದಾರ್ಥಗಳನ್ನು ಉತ್ಪಾದಿಸುತ್ತಿರಲಿಲ್ಲ. ಉದಾಹರಣೆಗೆ ಸಾಂಬಾರ ಪದಾರ್ಥಗಳು, ಅಡಿಕೆ ಹಾಗೂ ಹಲವು ಬಗೆಯ ವಸ್ತ್ರಗಳನ್ನು ಹೊರಭಾಗದಿಂದ ಆಮದು ಮಾಡಿ ಕೊಳ್ಳಬೇಕಾಗಿತ್ತು. ಈ ಮೂಲಕವಾಗಿ ಸೋಮನಾಥಪುರವು ಹೊಯ್ಸಳ ಹಾಗೂ ವಿಜಯನಗರ ಸಾಮ್ರಾಜ್ಯದಡಿಯಲ್ಲಿದ್ದ ದಕ್ಷಿಣ ಕರ್ನಾಟಕದ ಮಾರುಕಟ್ಟೆಗಳ ಜಾಲಕ್ಕೆ ಸಂಪರ್ಕವನ್ನು ಹೊಂದಿತ್ತು.

ಎರಡನೆಯದಾಗಿ ಅನುಭೋಗದ ಪಟ್ಟಿಯಿಂದ ಕೇಶವ ಹಾಗೂ ಪಂಚಲಿಂಗ ದೇವಾಲಯಗಳು ಅನುಭೋಗಿಸುತ್ತಿದ್ದ ಹಲವು ಪದಾರ್ಥಗಳ ಪ್ರಮಾಣದ ಬಗ್ಗೆ ಒಂದು ಪರಿಚಯವನ್ನು ತಿಳಿದುಕೊಳ್ಳಬಹುದಾಗಿದೆ. ಒಟ್ಟಾರೆ ವಿವಿಧ ಬಗೆಯ ಪದಾರ್ಥಗಳನ್ನು ಕೊಳ್ಳಲು 3402 ಗದ್ಯಾಣಗಳು ಹಾಗೂ ಮೂರು ಹಣಗಳನ್ನು ದೇವಾಲಯವು ವೆಚ್ಚ ಮಾಡಿತು. ಆದ್ದರಿಂದ ಸೋಮನಾಥಪುರದ ದೇವಾಲಯಗಳನ್ನು ಸುತ್ತಮುತ್ತಲ ಪ್ರದೇಶಗಳ ವರ್ತಕರುಗಳು ಉಚ್ಚ ಮಟ್ಟದಲ್ಲಿ ನೋಡುವಂತಾಯಿತು.

ಮೂರನೆಯದಾಗಿ ಬೆಲೆಯ ಪಟ್ಟಿಯು 13ನೇ ಶತಮಾನದಲ್ಲಿ ಆ ಸ್ಥಳದಲ್ಲಿದ್ದ ಮಾರುಕಟ್ಟೆ ಪರಿಸ್ಥಿತಿಗಳ ಬಗ್ಗೆ ಒಂದು ಸೂಕ್ಷ್ಮ ಪರಿಚಯವನ್ನು ನೀಡುತ್ತದೆ. ಈ ದರದ ಪಟ್ಟಿಯನ್ನು ಸೂಕ್ಷ್ಮವಾಗಿ ಅವಲೋಕಿಸಿ ನೋಡಿದರೆ ವಿಲಾಸೀ ಪದಾರ್ಥಗಳ ಬೆಲೆಯು ದುಬಾರಿಯಾಗಿದ್ದು ಕಂಡು ಬರುವುದು. ಆದರೆ ಸಾಂಬಾರ ಪದಾರ್ಥಗಳನ್ನು ಹೊರತಾಗಿಸಿ ಎಲ್ಲಾ ಕೃಷಿ ಉತ್ಪನ್ನಗಳು ಕಡಿಮೆ ದರವನ್ನು ಹೊಂದಿದ್ದವು. ಕಡೆಯದಾಗಿ ಆರ್ಥಿಕ ದೃಷ್ಟಿಯಿಂದ ಆ ಪ್ರದೇಶದ ದೇವಾಲಯ ಸಮುಚ್ಛಯವು ವರ್ತಕರಿಗೆ ಅವರು ತಮ್ಮ ವ್ಯಾಪಾರ ಕೋಟೆಗಳು ಹಾಗೂ ಇನ್ನಿತರ ಸೌಲಭ್ಯಗಳನ್ನು ಸ್ಥಾಪಿಸಿಕೊಳ್ಳಲು ಒಂದು ಉತ್ತೇಜನಕಾರಿ ಅಂಶವಾಗಿ ಕಂಡುಬಂದಿತು. ವಿಶೇಷ

ಸಂದರ್ಭಗಳಲ್ಲಿ ನಿರ್ದಿಷ್ಟವಾಗಿ ವಿವಿಧ ಬಗೆಯ ಉತ್ಸವಗಳಲ್ಲಿ ಹಲವು ಬಗೆಯ ಪದಾರ್ಥಗಳ ಬೆಲೆಯು ಸಾಮಾನ್ಯ ಸ್ಥಿತಿಗಿಂತ ಬಹಳಷ್ಟು ಹೆಚ್ಚಿರುತ್ತಿತ್ತು.

ಈ ಪ್ರದೇಶದ ಶಾಸನಗಳ ಹೆಚ್ಚಿನ ಅಧ್ಯಯನದಿಂದ ಕಂಡುಬರುವ ಇನ್ನೊಂದು ವೈಶಿಷ್ಟವು ದೇವಾಲಯ ಸಮುಚ್ಛಯದ ಆರ್ಥಿಕ ದೃಷ್ಟಿಕೋನವಾಗಿದೆ. ಈ ಪ್ರದೇಶದಲ್ಲಿನ ಕೇಶವ ಹಾಗೂ ಪಂಚಲಿಂಗ ದೇವಾಲಯಗಳು ದೊಡ್ಡ ಪ್ರಮಾಣದ ಉದ್ಯೋಗ ಸೃಷ್ಟಿಗಾರರಾಗಿ ಕಾರ್ಯ ನಿರ್ವಹಿಸುತ್ತಿದ್ದವು. ಈಗ ಕೆಳಗೆ ನೀಡಲಾಗುವ ಪಟ್ಟಿಯು ದೇವಾಲಯದ ಉದ್ಯೋಗಿಗಳ ಹುದ್ದೆ, ಪ್ರತೀ ವರ್ಗದ ಸಂಖ್ಯೆ, ವಾರ್ಷಿಕವಾಗಿ ಅವರು ಪಡೆಯುತ್ತಿದ್ದ ಸಂಬಳದ ಬಗ್ಗೆ ಒಂದು ಅಂತರ್ ನೋಟವನ್ನು ಒದಗಿಸಿಕೊಡುತ್ತದೆ. ಇವರನ್ನು ಪ್ರತಿಯೊಂದು ದೇವಾಲಯದ ಬಾಹತ್ತರ ನಿಯೋಗಿಗಳು ಅಥವಾ ಎಪ್ಪತ್ತೆರಡು ಅಧಿಕಾರಿಗಳು ಎಂದು ಕರೆಯಲ್ಪಡಲಾಗುತ್ತಿತ್ತು.

### 7.7 ಶಿವದೇವಾಲಯದ ಸಿಬ್ಬಂದಿ

| | ಹುದ್ದೆ | ಸಂಖ್ಯೆ | ವಾರ್ಷಿಕ ಸಂಬಳ |
|---|---|---|---|
| 1 | ಸ್ಥಾನಿಕರು | 6 | 72 ಗದ್ಯಾಣಗಳು |
| 2 | ಆಚಾರ್ಯರು | ? | 72 ಗದ್ಯಾಣಗಳು |
| 3 | ನಂಬಿಗಳು | 6 | 72 ಗದ್ಯಾಣಗಳು |
| 4 | ಸಿಂಗಾರಿಗರು ದೇವಾಲಯ (ಸಿಂಗರಿಸುವವರು) | ? | 36 ಗದ್ಯಾಣಗಳು |
| 5 | ಸಹಾಯಕರು | 6 | 24 ಗದ್ಯಾಣಗಳು |
| 6 | ಅಘವಾನಿಗಳು (ದೇವರಿಗೆ ನೀರನ್ನು ತರುತ್ತಿದ್ದವರು) | 6 | 24 ಗದ್ಯಾಣಗಳು |
| 7 | ಅಡುಗೆ ಭಟ್ಟರು | 5 | 24 ಗದ್ಯಾಣಗಳು |
| 8 | ಅಡುಗೆ ಮನೆ (ಪಾಕಶಾಲೆ) | ? | 24 ಗದ್ಯಾಣಗಳು |
| 9 | ಇಂದೇಯವಾರು (ಹಾರ ತಯಾರಿಸುವವರು) | 6 | 24 ಗದ್ಯಾಣಗಳು |
| 10 | ಸೇವಾಬೋವಭಟ್ಟಗೂಟರು | ? | 18 ಗದ್ಯಾಣಗಳು |
| 11 | ಖಜಾಂಚಿ | ? | 12 ಗದ್ಯಾಣಗಳು |
| 12 | ಅಡ್ಡಿಕರು (ಮೊಹರು) | ? | 12 ಗದ್ಯಾಣಗಳು |

| 13 | ಗ್ರಂಥ ಕುಡಿಮೀರ್‌ವರ್ (ಪರಿಮಳಭರಿತ ನೀರು ಸರಬರಾಜುಗಾರರು) | ? | 12 ಗದ್ಯಾಣಗಳು |
|---|---|---|---|
| 14 | ಚೌರಿ ಒಯ್ಯುವವರು | ? | 12 ಗದ್ಯಾಣಗಳು |
| 15 | ರಂಗವರ್ಲಿ ಕಾರ್ಮಿಕರು | ? | 12 ಗದ್ಯಾಣಗಳು |
| 16 | ಕರ್ಪೂರದಾರತಿಯವರು | ? | 8 ಗದ್ಯಾಣಗಳು |
| 17 | ಪುರಾಣ ಭಜನೆ | ? | 12 ಗದ್ಯಾಣಗಳು |
| 18 | ಹಾರತಯಾರಕರು | ? | 24 ಗದ್ಯಾಣಗಳು |
| 19 | ಅಂಗಾರಿಕರು (ಅಂಗರಕ್ಷಕರು) | 9 | 36 ಗದ್ಯಾಣಗಳು (4 9) |
| 20 | ಮುಖ್ಯ ಅಂಗರಕ್ಷಕ | 1 | 10 ಗದ್ಯಾಣಗಳು |
| 21 | ದೇವರ ಅಂಗರಕ್ಷಕ (ಹೆಸರಿನ) | 3 | 12 ಗದ್ಯಾಣಗಳು (3 4) |
| 22 | ಅವರ ಮುಖ್ಯಸ್ಥ | 1 | 6 ಗದ್ಯಾಣಗಳು |
| 23 | ನಾಗರಸ ನರ್ತಕರು ರಂಗಭೋಗ ಹಾಡುಗಾರರ ಮೊಬಾರಿಗಳು | ? | 30 ಗದ್ಯಾಣಗಳು |
| 24 | ದೇವಾಸಿಗರು ಸಹಾಯಕ | ? | 48 ಗದ್ಯಾಣಗಳು |
| 25 | ಕೊಥಾರಿ | 6 | 24 ಗದ್ಯಾಣಗಳು (6 4) |
| 26 | ಮರಿಯಾನ ಆಚಾರರು ಹಾಗೂ ಯೋಜ | ? | 12 ಗದ್ಯಾಣಗಳು |
| 27 | ಬಡಗಿ | ? | 2 ಗದ್ಯಾಣಗಳು |
| 28 | ಆಚಾರರು | ? | 24 ಗದ್ಯಾಣಗಳು |
| 29 | ಕುಂಬಾರರು | 3 | 12 ಗದ್ಯಾಣಗಳು (3 4) |
| 30 | ಕ್ಷೌರಿಕ | 1 (?) | 49 ಗದ್ಯಾಣಗಳು |
| 31 | ಅಗಸ | 1 (?) | 4 ಗದ್ಯಾಣಗಳು |

ಒಟ್ಟು ದೇವಾಲಯದ ಸಿಬ್ಬಂದಿಗೆ ವಾರ್ಷಿಕವಾಗಿ 936 ಗದ್ಯಾಣಗಳು

7.8 ವಿಷ್ಣುದೇವಾಲಯದ ಸಿಬ್ಬಂದಿ

| | ಹುದ್ದೆ | ಸಂಖ್ಯೆ | ವಾರ್ಷಿಕ ಸಂಬಳ |
|---|---|---|---|
| 1 | ವೈಷ್ಣವರು | 20 | 15 ಗದ್ಯಾಣಗಳು |
| 2 | ಆಚಾರ್ಯ | 1 | 20 ಗದ್ಯಾಣಗಳು |
| 3 | ಪೌರಾಣಿಕ (ಭಜನೆ) | 1 | 16 ಗದ್ಯಾಣಗಳು |
| 4 | ನಂಬಿಗಳು | ? | 126 ಗದ್ಯಾಣಗಳು |
| 5 | ನಂಬಿಗಳು | 1 | 12 ಗದ್ಯಾಣಗಳು |
| 6 | ಯೋಗಾನರಸಿಂಹ ದೇವರ ನಂಬಿ | 1 | 4 ಗದ್ಯಾಣಗಳು |
| 7 | ಐದು ಪ್ರಮುಖ ದೇವರುಗಳ ಅಲಂಕಾರ | 1 | 30 ಗದ್ಯಾಣಗಳು |
| 8 | ಸಹಾಯಕರು (ಒಬ್ಬನಿಗೆ 4 ಗದ್ಯಾಣ) | ? | 42 ಗದ್ಯಾಣಗಳು |
| 9 | ಪಂಚವಾರು (ಆಜ್ಞೆಯನ್ನು ಪರಿಪಾಲಿಸುವವ) | ? | 6 ಗದ್ಯಾಣಗಳು |
| 10 | ಹಡಗ | ? | 6 ಗದ್ಯಾಣಗಳು |
| 11 | ಕುಡಿಯುವ ನೀರಿನ ಪೂರೈಕೆ | ? | 6 ಗದ್ಯಾಣಗಳು |
| 12 | ಗಂಧದ ಸೇವೆ | ? | 6 ಗದ್ಯಾಣಗಳು |
| 13 | ಚಾಮರ ಬೀಸುವವರು | 1 | 6 ಗದ್ಯಾಣಗಳು |
| 14 | ಸೇನ ಬೋವ | 1 | 12 ಗದ್ಯಾಣಗಳು |
| 15 | ಮುದ್ರದ ಸೇವೆ (ಕೆಂಪು) | 2 | 12 ಗದ್ಯಾಣಗಳು |
| 16 | ಭಟ್ಟಗುಪ್ತು (ವಾದ್ಯತಂಡ) | 2 | 12 ಗದ್ಯಾಣಗಳು |
| 17 | ಮಂಗಳಾರತಿ ಮಾಡುವವರು | 2 | 16 ಗದ್ಯಾಣಗಳು |
| 18 | ರಂಗವಲ್ಲಿ ಹಿಟ್ಟಿನವರು | 4 | 16 ಗದ್ಯಾಣಗಳು |
| 19 | ಅಡುಗೆ ಭಟ್ಟರು | 10.5 | 42 ಗದ್ಯಾಣಗಳು |
| 20 | ಅಪ್ಪಾನೆ (ಅಧಿಕಾರಿಗಳು) | 5 | 20 ಗದ್ಯಾಣಗಳು |
| 21 | ಪಾಕಶಾಲೆಯ ಮೇಲ್ವಿಚಾರಣೆಯಲ್ಲಿದ್ದ ಪುರೋಹಿತರು | ? | 20 ಗದ್ಯಾಣಗಳು |
| 22 | ಮಾಲೆ ಜಾತಿಯ ಸೇವಕರು | 5 | 20 ಗದ್ಯಾಣಗಳು |

| 23 | ದೇವಸಿಗರು | 10 | 40 ಗದ್ಯಾಣಗಳು |
|---|---|---|---|
| 24 | ಕಟ್ಟಡ ನಿರ್ಮಾಪಕರು | 1 | 1 ಗದ್ಯಾಣಗಳು 1 ಹಣ |
| 25 | ನಾಗವಾಸ | ? | 300 ಗದ್ಯಾಣಗಳು |
| 26 | ಅಂಗರಕ್ಷಕ ಮುಖ್ಯಸ್ಥ | 1 | 10 ಗದ್ಯಾಣಗಳು |
| 27 | 17 ಸೇವಕರು (ಒಬ್ಬನಿಗೆ ತಲಾ 4 ಗದ್ಯಾಣ) | 17 | 68 ಗದ್ಯಾಣಗಳು |
| 28 | ದೇವರ ಅಂಗರಕ್ಷಕರ ಮುಖ್ಯಸ್ಥ (ಹೆಸರಿಸಿದ) | 1 | 6 ಗದ್ಯಾಣಗಳು |
| 29 | ಸೇವಕರು | 3 | 12 ಗದ್ಯಾಣಗಳು |
| 30 | ಛತ್ರ | | 200 ಗದ್ಯಾಣಗಳು |
| 31 | ಅಕ್ಕಸಾಲಿಗ | 1 | 4 ಗದ್ಯಾಣಗಳು |
| 32 | ಕುಂಬಾರರು | 3 | 12 ಗದ್ಯಾಣಗಳು |
| 33 | ಅಗಸರು | 1 | 4 ಗದ್ಯಾಣಗಳು |
| 34 | ಕ್ಷೌರಿಕ | 1 | 4 ಗದ್ಯಾಣಗಳು |

ಒಟ್ಟಾರೆ ಅಗ್ರಹಾರ ಪ್ರಸನ್ನ ಸೋಮನಾಥಪುರದಲ್ಲಿನ ದೇವಾಲಯಗಳನ್ನು ದೇವಾಲಯ ಸಿಬ್ಬಂದಿಯ ಮೂರು ವರ್ಗಗಳು ನಿಯಂತ್ರಿಸುತ್ತಿದ್ದವು.

1) ಆಚಾರ್ಯರು
2) ವೈಷ್ಣವರು
3) ನಂಬಿಗಳು

ಸಾಮಾನ್ಯವಾಗಿ ಈ ದೇವಾಲಯಗಳ ದಿನನಿತ್ಯದ ನಿರ್ವಹಣೆಯ ಕಾರ್ಯದಲ್ಲಿ ಹೊಯ್ಸಳ ರಾಜನು ಮಧ್ಯಪ್ರವೇಶ ಮಾಡುತ್ತಿರಲಿಲ್ಲ. ಸ್ಥಾನಿಕರು ಹಾಗೂ ಇತರೆ ನಿರ್ವಾಹಕ ಸಿಬ್ಬಂದಿಯ ಪೂರ್ವಾನುಮತಿಯಿಲ್ಲದೆ ಸರ್ಕಾರಿ ಉದ್ದೇಶಗಳಿಗೋಸ್ಕರ ರಾಜರು ಹಾಗೂ ಅವರ ಅಧಿಕಾರಿಗಳಿಗೂ ಅಗ್ರಹಾರಕ್ಕೆ ಪ್ರವೇಶ ನೀಡುತ್ತಿರಲಿಲ್ಲ.

ಶಾಸನವು ವಿಶೇಷವಾಗಿ ಹೊಯ್ಸಳ ಕಂದಾಯದ ಅಧಿಕಾರಿಗಳಾದ ಅಡ್ಡಿಕರು ಹಾಗೂ ಕೋಳುಕಾರರ ಎರಡು ವರ್ಗಗಳಿಗೆ ಉಲ್ಲೇಖವನ್ನು ನೀಡುತ್ತದೆ. ಇವರು ಅಗ್ರಹಾರವನ್ನು ಪ್ರವೇಶಿಸುವಂತಿರಲಿಲ್ಲ. ಈ ಅಧಿಕಾರಿಗಳು ಅಧಿಕಾರ ಅಥವಾ ಸರ್ಕಾರಕ್ಕೆ ಸೇರಿದವರಾಗಿದ್ದರು.

ಇದು ದೇವಾಲಯದ ಆಭಾದಿತ ವೈಶಿಷ್ಟತೆಯನ್ನು ಹೊರತು ಪಡಿಸುತ್ತದೆ. ಶಾಸನದ ಪಠ್ಯದಲ್ಲಿ ಈ ರೀತಿಯಾಗಿ ಹೇಳಲಾಗಿದೆ.

"ಇಷ್ಟಲಿಂಗಳಿಗೆ ಅಧಿಕಾರ – ಅಡ್ಡಿಕ – ಕೋಳುಕಾರರು

ಮುಂತಾಗಿ – ಆರು - ಹೋಗಸಾಳ್ಳ"

ಹಲವು ಸಂದರ್ಭಗಳಲ್ಲಿ ದೇವರು ಹಾಗೂ ಬ್ರಾಹ್ಮಣರಿಗೆ ಇನ್ನಿತರ ಆರ್ಥಿಕ ವಿಶೇಷ ಅಧಿಕಾರಗಳನ್ನು ನೀಡುವಾಗ ಹೊಯ್ಸಳ ಮನೆತನದ ಅಧಿಕಾರಿಗಳು ಅವರಿಗೆ ಪಾತ್ರ ಶಾಸನಗಳನ್ನು (ಕಾಗದ ಆಜ್ಞೆಗಳು) ನೀಡುತ್ತಿದ್ದರು. ವಿಜಯನಗರ ಅರಸರು ಹಾಗೂ ಅಥವಾ ಅವರ ಅಧಿಕಾರಿಗಳು ದೇವಾಲಯಗಳು ಹಾಗೂ ಅಲ್ಲಿನ ಬ್ರಾಹ್ಮಣರಿಗೆ ವಿಶೇಷ ಸವಲತ್ತುಗಳನ್ನು ಒದಗಿಸುತ್ತಿದ್ದರು. ಉದಾಹರಣೆಗೆ ಅರೆವೀಡಿನ ರಾಮರಾಜ–ತಿಮ್ಮರಾಜ–ಎರೆದಿಮ್ಮರಾಜರ ಮಗ ಮಹಾಮಂಡಲೇಶ್ವರ–ಅವು ಬಾಲರಾಜಯ್ಯ– ಮಹಾ – ಅರಸು ಆ ಪ್ರದೇಶದ ದೇವಾಲಯಗಳು ಹಾಗೂ ಬ್ರಾಹ್ಮಣರಿಗೆ ಕೆಲವು ಆರ್ಥಿಕ ಸವಲತ್ತುಗಳನ್ನು ನೀಡಿದರು.

# ಅಧ್ಯಾಯ 8

## 8.1 ಸೋಮನಾಥಪುರ ಶಾಸನಗಳಲ್ಲಿ ಈ ಕೆಳಗಿನ ನಾಣ್ಯಗಳ ಉಲ್ಲೇಖವನ್ನು ನೋಡುತ್ತೇವೆ

### 8.1.1 ಗದ್ಯಾಣ ಹಣ

ಅಡ್ಡ ಬೆಲೆ, ಹಾಗೂ ಇವುಗಳು ನಾಣ್ಯಗಳ ಒಂದು ಭಾಗವಾಗಿದ್ದವು. ಇವುಗಳು ಹೊಯ್ಸಳ ಸಾಮ್ರಾಜ್ಯದಲ್ಲಿ ಚಲಾವಣೆಯಾಗುತ್ತಿದ್ದ ಚಿನ್ನದ ನಾಣ್ಯಗಳಾಗಿದ್ದವು. ಗದ್ಯಾಣವು ಅತೀ ಹೆಚ್ಚು ಮೌಲ್ಯವನ್ನು ಹೊಂದಿದ್ದ ಹಣವಾಗಿತ್ತು. ಒಂದು ಗದ್ಯಾಣಕ್ಕೆ 10 ಹಣಗಳಾಗಿದ್ದವು. ಅಡ್ಡವು ಅರ್ಧ ಗದ್ಯಾಣವಾಗಿತ್ತು. ಗದ್ಯಾಣವನ್ನು ಹೆಚ್ಚು ಮೌಲ್ಯಭರಿತವಾದ ಸರಕುಗಳನ್ನೊಳಗೊಂಡ ವ್ಯವಹಾರದಲ್ಲಿ ಉಪಯೋಗಿಸಲಾಗುತ್ತಿತ್ತು. ಹಣವನ್ನು ಮಧ್ಯಮ ಗಾತ್ರದ ವ್ಯಾಪಾರದಲ್ಲಿ ಬಳಸಲಾಗುತ್ತಿತ್ತು. ಆದರೆ ಅದೇ ಮೌಲ್ಯದ ಕೊಳ್ಳುವಿಕೆಯಲ್ಲಿ ಅಡ್ಡ ಬೆಲೆ ಹಾಗೂ ಹಾಗಗಳನ್ನು ಉಪಯೋಗಿಸ ಲಾಗುತ್ತಿತ್ತು. ಈ ಎಲ್ಲಾ ನಾಣ್ಯಗಳನ್ನು ಹೊಯ್ಸಳ ಸಾಮ್ರಾಜ್ಯದಲ್ಲಿ ಚಲಾವಣೆ ಮಾಡಲಾಗುತ್ತಿತ್ತು. ಈ ಎಲ್ಲಾ ನಾಣ್ಯಗಳನ್ನು ಹಲವಾರು ಶಾಸನಗಳಲ್ಲಿ ನೀಡಲಾಗಿರುವಂತೆ ಹೊಯ್ಸಳ ಸಾಮ್ರಾಜ್ಯದಲ್ಲಿ ಬಳಸಲಾಗುತ್ತಿತ್ತು.

ನಮ್ಮ ಮುಂದಿರುವ ಈಗಿನ ಪ್ರಶ್ನೆಯೆಂದರೆ ಸೋಮನಾಥಪುರ ದೇವಾಲಯ ಸಮುಚ್ಚಯದಲ್ಲಿ ಈ ಹಣದ ಚಲಾವಣೆಯ ಆರ್ಥಿಕ ಪರಿಣಾಮಗಳಾದರೂ ಏನು? ಎಂಬುದು ಮೊದಲನೆಯದಾಗಿ ಸೋಮನಾಥಪುರದಲ್ಲಿ ಅಭಿವೃದ್ಧಿ ಪಡಿಸಿದ್ದ ಉನ್ನತಮಟ್ಟದ ಆರ್ಥಿಕತೆಯನ್ನು ಸೂಚಿಸುತ್ತದೆ. ಎರಡನೆಯದಾಗಿ ಹಣದ ಅಸ್ಥಿತ್ವವು ಅಗ್ರಹಾರದ ಪರಿಧಿಯಲ್ಲಿ ಊಳಿಗಮಾನ್ಯ ಪ್ರಾಬಲ್ಯದ ಶಕ್ತಿಗಳನ್ನು ದೂರವಿಡುತ್ತದೆ. ಮೂರನೆಯದಾಗಿ ತೆರಿಗೆಗಳನ್ನು ಮಹಾಜನ ಭೂಮಾಲೀಕರು ನಗದಿನ ರೂಪದಲ್ಲಿ ಸಂಗ್ರಹಿಸುತ್ತಿದ್ದರು. ಇದು ಅವರಿಗೆ ಬಹಳ ಪ್ರಯೋಜನ ಕಾರಿಯಾಗಿತ್ತು. ನಿಶ್ಚಿತ ತೆರಿಗೆಯಾಗಿದ್ದ ಸಿದ್ದಾಯವನ್ನೂ ಸಹ ನಗದಿನ ರೂಪದಲ್ಲೇ ಸಂಗ್ರಹಿಸಲಾಗುತ್ತಿತ್ತು. ಆದರೆ ಸೋಮನಾಥಪುರದಲ್ಲಿ ವಾಸಿಸುತ್ತಿದ್ದ ಗೇಣಿದಾರರಿಗೆ ಇದು ಬಹುಶಃ ಹಲವು ಅನಾನುಕೂಲತೆಗಳನ್ನು ಉಂಟು ಮಾಡಿತ್ತು. ಒಳ್ಳೆಯ ಬೆಳೆ ಬಂದಾಗ ಹಾಗೂ ಬೆಲೆಗಳು ಕುಗ್ಗುತ್ತಿರುವ ಸಂದರ್ಭಗಳಲ್ಲಿ ಗೇಣಿದಾರರು ಬಹಳ ಕಡಿಮೆ ಬೆಲೆಗೆ ಮಾರಾಟ ಮಾಡಬೇಕಾಗಿತ್ತು. ಹಾಗೂ ಇದರ ಮುಖಾಂತರ ನಷ್ಟವನ್ನು ಅನುಭವಿಸುತ್ತಿದ್ದರು. ಏಕೆಂದರೆ ಗೇಣಿದಾರರು ಉತ್ಪನ್ನವನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡಿ ಹಣವನ್ನು ಬಟವಾಡೆ ಮಾಡಬೇಕಾಗಿತ್ತು. ಇನ್ನೊಂದು ಕಡೆಯಲ್ಲಿ ಕಡಿಮೆ ಉತ್ಪಾದನೆ ಅಥವಾ ಹೆಚ್ಚು ಧಾರಣೆಯ

ಸಂದರ್ಭಗಳಲ್ಲಿ ಗೇಣಿದಾರರು ನಿವ್ವಳ ಲಾಭವನ್ನು ಪಡೆಯುತ್ತಿದ್ದರು. ಏಕೆಂದರೆ ಭೂಮಾಲೀಕರಿಗೆ ಕೊಡಬೇಕಾಗಿದ್ದ ಸಿದ್ದಾಯವನ್ನು ಕಂದಾಯದವರು ನಿರ್ಧರಿಸುತ್ತಿದ್ದರಿಂದ ಅವರು ಎಷ್ಟೇ ಲಾಭ ಮಾಡುತ್ತಿದ್ದರೂ ಅದಕ್ಕೆ ಅವರೇ ಫಲಾನುಭವಿಗಳಾಗುತ್ತಿದ್ದರು. ಕಡೆಯದಾಗಿ ಹಣದ ಚಲಾವಣೆ ಯಿಂದಾಗಿ ಸೋಮನಾಥಪುರದ ಆರ್ಥಿಕ ರಚನೆಯಲ್ಲಿ ವಸ್ತುವಿನಿಮಯ ಪದ್ಧತಿಯಿಂದ ಸಂಭವಿಸುವ ಅನೇಕ ಅನಾನುಕೂಲತೆಗಳು ನಿರ್ಮೂಲನೆಗೊಂಡವು.

ಮಾನಗಳನ್ನು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ ಹಾಗೂ ಈ ಕೆಳಕಂಡ ಪಟ್ಟಿಯು ಅದರ ಸಂಪೂರ್ಣ ವಿವರಗಳನ್ನು ಒದಗಿಸುತ್ತದೆ. ಐದು ಸಾಲಗೆ, ಹದಿನಾರು ಕೊಳಗ, ಒಂದು ಬಳ್ಳ ಹಾಗೂ ಮೂರು ಮಣ ಅಕ್ಕಿ ಎಣ್ಣೆಯ ಅಳತೆ ಪ್ರತೀ ದಿನಕ್ಕೊಮ್ಮೆ ನಾಲ್ಕು ಕೊಳಗದಂತೆ ಒಂದು ವರ್ಷಕ್ಕೆ ಉಪಯೋಗಿಸಲ್ಪಡುವ ಎಣ್ಣೆಯು ಇಪ್ಪತ್ತೆರಡು ಸಾಲಗೆಗಳು ಅಂದರೆ ಮೂನ್ನೂರೈವತ್ತು ದಿನಗಳಿಗೆ ಇಪ್ಪತೆರಡು ಸಾಲಗೆ ಎಣ್ಣೆಯು ನಾಲ್ಕು ಕೊಳಗಕ್ಕೆ ಸಮನಾಗಿದೆ.

ಸೋಮನಾಥ ದೇವರಿಗೆ ದೀಪವನ್ನು ಉರಿಸುವುದಕ್ಕೋಸ್ಕರ ಹದಿನಾಲ್ಕು ದಿವಸಗಳಿಗಾಗಿ ಎಣ್ಣೆಯನ್ನು ಒಂದು ಕೊಳಗ, ಒಂದು ಬಳ್ಳ ಹಾಗೂ ಒಂದು ಮಣದ ಪ್ರಮಾಣದಲ್ಲಿ ಪ್ರತಿನಿತ್ಯ ಹದಿನೆಂಟು ಕೊಳಗ ಹಾಗೂ ಎರಡು ಬಳ್ಳಗಳನ್ನು ಉಪಯೋಗಿಸಲಾಗುತ್ತಿತ್ತು.

ಎಳ್ಳನ್ನು ಸಾಲಗೆ ಹಾಗೂ ಕೊಳಗಗಳಲ್ಲಿ ಅಳೆಯಲಾಗುತ್ತಿತ್ತು. ಆದರೆ ಎಳ್ಳಿನ ಎಣ್ಣೆಯನ್ನು ಕೊಳಗ ಹಾಗೂ ಬಳ್ಳಗಳಲ್ಲಿ ಅಳೆಯಲಾಗುತ್ತಿತ್ತು.

**8.1.2 ತುಪ್ಪದ ಅಳತೆ**: ತುಪ್ಪವನ್ನು ಕೊಳಗದಲ್ಲಿ ಅಳೆಯಲಾಗುತ್ತಿತ್ತು. ಹಾಗೆಯೇ ಬಳ್ಳ, ಮಣ ಮತ್ತು ಸಾಲಗೆಯಲ್ಲಿ ಅಳೆಯಲಾಗುತ್ತಿತ್ತು. ಪ್ರತಿನಿತ್ಯದ ಭತ್ಯೆಯೆಂದು ಒಂದು ಕೊಳಗ, ಒಂದು ಬಳ್ಳ, ಒಂದು ಮಣ ಹಾಗೂ ಒಂದು ಸಾಲಗೆಗಳ ಪ್ರಮಾಣದಲ್ಲಿ ಒಂದು ವರ್ಷಕ್ಕೆ ಇಪ್ಪತ್ತನಾಲ್ಕು ಸಾಲಗೆ, ಮೂರು ಕೊಳಗ, ಮೂರು ಬಳ್ಳಗಳಾಗಿದ್ದವು.

**8.1.3 ಹೆಸರುಕಾಳು**: ಕೊಳಗ ಹಾಗೂ ಸಾಲಗೆಗಳಲ್ಲಿ ಅಳತೆಯನ್ನು ಉಲ್ಲೇಖಿಸಲಾಗಿದೆ.

**8.1.4 ಉಪ್ಪಿನ ಅಳತೆ**: ಬಳ್ಳ, ಸಾಲಗೆ, ಕೊಳಗ

ಕರ್ನಾಟಕದಲ್ಲಿ ಮಧ್ಯಕಾಲೀನ ಯುಗದಲ್ಲಿ ಪ್ರಸ್ತುತದಲ್ಲಿದ್ದ ಸಾರಿಗೆಗೆ ಸಂಬಂಧಪಟ್ಟ ಹಲವು ಅಂಶಗಳನ್ನು ಅರ್ಥಮಾಡಿಕೊಳ್ಳಲು ಸೋಮನಾಥಪುರದ ಬಳಿಯ ಕೇಶವ ದೇವಾಲಯದ ಕೆಲವು ಶಿಲ್ಪಗಳು (ಮೂರ್ತಿಗಳು) ನಮಗೆ ನೆರವಾಗುತ್ತದೆ. ಆ ಪ್ರದೇಶದ ವ್ಯಾಪಾರ ಹಾಗೂ ಕೈಗಾರಿಕೆಯ ಜೀವನಾಡಿಯಾಗಿ ಸಾರಿಗೆಯು ಕಂಡುಬರುತ್ತದೆ. ಆದ್ದರಿಂದ ಒಂದು ರಾಜಧಾನಿಯ ಜೀವಕೋಶದ ದೇಹ ಹಾಗೂ ಮೂಳೆಗಳಾಗಿ ಕೃಷಿ ಹಾಗೂ ಕೈಗಾರಿಕೆಗಳಿದ್ದರೆ ಆ ರಾಜ್ಯದ ಸಂಪತ್ತಿನ ಬಾಗಿಲನ್ನು ತೆರೆಯಲು ಸಾರಿಗೆಯು ಸಾಧನವಿದ್ದಂತೆ ಎಂದು ಸೂಕ್ತವಾಗಿಯೇ ಹೇಳಲಾಗಿದೆ.

ಸಾರಿಗೆ ಸಾಧನಕ್ಕೆ ಸಂಬಂಧಿಸಿದಂತೆ ಕಂಡುಬರುವ ಶಿಲ್ಪಕಲಾ ಅಭಿವ್ಯಕ್ತಿಯು ಬಹಳ ಕುತೂಹಲಕಾರಿಯಾಗಿದೆ. ಕೇಶವ ದೇವಾಲಯದ ಹೊರಗೋಡೆಯ ಮೇಲೆ ಎರಡು ಬಗೆಯ ವಾಹನಗಳನ್ನು ಪ್ರತಿನಿಧಿಸಲಾಗಿದೆ. 1) ಪ್ರಯಾಣಿಕರು ಹಾಗೂ ಸೈನಿಕರು ಮತ್ತು ಕೆಲವೊಮ್ಮೆ ಸರಕುಗಳನ್ನು ಒಯ್ಯಲು ರಥದ ಮಾದರಿಯ ವಾಹನ ಇವುಗಳು ನಾಲ್ಕು ಚಕ್ರವನ್ನು ಹೊಂದಿರುತ್ತಿದ್ದವು. 2) ಸಾಮಾನ್ಯವಾಗಿ ಎತ್ತುಗಳಿಂದ ಎಳೆಯಲ್ಪಡುತ್ತಿದ್ದ ಹಳ್ಳಿಯ ಬಂಡಿಗಳು ಆದರೆ ಮೊದಲನೆಯ ವಿಧವಾದ ರಥವನ್ನು ಕುದುರೆಗಳು ಎಳೆಯುತ್ತಿದ್ದವು. ರಾಜ ಮನೆತನದವರು ಹಾಗೂ ಮಂತ್ರಿ ವರ್ಗದವರು ರಥಗಳನ್ನು ಉಪಯೋಗಿಸುತ್ತಿದ್ದರು. ಹಾಗೂ ವರ್ತಕರು ಮತ್ತು ರೈತರು ಪ್ರಯಾಣಿಕರು ಹಾಗೂ ಸರಕುಗಳನ್ನು ಒಯ್ಯಲು ಚಕ್ಕಡಿಗಳನ್ನು ಬಳಸುತ್ತಿದ್ದರು. ಇತ್ತೀಚಿನ ಕಾಲದ ಶಾಸನವು ದಾಖಲಿಸುವಂತೆ ವರ್ತಕರು ಕಮಾನಿನ ಮಾದರಿಯ ಬಹಳಷ್ಟು ಸಂಖ್ಯೆಯ ಚಕ್ಕಡಿಗಳನ್ನು ಬಳಸುತ್ತಿದ್ದರು. ಹೆದ್ದಾರಿಯಲ್ಲಿ ಜನರು ಹಾಗೂ ಸರಕುಗಳನ್ನು ಕಾಪಾಡಲು ಅವರು ಬಿಲ್ಲವ ಅಂಗರಕ್ಷಕರನ್ನು ಹೊಂದಿದ್ದರು.

ಹತ್ತಿರದ ಅಂತರದ ಸ್ಥಳಗಳಿಗೆ ಸರಕನ್ನು ಒಯ್ಯಲು ಕಾವಡಿಯನ್ನು ಉಪಯೋಗಿಸಲಾಗುತ್ತಿತ್ತು. ಕಾವಡಿಯು ಒಂದು ದೊಡ್ಡ ಬಿದಿರಿನ ಕೋಲಾಗಿದ್ದು ಅದಕ್ಕೆ ಎರಡು ಬುಟ್ಟಿಗಳನ್ನು ಕಟ್ಟಲಾಗುತ್ತಿತ್ತು. ಹಾಗೂ ಸರಕುಗಳಿಂದ ತುಂಬಿದ ಆ ಕಾವಡಿಯನ್ನು ವ್ಯಕ್ತಿಯೋರ್ವನು ತನ್ನ ತೋಳಿನಿಂದ ಒಯ್ಯುತ್ತಿದ್ದನು. ಇದರ ಜೊತೆಗೆ ಸರಕು ಹಾಗೂ ಸೈನಿಕರ ತುಕಡಿಯನ್ನು ಸಾಗಿಸಲು ಎತ್ತುಗಳು, ಒಂಟೆಗಳು, ಕುದುರೆಗಳು ಹಾಗೂ ಕತ್ತೆಗಳನ್ನು ಉಪಯೋಗಿಸಲಾಗುತ್ತಿತ್ತು.

ಈ ರೀತಿಯಾಗಿ ಆರ್ಥಿಕ ದೃಷ್ಟಿಕೋನದಿಂದ ನೋಡಿದಾಗ ಸೋಮನಾಥಪುರ ದೇವಾಲಯ ಸಂಕೀರ್ಣವು ದಕ್ಷಿಣ ಕರ್ನಾಟಕದ ಮಧ್ಯಕಾಲೀನ ಯುಗದ ಜನರ ಆರ್ಥಿಕ ಜನಜೀವನಕ್ಕೆ ಸಂಬಂಧಿಸಿದಂತೆ ಬಹಳ ಕುತೂಹಲಕಾರಿಯಾದ ಮಾಹಿತಿಗಳನ್ನು ನೀಡುತ್ತದೆ. ಹದಿಮೂರನೆಯ ಶತಮಾನದಲ್ಲಿ ಮೈಸೂರು ಜಿಲ್ಲೆಯಲ್ಲಿನ ಕಾವೇರಿ ತಟದ ಮೇಲೆ ದೇವಾಲಯ ಸಂಕೀರ್ಣದ ಉಗಮವು ಸ್ವತಃ ಆ ಪ್ರದೇಶದ ಆರ್ಥಿಕ ಇತಿಹಾಸದಲ್ಲಿ ಒಂದು ಮೈಲಿಗಲ್ಲಾಗಿದೆ. ಇದರಿಂದಾಗಿ ಅದು ಕೃಷಿ ವಿಸ್ತರಣೆ, ಉನ್ನತ ಸಂಪನ್ಮೂಲಗಳ ಚಲನಾತ್ಮಕತೆ ಹಾಗೂ ಹಂಚಿಕೆಗೆ ಹೆಚ್ಚಿನ ಪ್ರೋತ್ಸಾಹವು ದೊರೆಯಿತು.

ಆಗಿನ ಸಮಕಾಲೀನ ಅರ್ಥದಲ್ಲಿ ದೇವಾಲಯಕ್ಕೆ ಹಣವನ್ನು (ತೊಡಗಿಸುವುದು) ಹೂಡುವುದು ಈಗ ಕೈಗಾರಿಕೆಗಳಿಗೆ ಹಣವನ್ನು ತೊಡಗಿಸುವಂತಿತ್ತು. ಹೊಯ್ಸಳರು ಅವರ ಆಡಳಿತದಲ್ಲಿ ಸಣ್ಣ ಹಾಗೂ ದೊಡ್ಡ ದೇವಾಲಯಗಳನ್ನು ನಿರ್ಮಿಸಲು ತಮ್ಮ ಹಣ ಶಕ್ತಿ ಹಾಗೂ ಸಮಯವೆಲ್ಲವನ್ನು ಗರಿಷ್ಟ ಪ್ರಮಾಣದಲ್ಲಿ ಉಪಯೋಗಿಸಿದರು. ಇದರ ಹಿಂದೆ ಧಾರ್ಮಿಕ ಉದ್ದೇಶಗಳು ಎದ್ದು ಕಾಣುತ್ತಿದ್ದರೂ ಈ ರೀತಿಯಾದ ದೇವಾಲಯಗಳ ನಿರ್ಮಾಣದಲ್ಲಿ ನಾವು ಆರ್ಥಿಕ ಪರಿಣಾಮವನ್ನು ಅಲ್ಲಗಳೆಯಲು ಸಾಧ್ಯವಾಗುವುದಿಲ್ಲ. ಸೋಮನಾಥಪುರ ದೇವಾಲಯ ಸಮುಚ್ಛಯವನ್ನು ಈ ದೃಷ್ಟಿಕೋನದಿಂದ ಮಾಡಿದ ಅಧ್ಯಯನದಿಂದಾಗಿ ನಮ್ಮನ್ನು ಈ ಕೆಳಕಂಡ ನಿರ್ಧಾರಗಳಿಗೆ ಕೊಂಡೊಯ್ಯುತ್ತದೆ.

ಮೊದಲನೆಯದಾಗಿ ಹದಿಮೂರನೆಯ ಶತಮಾನದಲ್ಲಿ ಸೋಮನಾಥಪುರದಲ್ಲಿ ಉದ್ಭವಿಸಿದ ಕೃಷಿ ವ್ಯವಸ್ಥೆಯು ಬಹಳ ಪ್ರಾಮುಖ್ಯತೆಯನ್ನು ಹೊಂದಿತ್ತು. ಆರ್ಥಿಕವಾಗಿ ಹೇಳುವುದಾದರೆ ಅದೊಂದು ಸ್ವತಂತ್ರ ಪ್ರದೇಶವಾಗಿತ್ತು. ಅದು ಎರಡು ರೀತಿಯ ವಿಶಾಲವಾದ ಆರ್ಥಿಕ ವರ್ಗಗಳನ್ನು ಹೊಂದಿತ್ತು. 1. ಭೂ ಸ್ವಾಧೀನತೆಯನ್ನು ಹೊಂದಿದ್ದ ಬ್ರಾಹ್ಮಣ ಮಹಾಜನ ಭೂಮಾಲೀಕರು 2. ಮಹಾಜನರು ಹಾಗೂ ದೇವಾಲಯಗಳ ಭೂಮಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಗೇಣಿದಾರ ವರ್ಗ, ಆದ್ದರಿಂದ ಕೃಷಿ ವ್ಯವಸ್ಥೆಯಲ್ಲೇ ಸಂಬಂಧಿಗಳ ಒಂದು ಏಣಿ ಶ್ರೇಣಿಯು ಅಸ್ತಿತ್ವದಲ್ಲಿತ್ತು.

ಎರಡನೆಯದಾಗಿ ಈ ಪ್ರದೇಶವು ನೀರಾವರಿ ಸಾಗುವಳಿ ಪ್ರದೇಶವಾಗಿತ್ತು. ಭತ್ತ, ಕಬ್ಬು ಹಾಗೂ ತೋಟದ ಉತ್ಪನ್ನದಲ್ಲಿ ವಿಶೇಷ ಪರಿಣತೆಯನ್ನು ಹೊಂದುವ ಪ್ರಯತ್ನವನ್ನು ಮಾಡುತ್ತಿತ್ತು. ಈ ಬೆಳೆಗಳನ್ನು ಬೆಳೆಯುವುದು ಲಾಭಕರ ಎಂದು ಪರಿಗಣಿಸಲಾಗಿತ್ತು.

ಮೂರನೆಯದಾಗಿ ಈ ಪ್ರದೇಶದಲ್ಲಿ ನೀರಾವರಿ ಸೌಲಭ್ಯಗಳನ್ನೊಳಗೊಂಡ ಒಂದು ಜಾಲವೇ ಅಸ್ಥಿತ್ವದಲ್ಲಿತ್ತು ನದಿ ನೀರನ್ನು ಕಾಲುವೆ ಹಾಗೂ ನಾಲೆಗಳ ಮೂಲಕವಾಗಿ ಸಮರ್ಪಕವಾಗಿ ಬಳಸಲಾಗುತ್ತಿತ್ತು. ಕುತೂಹಲಕಾರಿಯಾದ ಅಂಶವೇನೆಂದರೆ ಈ ಪ್ರದೇಶದಲ್ಲಿದ್ದ ಕೆರೆಗಳಿಗೆ ಕೇವಲ ಮಳೆ ನೀರಿನ ಹಿನ್ನಲೆಯಲ್ಲದೆ ನದಿ ನೀರಿನ ಹಿನ್ನಲೆಯಲ್ಲದೆ ನದಿ ನೀರಿನ ಮೂಲವೂ ಇತ್ತು.

ನಾಲ್ಕನೆಯದಾಗಿ ಸೋಮನಾಥಪುರದ ಆರ್ಥಿಕ ಜೀವನವು ಎಂದಿಗೂ ಕಾರ್ಯಮಗ್ನನಾಗಿದ್ದ ಸಂಘಟಿತ ಜೀವನವಾಗಿತ್ತು. ಇದು ಧಾರ್ಮಿಕ ತಾರತಮ್ಯಗಳು ಹಾಗೂ ವಿವಿಧ ದೇವರ ಆರಾಧನೆಗೆ ನಿಲುಕದಾಗಿತ್ತು. ಸಂಪನ್ಮೂಲವನ್ನು ಸೃಷ್ಟಿಸುವ ದೃಷ್ಟಿಯಿಂದ ದೇವರು, ಪುರೋಹಿತರು, ಗೇಣಿದಾರರು ಹಾಗೂ ವರ್ತಕರು ಒಗ್ಗಟ್ಟಿನ ಪ್ರಯತ್ನವನ್ನು ಮಾಡಿದರು. ಈ ಅಂಶವನ್ನು ಆ ಪ್ರದೇಶದ ಅನೇಕ ಶಾಸನಗಳು ಸ್ಪಷ್ಟಪಡಿಸುತ್ತವೆ.

ಐದನೆಯದಾಗಿ, ದೇವಾಲಯ ಸಮುಚ್ಛಯವು ಅನೇಕ ಕೃಷಿಯೇತರ ಉತ್ಪನ್ನಗಳನ್ನು ಹಾಗೂ ಸಾಂಬಾರ ಪದಾರ್ಥಗಳನ್ನು ಉಪಯೋಗಿಸುತ್ತಿದ್ದುದರಿಂದ ಅದು ತನ್ನ ವಾಸನೆಲೆಯ ಸುತ್ತಮುತ್ತಲಿನ ಮಾರುಕಟ್ಟೆಗಳ ಜಾಲದೊಂದಿಗೆ ಸಂಪರ್ಕವನ್ನು ಹೊಂದಿತ್ತು. ಈ ಅಂಶವು ಸೋಮನಾಥಪುರವು ಒಂದು ಪಟ್ಟಣದ ವೈಶಿಷ್ಟತೆಯನ್ನು ನೀಡಿತು. ಹಾಗೂ ನಾವು ಅದನ್ನು ದೇವಾಲಯ ಪಟ್ಟಣ ಎಂದು ಹೆಸರಿಸಬಹುದು. ಶಾಸನಗಳಿಂದ ತಿಳಿದು ಬಂದ ಪ್ರಕಾರವಾಗಿ ಧಾರಣೆ ಪಟ್ಟಿ ಹಾಗೂ ಅನುಭೋಗ ಪಟ್ಟಿಯ ಮುಖಾಂತರ ದೇವಾಲಯದ ವ್ಯಾಪಾರೀ ವೈಶಿಷ್ಟತೆಯು ಕಂಡುಬರುತ್ತದೆ.

ಆರನೆಯದಾಗಿ ಸೋಮನಾಥಪುರದಲ್ಲಿ ಹಣದ ಆರ್ಥಿಕತೆಯು ಗಣನೀಯ ಪ್ರಮಾಣದ ಪ್ರಭಾವವನ್ನು ಹೊಂದಿತ್ತು. ಏಕೆಂದರೆ ದೇವಾಲಯಗಳು ಹಾಗೂ ಬ್ರಾಹ್ಮಣ ಭೂಮಾಲೀಕರ ಎಲ್ಲಾ ಬಗೆಯಾದ ವ್ಯವಹಾರಗಳ ವೆಚ್ಚಗಳನ್ನೆಲ್ಲವನ್ನೂ ಗದ್ಯಾಣ ಅಥವಾ ಹಣವೆಂಬ ನಾಣ್ಯಗಳ ಮೂಲಕ ಎಣಿಸಲಾಗುತ್ತಿತ್ತು. ಹಣದ ಚಲಾವಣೆಯು ಬಹುಶಃ ಆರ್ಥಿಕ ಜೀವನದ ಊಳಿಗಮಾನ್ಯ ರಚನೆಯ ಕಠಿಣತೆಯನ್ನು ದೂರ ಮಾಡಿತು.

ಕಡೆಯದಾಗಿ ಸೋಮನಾಥಪುರ ದೇವಾಲಯ ಸಮುಚ್ಛಯವು ಉದ್ಯೋಗ ನೀಡುವವನಾಗಿ ಶೈವಪಂಥ ಹಾಗೂ ವೈಷ್ಣವ ಪಂಥದವರಿಗೆ ಉದ್ಯೋಗವನ್ನು ಒದಗಿಸುತ್ತಿತ್ತು. ಅತ್ಯಂತ ಕೆಳ

ದರ್ಜೆಯ ಕೂಲಿಕಾರನೊಬ್ಬ ದಿನದ ಆಧಾರದ ಮೇಲೆ ನೇಮಕಗೊಳ್ಳುತ್ತಿದ್ದು ಅವನ ಕೆಲಸವು ದೇವಾಲಯಗಳಲ್ಲಿ ಭತ್ತವನ್ನು ಕುಟ್ಟುವುದಾಗಿತ್ತು. ಪ್ರತಿನಿತ್ಯ ಹನ್ನೊಂದು ಕೊಳಗ ಹಾಗೂ ಮೂರು ಬಳ್ಳ ಭತ್ತವನ್ನು ಕುಟ್ಟುವುದಕ್ಕಾಗಿ ವಾರ್ಷಿಕವಾಗಿ ಅವನಿಗೆ ಎರಡರಿಂದ ಐದು ಗದ್ಯಾಣದಷ್ಟು ಕೂಲಿ ದೊರೆಯುತ್ತಿತ್ತು. ಇದರ ಜೊತೆಗೆ ದೇವಾಲಯವು ಸಂಗೀತಗಾರರು, ಕುಶಲಕರ್ಮಿಗಳು, ಸಹಾಯಕರು, ಕ್ಷೌರಿಕರು, ಬಡಗಿಗಳು ಹಾಗೂ ಕಮ್ಮಾರರನ್ನು ನೇಮಕ ಮಾಡಿಕೊಂಡಿತ್ತು. ಇದರಿಂದ ತಿಳಿಯುವ ವಿಚಾರವೆಂದರೆ ಸೋಮನಾಥಪುರವು ಹಲವು ದೇವಾಲಯಗಳು ಆರ್ಥಿಕ ಜೀವನದ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುವುದರ ಮೂಲಕ ಬಹಳ ಹಾನಿಕಾರಕವಾಗಿ ಕೃಷಿ ಹಾಗೂ ಕೃಷಿಯೇತರ ವೈಶಿಷ್ಟತೆಗಳನ್ನು ಸಂಯೋಜಿಸಿತ್ತು. ಹಲವಾರು ರೀತಿಯಲ್ಲಿ ದೊರೆಯುತ್ತಿದ್ದ ಐಹಿಕ ಬೆಂಬಲದಿಂದಾಗಿ ಸಾಮಾಜಿಕ ಗುಂಪುಗಳು ಹಾಗೂ ಅವುಗಳ ಸಂಘಟನೆಗಳು ಹಾಗೂ ಸಂಸ್ಥೆಗಳು ಸಾಕಷ್ಟು ಬಲಿಷ್ಟವಾದವು. ಈ ಅಂಶವನ್ನು ನಾವು ಮುಂದಿನ ಅಧ್ಯಾಯದಲ್ಲಿ ಕೇಂದ್ರವಾಗಿ ಇಟ್ಟುಕೊಂಡು ನಮ್ಮ ಅಧ್ಯಯನವನ್ನು ಮುಂದುವರೆಸುತ್ತೇವೆ.

ಸೋಮನಾಥಪುರದ ನಿವಾಸಿಗಳು ಅನುತ್ಪಾದಕ ಸೇವೆಗಳಾದ ದೇವಾಲಯದಲ್ಲಿನ ಕಾರ್ಯ ನಿರ್ವಹಣೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಬೇರೆ ಮಾತುಗಳಲ್ಲಿ ಹೇಳುವುದಾದರೆ ಹದಿಮೂರನೇ ಶತಮಾನದ ನಂತರ ಸೋಮನಾಥಪುರವು ಅನುತ್ಪಾದಕ ಔದ್ಯೋಗಿಕ ಸಾಮಾಜಿಕ ಪಂಗಡಗಳ ಉಗಮವನ್ನು ಕಂಡಿತು. ಅಸ್ಥಿತ್ವಕ್ಕೆ ಬಂದ ಸಾಮಾಜಿಕ ಸಂಘಟನೆಯ ರಚನೆಯು ಮೂರು ಮೂಲಗಳನ್ನು ಹೊಂದಿತ್ತು. ಇವುಗಳು ಅಧಿಕಾರದ ಸಮರ್ಥನೆಯನ್ನು ಮಾಡುವ ಮೂಲಗಳಾಗಿ ಪರಿಣಮಿಸಿದವು. 1. ವೇದಗಳ ಸಾತ್ವಿಕತೆಯ ಹಿಂದೂ ಆದರ್ಶಗಳಾದ ವಿಷ್ಣುಪುರಾಣ, ಭಗವತ, ರಾಮಾಯಣ ಹಾಗೂ ಮಹಾಭಾರತ 2. ಬ್ರಾಹ್ಮಣ ಶ್ರೇಷ್ಟತೆ 3. ದೇವಾಲಯಗಳಲ್ಲಿನ ಪವಿತ್ರತೆ ಇವುಗಳನ್ನು ಮುಂದಿನ ಅಧ್ಯಾಯದಲ್ಲಿ ವಿವರವಾಗಿ ಚರ್ಚಿಸಲಾಗುವುದು.

ಕೇಶವ ಹಾಗೂ ನರಸಿಂಹ ದೇವಾಲಯಗಳ ಗಾತ್ರದಿಂದ ತಿಳಿಯುವಂತೆ ಸೋಮನಾಥ ಪುರದ ಬ್ರಾಹ್ಮಣರಲ್ಲಿ ಶ್ರೀನಿವಾಸ ದೇವರು ದೊಡ್ಡ ಪ್ರಮಾಣದಲ್ಲಿ ಆರಾಧ್ಯ ದೇವವಾಗಿ ಹೊರಹೊಮ್ಮಿದ್ದರಿಂದ ಕರ್ನಾಟಕದ ಈ ಭಾಗದಲ್ಲಿ ಕಂಡುಬಂದಿರುವಂತೆ ಅವರ ಹುಟ್ಟು, ಚರಿತ್ರೆ, ಸಾಮಾಜಿಕ ರೂಢಿಗಳು ಹಾಗೂ ಆಚರಣೆಗಳನ್ನು ಅಧ್ಯಯನ ಮಾಡುವುದು ಹೆಚ್ಚು ಸೂಕ್ತವೆಂದು

ತೋರುತ್ತದೆ. ಇಂತಹ ಒಂದು ಅಧ್ಯಯನವು ಶಾಸನಗಳಿಮದ ಸಂಗ್ರಹಿಸಲಾಗಿರುವ ಮಾಹಿತಿಗಳನ್ನು ವಿಶ್ಲೇಷಿಸಲು ಒಂದು ಹಿನ್ನಲೆಯಾಗಿ ಸಹಾಯಕವಾಗುತ್ತದೆ.

ಶ್ರೀನಿವಾಸ ಎಂಬ ಪದವು ಸೂಚಿಸುವುದೇನೆಂದರೆ ಈ ಪಂಗಡಕ್ಕೆ ಸೇರಿದ್ದ ಬ್ರಾಹ್ಮಣರು ವಿಷ್ಣು ಹಾಗೂ ತನ್ನ ಪತ್ನಿಯಾದ ಲಕ್ಷ್ಮಿ ಅಥವ ಶ್ರೀಯನ್ನು ಆರಾಧಿಸುತ್ತಿದ್ದರು. ಅವರು ಮೈಸೂರು ಸಂಸ್ಥಾನದ ಶ್ರೀರಂಗಪಟ್ಟಣ, ಮೇಲುಕೋಟೆ, ಮಂಡ್ಯ, ಟಿ.ನರಸೀಪುರ ಹಾಗೂ ಬೆಂಗಳೂರು, ಮೈಸೂರು ಮತ್ತು ಹಾಸನ ಜಿಲ್ಲೆಯ ಕೆಲವು ಹಳ್ಳಿಗಳು ಅವರ ಪ್ರಮುಖ ಕೇಂದ್ರಗಳಾಗಿದ್ದವು. ಅವರು ಕಾವೇರಿ, ಹೇಮಾವತಿ ಹಾಗೂ ಭದ್ರಾವತಿ ನದಿ ದಂಡೆಯ ಮೇಲೆ ವಾಸಿಸುತ್ತಿದ್ದರು. ಶ್ರೀನಿವಾಸ ಪಂಗಡದವರು ಬ್ರಾಹ್ಮಣರ ಇನ್ನಿತರ ಪಂಗಡಗಳಿಗಿಂತ ಎರಡು ಅಂಶಗಳಲ್ಲಿ 1. ಆಹಾರ 2. ಆಂತರಿಕ ವಿವಾಹದಲ್ಲಿ ಸಂಪೂರ್ಣವಾಗಿ ಭಿನ್ನವಾಗಿದ್ದರು. ಅವರ ಆಚಾರ ವಿಚಾರಗಳ ಆಧಾರದ ಮೇಲೆ ಅವರಲ್ಲಿ ಅನೇಕ ಉಪಪಂಗಡಗಳಿದ್ದವು. ಎರಡು ಪ್ರಮುಖ ಪಂಗಡಗಳೆಂದರೆ 1. ತೆಂಗಳರು (ದಕ್ಷಿಣದವರು) 2. ವಾದಗಳರು (ಉತ್ತರದವರು) ಈ ಎರಡು ಪಂಗಡಗಳು ವೇದಗಳ ಕೆಲವು ಪಠ್ಯಗಳನ್ನು ಪ್ರತ್ಯೇಕವಾಗಿಯೇ ಅರ್ಥೈಸುತ್ತವೆ. ಇವರನ್ನು ಕ್ರೈಸ್ತ ಧರ್ಮೀಯರ ಕ್ಯಾಥೋಲಿಕರು ಹಾಗೂ ಪ್ರೊಟೆಸ್ಟಂಟರು ಎಂಬ ಎರಡು ಪಂಗಡಕ್ಕೆ ಹೋಲಿಸಬಹುದು. ಅವರು ಸಾಮಾನ್ಯವಾದ ಭಾಷೆಯನ್ನು ಅಂದರೆ ತಮಿಳನ್ನು ಬಲ್ಲವರಾಗಿದ್ದರು. ಆದರೆ ಅವರು ಕರ್ನಾಟಕದಲ್ಲಿ ನೆಲೆಸಿದಾಗ ಕನ್ನಡವನ್ನು ಕಲಿತರು. ಕೆಲವು ವೈಷ್ಣವ ಪಂಗಡಗಳು ಕೇವಲ ತೆಲುಗು ಭಾಷೆಯನ್ನು ಮಾತ್ರ ಮಾತನಾಡುತ್ತಿದ್ದರು. ಸಂಕ್ಷಿಪ್ತವಾಗಿ ಹೇಳುವುದಾದರೆ ಎಲ್ಲಾ ಶ್ರೀನಿವಾಸ ಪಂಗಡದವರು ಹೊಯ್ಸಳರ ಕಾಲದಲ್ಲಿ ಸಂಭವಿಸಿದ ರಾಮಾನುಜರ ಆಗಮನದಿಂದಾಗಿ ತಮಿಳುನಾಡು ಹಾಗೂ ಆಂಧ್ರಪ್ರದೇಶದಿಂದ ವಲಸೆ ಕೈಗೊಂಡರು.

ಶ್ರೀನಿವಾಸ ಸಮುದಾಯವು ಹದಿನೆಂಟು ಸ್ವಗೋತ್ರ ಗುಂಪುಗಳನ್ನು ಹೊಂದಿದ್ದವು. ಹಾಗೂ ಅವುಗಳನ್ನು ಈ ಕೆಳಕಂಡಂತೆ ನೀಡಲಾಗಿದೆ.

1) ಹೆಬ್ಬಾರ್ 2) ಮಂಡ್ಯತ್ತಾರ್ 3) ಹೆಮ್ಮಿಗೇಯರ್ 4) ಮೆಟ್ಟುಕುಂತೇಯರ್ 5) ಮರುದೂರರ್ 6) ಸೋಮೇಸಂದನ್ ಅಥವಾ ಅತ್ತನ್ ಕುತ್ತತ್ತಾರ್ (ಅಂದಾನ್ ವಾರಿಸಂ) 7) ಕಲ್ಲು-ಕುಂತೇಯರ್ 8) ಪ್ರತೀವಾದಿ-ಭಯಾನಕರಾತರ್ 9) ನಲ್ಲ-ಚಕ್ರವರ್ತಿಗಳ್ 10) ಯೆಂಬರ್ 11) ಭಟ್ಟಾರಾಚಾರ್ 12) ತಿರುಮಲೈಯಾರ್ 13) ವೈಖನಾಸಲ್ 14) ಪಾಚರರ್ರಲ್ 15) ಚೋಲಿ ಹಾಗೂ ಮುಂಚೋಲಿ 16) ಈಚಾಂಬದಿಯಾರ್

**1) ಹೆಬ್ಬಾರ್**

ಇವರು ದಕ್ಷಿಣ ಭಾರತದ ಇತರರ ಭಾಗಗಳು ಶ್ರೀರಂಗ, ಕಂಜೀವರಂ ಹಾಗೂ ಕುಂಭಕೋಣ, ರಾಜಮನ್ನಾರ್, ಕೋವಿಲ್, ತಿರುಪತಿಗಳಿಂದ ಭಾರತಕ್ಕೆ ವಲಸೆ ಬಂದರು. ಅವರು ದಕ್ಷಿಣ ಭಾರತದ ಇತರೆ ಭಾಗಗಳಲ್ಲಿ ನೆಲೆಸಿದರು. ಮೂಲ ವಲಸಿಗರ ನಂತರದ ವಲಸಿಗರು ಐದು ಪಂಗಡಗಳಿಗೆ ಅಂದರೆ ಐದು ಗ್ರಾಮಗಳಿಗೆ ವಿಂಗಡಿಸಲ್ಪಟ್ಟವು. ಪಂಚಗ್ರಾಮಗಳು ಎಂದರೆ

1) ಕದಂಬ – ತುಮಕೂರು ಜಿಲ್ಲೆ
2) ಗ್ರಾಮ – ಹಾಸನ ಜಿಲ್ಲೆ
3) ಶ್ರೀರಂಗಪಟ್ಟಣ – ಮಂಡ್ಯ ಜಿಲ್ಲೆ
4) ಮಾಲೂರು – ಬೆಂಗಳೂರು ಜಿಲ್ಲೆ
5) ಬೇಲೂರು – ಹಾಸನ ಜಿಲ್ಲೆ

ಈ ಐದು ಪಂಗಡಗಳ ಸದಸ್ಯರು ಅಂತರ ವಿವಾಹವನ್ನು ಮಾಡಿಕೊಳ್ಳುತ್ತಿದ್ದರು ಹಾಗೂ ಒಟ್ಟಿಗೆ ಊಟ ಮಾಡುತ್ತಿದ್ದರು. ಅವರು ತೆರೆಗಳೈ ಹಾಗೂ ವೇದಗಳೈಗಲಾಗಿದ್ದರು ಹಾಗೂ ಅವರು ತಮಿಳು ಭಾಷೆಯನ್ನು ಮಾತನಾಡುತ್ತಿದ್ದರು.

**2) ಮಂಡ್ಯತ್ತಾರ್**

ಈ ಪಂಗಡವು ಆಂಧ್ರಪ್ರದೇಶದ ತಿರುಪತಿ ಬಳಿಯ ಮಂದಾಯಂ ಎಂಬ ಹಳ್ಳಿಗೆ ಮೂಲತಃ ವಲಸೆ ಕೈಗೊಂಡಿತು. ಅವರು ಮೇಲುಕೋಟೆ ಹಾಗೂ ಮಂದ್ಯಾಂಗಳಲ್ಲಿ ನೆಲೆಸಿದರು. ಇವುಗಳು ಅವರ ಮೂಲ ಹಳ್ಳಿಗಳಾಗಿದ್ದವು. ಇವುಗಳು ಸೋಮನಾಥಪುರವೂ ಸೇರಿದಂತೆ ಮೈಸೂರಿನಲ್ಲಿ ಬಹಳ ಹೆಚ್ಚಿನ ಪ್ರಮಾಣದಲ್ಲಿ ಕಾಣಸಿಗುತ್ತಿದ್ದವು. ಅವರೆಲ್ಲರೂ ತೆರೆಗಳೈ ಹಾಗೂ ತಮಿಳನ್ನು ಚೆನ್ನಾಗಿ ಮಾತನಾಡುತ್ತಿದ್ದರು.

**3) ಹೆಮ್ಮಿಗೇಯರ್**

ಇವರೆಲ್ಲರೂ ವೈದಿಕರಾಗಿದ್ದರು ಹಾಗೂ ವಾದಗಳೈ ಗುಂಪಿಗೆ ಸೇರಿದವರಾಗಿದ್ದರು. ಇವರು ಸೋಮನಾಥಪುರದ ಬಳೀಯೇ ಇದ್ದ ಮೈಸೂರು ಜಿಲ್ಲೆಯ ತಿರಮಲಕೂಡು ನರಸೀಪುರದ ಹೆಮ್ಮಿಗೆಯ ಬಳಿ ನೆಲೆಸಿದರು. ಅವರೂ ಕೂಡ ತಮಿಳನ್ನು ಮಾತನಾಡುತ್ತಿದ್ದರು.

**4) ಮೆಟ್ಟಾ-ಕುಂಟೀಯರ್**

ಇವರು ವಾದಗಳೈ ಪಂಥಕ್ಕೆ ಸೇರಿದವರಾಗಿದ್ದರು ಹಾಗು ಪಾರಕಾಲ ಮಠ (ಮೈಸೂರು ನಗರ)ಗಳ ಅನುಯಾಯಿಗಳಾಗಿದ್ದರು. ಅವರು ಮೈಸೂರು ಸಂಸ್ಥಾನದ ಎಲ್ಲೆಡೆಯಲ್ಲೂ ಜೀವಿಸುತ್ತಿದ್ದರು ಹಾಗೂ ತೆಲುಗು ಮತ್ತು ತಮಿಳು ಭಾಷೆಗಳನ್ನು ಮಾತನಾಡುತ್ತಿದ್ದರು.

**5) ಮರುದುದಾರ್**

ಇವರು ವಾದಗಳೈ ಪಂಥದ ಅನುಯಾಯಿಗಳಾಗಿದ್ದರು ಹಾಗೂ ಇಪ್ಪತ್ತನೆಯ ಶತಮಾನದ ಆರಂಭದ ಹೊತ್ತಿಗೆ ಕೇವಲ ಸುಮಾರು ನಲವತ್ತು ಕುಟುಂಬಗಳು ರಾಜ್ಯದಲ್ಲಿ ವಾಸಿಸುತ್ತಿದ್ದವು. ಅವರ ಭಾಷೆಯು ತಮಿಳಾಗಿತ್ತು.

**6) ಸೋಮೋಸಂದನ್**

ಇವರು ಶ್ರೀರಂಗನಿಂದ ವಲಸೆ ಕೈಗೊಂಡರು ಇವರು ಪ್ರಮುಖವಾಗಿ ವೈದಿಕರಾಗಿದ್ದು ಮೈಸೂರು ಜಿಲ್ಲೆಯಲ್ಲಿ ಕಾಣಸಿಗುತ್ತಿದ್ದರು.

**7) ಕಲ್ಲು-ಕುಂತೇಯರ್**

ಇದೊಂದು ಬೆಂಗಳೂರು ಜಿಲ್ಲೆಯ ಹೊಸಕೋಟೆಯ ತಾಲ್ಲೋಕಿನ ಬಳಿಯ ಒಂದು ಗ್ರಾಮವಾಗಿತ್ತು. ಇಲ್ಲಿ ಶ್ರೀನಿವಾಸ ಪಂಥದವರು ಜೋಡಿ ಹಳ್ಳಿಯಂತಹ ವ್ಯವಸ್ಥೆಯನ್ನು ಹೊಂದಿದ್ದರು.

**8) ಪ್ರತೀವಾದಿ-ಭಯಂಕರಾತ್ತಾರ್**

ಈ ಪಂಗಡವು ತೆಂಗಳೈ ಹಾಗೂ ವಾದಿಕ ಸಂಪ್ರದಾಯಗಳೆರಡಕ್ಕೂ ಬದ್ಧವಾಗಿತ್ತು. ತಮಿಳುನಾಡಿನ ಶ್ರೀರಂಗನಿಂದ ವಲಸೆ ಬಂದು ಅವರು ಕೋಲಾರ ಜಿಲ್ಲೆಯಲ್ಲಿ ನೆಲೆಸಿದರು. ಅವರ ಭಾಷೆಯು ತಮಿಳಾಗಿತ್ತು.

**9) ನಲ್ಲನ ಚಕ್ರವರ್ತಿ**

ವಾದಗಳೈಗಳಾಗಿದಿ ಇವರು ಕಾಂಚೀವರಂನಿಂದ ಬಂದವರು ಹಾಗೂ ರಾಜ್ಯದುದ್ದಕ್ಕೂ ಹರಡಿ ಕೊಂಡಿದ್ದರು. ಇವರು ಹೆಚ್ಚಾಗಿ ವೈದಿಕರಾಗಿದ್ದರು ಹಾಗೂ ತಮಿಳು ಭಾಷೆಯನ್ನು ಮಾತನಾಡುತ್ತಿದ್ದರು.

**10) ಯೆಂಬರ್**

ಇವರು ಶ್ರೀರಂಗಂನ ತೆಂಗಳಿಯರಾಗಿದ್ದರು ಹಾಗೂ ತಮಿಳು ಭಾಷೆಯನ್ನು ಮಾತನಾಡುತ್ತಿದ್ದರು.

**11) ಭಟ್ಟಾರಾಚಾರ್**

ಇವರು ತೆಂಗಳಿಗಳಾಗಿದ್ದು ಕೋಲಾರ ಜಿಲ್ಲೆಯವರಾಗಿದ್ದರು. ಇವರು ತಮಿಳು ಭಾಷೆಯನ್ನು ಮಾತನಾಡುತ್ತಿದ್ದರು ಹಾಗೂ ಇವರು ವೈದಿಕರಾಗಿದ್ದರು.

**12) ತಿರುಮಾಲಿಯಾರ್**

ಇವರು ಕಾಂಜೀವರಂನಿಂದ ಬಂದ ಕೋಟಿ ಕನ್ಯಾದಾನ ತಾತಾಚಾರ್ಯರ ವಂಶಸ್ಥರಾಗಿದ್ದರು. ಇವರೆಲ್ಲರೂ ವಾದಗಳೈಗಳಾಗಿದ್ದರು ಹಾಗೂ ವೈದಿಕರಾಗಿದ್ದರು. ಇವರು ರಾಜ್ಯದ ಎಲ್ಲೆಡೆಯೆಲ್ಲೂ ಕಾಣಸಿಗುತ್ತಿದ್ದರು ಹಆಗೂ ತಮಿಳು ಭಾಷೆಯನ್ನು ಮಾತನಾಡುತ್ತಿದ್ದರು.

**13) ವೈಖನಾಸಲ್**

ಇವರೆಲ್ಲರೂ ಶ್ರೀನಿವಾಸ ತತ್ವದ ದೇವಾಲಯಗಳಲ್ಲಿನ ಅರ್ಚಕರಾಗಿದ್ದರು. ಇವರ ಸ್ಥಾನಮಾನವು ಸ್ವಾರ್ಥರಲ್ಲಿದ್ದ ಶಿವ-ನಂಬಿಗಳಿಗೆ ಹೊಂದುವ ಹಾಗಿತ್ತು. ಮೊದಲು ತಿಳಿಸಿದ ಪಂಗಡಗಳ ಸದಸ್ಯರು ಇವರೊಂದಿಗೆ ಯಾವುದೇ ಸಾಮಾಜಿಕ ಸಂಬಂಧವನ್ನು ಹೊಂದಿರಲಿಲ್ಲ. ಅವರು ತೆಲುಗು ಭಾಷೆಯನ್ನು ಮಾತನಾಡುತ್ತಿದ್ದರು.

**14) ಪಂಚರತ್ರಲ್**

ಇವರೂ ಕೂಡ ಶ್ರೀನಿವಾಸ ತತ್ವಾಧಾರಿತ ದೇವಾಲಯಗಳ ಅರ್ಚಕರಾಗಿದ್ದರು. ಇವರು ಆ ಅರ್ಚಕರಲ್ಲಿ ವಾದಗಳೈ ಹಾಗೂ ತೆಂಕಳೈಗಳಿಬ್ಬರೂ ಆಗಿದ್ದರು. ಇವರು ತೆಲುಗು ಹಾಗೂ ತಮಿಳು ಭಾಷೆಯನ್ನು ಮಾತನಾಡುತ್ತಿದ್ದರು.

**15) ಚೋಲಿ ಮತ್ತು ಮುಂಚೋಲಿ**

ಇವರನ್ನು ಈ ರೀತಿ ಕರೆಯಲು ಅವರು ತಮ್ಮ ನೆತ್ತಿಯ ಮೇಲೆ ಒಂದು ಜುಟ್ಟನ್ನು ಬಿಡುತ್ತಿದ್ದುದೇ ಕಾರಣವಾಗಿತ್ತು. ಇವರು ನಂದೀದುರ್ಗ ಹಾಗೂ ಅಷ್ಟಗ್ರಾಮ ವಿಭಾಗಗಳಲ್ಲಿ ಕಾಣ

ಸಿಗುತ್ತಿದ್ದರು. ಇವರು ವಾದಗಳೈ ಹಾಗೂ ತೆಂಗಳೈಗಲೆರಡೂ ಆಗಿದ್ದು ತಮಿಳು ಭಾಷೆ ಬಲ್ಲವರಾಗಿದ್ದರು.

**16) ಕಿಲ್ಕತ್ತೂರ್**

ಈ ಪದವು ದ್ವಿಗುಣ ಅರ್ಥವನ್ನು ಹೊಂದಿದೆ. ಇದರ ಅರ್ಥ ಕೆಳಸೀಮೆಗೆ ಸೇರಿದವರು ಹಾಗೂ ಪರ್ವತಗಳ ಒಳಪ್ರದೇಶದಲ್ಲಿ ಬರುವ ಸೀಮೆ ಎಂದಾಗುತ್ತದೆ. ಮೈಸೂರಿನ ಶ್ರೀನಿವಾಸ ಪಂಥದವರೆಲ್ಲರೂ ಪರ್ವತಗಳ ಕೆಳಸೀಮೆಯಿಂದ ವಲಸೆ ಬಂದವರಾಗಿದ್ದರೆ ಕೇವಲ ಅವರಲ್ಲಿ ಒಂದು ವರ್ಗವು ಮಾತ್ರ ಸಾಂಪ್ರದಾಯಿಕ ಹೆಸರನ್ನು ಮುಂದುವರೆಸಿಕೊಂಡು ಹೋಯಿತು.

ಮೇಲಿನ ಹದಿನಾರು ಶ್ರೀನಿವಾಸ ಸ್ವಗೋತ್ರ ಗುಂಪುಗಳು ದಕ್ಷಿಣ ಕರ್ನಾಟಕದಲ್ಲಿ ಬಳಕೆಯಲ್ಲಿದ್ದವು ಎಂಬುದು ಮೇಲೆ ತಿಳಿಸಲಾದ ಪಟ್ಟಿಯಿಂದ ಗೊತ್ತಾಗುತ್ತದೆ. ಕ್ರಿ.ಶ. ಹನ್ನೆರಡನೆಯ ಶತಮಾನದ ನಂತರ ಸೋಮನಾಥಪುರದಲ್ಲಿ ಕೇವಲ ಒಂದು ಸ್ವಲ್ಪವೇ ಮಂದಿ ವಾಸಿಸುತ್ತಿದ್ದರು. ಅವುಗಳಲ್ಲಿ ಹೆಬ್ಬಾರ್, ಮಂಡ್ಯಾತ್ತರ್, ಹೆಮ್ಮಿಗೇಯರ್, ತಿರುಮಲೈಯಾರ್, ವೈಖನಾಸಾಲ್ ಹಾಗೂ ಪರಿಚಾರಾತ್ರಾಲ್ ವೈಷ್ಣವ ಪಂಗಡಗಳು ಹೆಸರಿಸಲರ್ಹವಾಗಿದೆ. ಆ ಸ್ಥಳದ ಶಾಸನಗಳೂ ಕೂಡ ಈ ಅಂಶವನ್ನು ಸೂಚಿಸುತ್ತವೆ.

ಶ್ರೀನಿವಾಸರ ಸಾಮಾಜಿಕ ಸಂಘಟನೆಯು ಒಂದು ಸಂಘಟಿತ ಅಸ್ಥಿತ್ವವನ್ನು ಹೋಲುವಂತಿತ್ತು. ಗುರುಗಳು ಅಥವಾ ಆಚಾರ್ಯಪುರರೆಂದು ಕರೆಯಲ್ಪಡುತ್ತಿದ್ದರು. ಜಾತಿ ನಿರ್ಬಂಧಗಳನ್ನು ಶಿಕ್ಷಿಸಲಾಗುತ್ತಿತ್ತು ಹಾಗೂ ಅಥವಾ ಜಾತಿ ಉಚ್ಚಾಟನೆ ಮಾಡಲಾಗುತ್ತಿತ್ತು. ಸೋಮನಾಥಪುರ ಶಾಸನಗಳು ಈ ಅಂಶವನ್ನು ಸಾಬೀತು ಪಡಿಸುತ್ತವೆ. ಈ ಜಾತಿಯ ಆಹಾರ ಪರಿಕ್ರಮದ ಬಗ್ಗೆ ಮಾತನಾಡುವುದಾದರೆ ಅವರೆಲ್ಲರೂ ಶುದ್ಧ ಸಸ್ಯಾಹಾರಿಗಳಾಗಿದ್ದರು.

ಸೋಮನಾಥಪುರ ಶಾಸನಗಳಲ್ಲಿ ಅಗ್ರಹಾರದ ಹಿರಿಯ ಮಹಾಜನರ ಬಗ್ಗೆ ಕೇಳುತ್ತೇವೆ. ಭೂ ಆಸ್ತಿಗೆ ಸಂಬಂಧಿಸಿದಂತೆ ಮಾಡಿದ ಒಂದು ಒಪ್ಪಂದಕ್ಕೆ ಸೇರಿದಂತೆ ಅವರನ್ನು ಮುಂದೆ ತರಬೇಕಾಗುತ್ತದೆ. ಸಾಮಾನ್ಯವಾಗಿ ಹಿರಿಯ ಮಹಾಜನರು ಹಾಗೂ ಅವರನ್ನೊಳಗೊಂಡಂತೆ ಆಚಾರ್ಯ ಪುರುಷರ ಸಮಿತಿಯು ಅಲ್ಲಿನ ವಸಾಹತುವಿಗೆ ಸಂಬಂಧಿಸಿದ ಸಾಮಾಜಿಕ ಹಾಗೂ

ಧಾರ್ಮಿಕ ಅಂಶಗಳು ಕಾರ್ಯ ನಿರ್ವಹಣೆಯನ್ನು ಕೈಗೆತ್ತಿಕೊಂಡವು. ವೈಷ್ಣವ ಮಹಾಜನರು ಸೋಮನಾಥಪುರದ ಮಧ್ಯಭಾಗದಲ್ಲಿ ವಾಸಿಸುತ್ತಿದ್ದರು. ಹಾಗೂ ಅವರ ಪ್ರದೇಶವು ತತ್ತುಗಳಾಗಿ ವಿಂಗಡಿಸಲ್ಪಟ್ಟಿತ್ತು. ತತ್ತು- ಎನ್ನುವುದು ಒಂದು ಬೀದಿ ಅಥವಾ ಪ್ರದೇಶ ಎನ್ನುತ್ತಾರೆ. ಇವುಗಳು ಸಂಖ್ಯೆಯಲ್ಲಿ ಬಹುಶಃ ಆರು ಇದ್ದವು. ಶ್ರೀನಿವಾಸರಲ್ಲಿ ಒಂದು ಗುರುಗಳ ಗುಂಪೊಂದಿತ್ತು. ಇವರು ವೈಜ್ಞಾನಿಕ ಹಾಗೂ ಧಾರ್ಮಿಕ ಜ್ಞಾನವನ್ನು ಹೆಚ್ಚು ಬಳಸಿಕೊಡುತ್ತಿದ್ದರು. ಅವರ ಸೇವೆಗಾಗಿ ಅವರಿಗೆ ತೋಟದ ಭೂಮಿ ನೀರಾವರಿ ಭೂಮಿ ಹಾಗೂ ತೀರ್ಥ ವೃತ್ತಿ ಎಂದು ಕರೆಯಲಾಗುತ್ತಿದ್ದ ಖುಷ್ಕಿ ಭೂಮಿಯಲ್ಲಿದ್ದವು.

ಶಾಸನಗಳ ಪ್ರಕಾರ ಇಪ್ಪತ್ತು ವೈಷ್ಣವರು, ವಿಷ್ಣುಪುರಾಣ, ಭಾಗವತ, ಮಹಾಭಾರತ ಹಾಗೂ ರಾಮಾಯಣ ಮತ್ತು ಮಹಾಭಾರತಗಳನ್ನು ಓದಿ ಜೀರ್ಣಿಸಿಕೊಂಡು ಒಬ್ಬ ಆಚಾರ್ಯ ಹಾಗೂ ಪೌರಾಣಿಕನೋರ್ವರೊಡಗೂಡಿ ಅವುಗಳ ಅರ್ಥವನ್ನು ಬಹಳ ಅಚ್ಚುಕಟ್ಟಾಗಿ ನಿರ್ವಹಿಸ ಬೇಕಾಗಿತ್ತು. ಇವರೆಲ್ಲರೂ ಕೇಶವ ದೇವಾಲಯಕ್ಕೆ ಸೇರಿದವರಾಗಿದ್ದರು. ಬಹಳ ಕುತೂಹಲ ಕಾರಿಯಾದ ಸಂಗತಿಯೆಂದರೆ ವಿಷ್ಣು ದೇವಾಲಯ ಸಿಬ್ಬಂದಿಯಲ್ಲಿ ನಂಬಿಗಳೆಂಬ ಹೆಸರನ್ನು ನಾವು ಕೇಳುತ್ತೇವೆ. ನಂಬಿಗಳು ಶಿವ ಬ್ರಾಹ್ಮಣರು ಬಹುಶಃ ಸಣ್ಣ ಗುಡಿಗಳಲ್ಲಿ ಪ್ರತಿಷ್ಠಾಪಿಸಲಾಗಿದ್ದ ಶಿವ ಮೂರ್ತಿಗಳನ್ನು ಆರಾಧಿಸಲು ಅವರನ್ನು ನೇಮಕ ಮಾಡಿಕೊಳ್ಳಲಾಗಿತ್ತು.

ಶ್ರೀನಿವಾಸ ಬ್ರಾಹ್ಮಣರ ಜೊತೆಯಲ್ಲಿ ಸೋಮನಾಥಪುರದ ಸಾಮಾಜಿಕ ರಚನೆಯ ಉನ್ನತ ಶ್ರೇಣಿಯಲ್ಲಿ ಸ್ಮಾರ್ಥ ಬ್ರಾಹ್ಮಣರೂ ಕೂಡ ಇದ್ದರು. ಏಕೆಂದರೆ ಕೇಶವ ದೇವಾಲಯದ ಹತ್ತಿರವೆ ಇನ್ನೊಂದು ಪಂಚಲಿಂಗ ದೇವಾಲಯವು ಹುಟ್ಟಿಕೊಂಡಿತು. ಸ್ಮಾರ್ಥ ಬ್ರಾಹ್ಮಣರ ಪ್ರತ್ಯೇಕ ವಾಸಸ್ಥಾನ ವಾದ ಶೈವಸ್ಥಾನದ ಅಸ್ಥಿತ್ವಕ್ಕೆ ಶಾಸನಗಳಲ್ಲಿ ಒಂದು ಉಲ್ಲೇಖವನ್ನು ಮಾಡಲಾಗಿದೆ.

ಸ್ಮಾರ್ಥ ಎಂಬ ಪದವು ಸಾಂಪ್ರದಾಯಿಕ ನೀತಿ ನಿಯಮಾವಳಿಗಳನ್ನೊಳಗೊಂಡ ಸ್ಮೃತಿಯಿಂದ ತೆಗೆದುಕೊಳ್ಳಲಾಗಿದೆ. ಅವರು ವಿಷ್ಣು ಹಾಗೂ ಶಿವನನ್ನು ಆರಾಧಿಸಿದರೂ ಅವರು ಶಿವನಿಗೆ ಹೆಚ್ಚು ಆದ್ಯತೆಯನ್ನು ನೀಡುತ್ತಿದ್ದರು. ಇವರೆಲ್ಲರೂ ಕ್ರಿ.ಶ. ಎಂಟನೇ ಶತಮಾನದ ಪ್ರಖ್ಯಾತ ಅದ್ವೈತ ಪ್ರತಿಪಾದಕರಾದ ಶಂಕರಾಚಾರರ ಅನುಯಾಯಿಗಳಾಗಿದ್ದರು. ಕರ್ನಾಟಕದ ಚಿಕ್ಕಮಗಳೂರು ಜಿಲ್ಲೆಯ ಶೃಂಗೇರಿಯ ಬಳಿ ಅವರು ಒಂದು ಮಠವನ್ನು ಸ್ಥಾಪಿಸಿದ್ದರು. ಪ್ರಾಯಶಃ ಸೋಮನಾಥ

ಪುರದ ಸ್ಮಾರ್ಥ ಬ್ರಾಹ್ಮಣರು ಈ ಮಠದ ಜಗದ್ಗುರುವಿಗೆ ವಿಧೇಯತೆಯನ್ನು ತೋರಿದ್ದರು ಎಂಬುದು ತಿಳಿದು ಬರುತ್ತದೆ.

ಸೋಮನಾಥಪುರದಲ್ಲಿ ನೆಲೆಸಿದ್ದ ಬ್ರಾಹ್ಮಣರ ಪ್ರಮುಖ ಕರ್ತವ್ಯವು ಸ್ವ ಅಧ್ಯಾಯವಾಗಿತ್ತು. ಅವರು ವೇದಗಳು, ಉಪನಿಷದ್ ಪುರಾಣಗಳು, ಮಹಾಭಾರತ, ರಾಮಾಯಣ ಹಾಗೂ ಭಾಗವತಗಳನ್ನು ಅಭ್ಯಸಿಸುತ್ತಿದ್ದರು. ಇದರ ಜೊತೆಯಲ್ಲಿ ಅವರು ವೈಜ್ಞಾನಿಕ ಹಾಗೂ ಧಾರ್ಮಿಕ ಕೋಶಗಳನ್ನೋದಿ ತಮ್ಮ ಜ್ಞಾನವನ್ನು ಹೆಚ್ಚು ಮಾಡಿಕೊಂಡರು. ಕೇಶವ ದೇವಾಲಯ ಸಿಬ್ಬಂದಿಯ ಪಟ್ಟಿಯಲ್ಲಿ ನಾವು ಪೌರಾಣಿಕವು ಅದರೊಂದಿಗೆ ಸೇರಿರುವುದನ್ನು ನೋಡುತ್ತೇವೆ. ಇವನೋರ್ವ ಶ್ರೀನಿವಾಸ ಬ್ರಾಹ್ಮಣನಾಗಿದ್ದು ಪುರಾಣಗಳ ಪಠನೆ ಹಾಗೂ ಭಜನೆಗಳಲ್ಲಿ ಪಾಂಡಿತ್ಯವನ್ನು ಸಾಧಿಸುತ್ತಿದ್ದ ದೇವಲಯಗಳಲ್ಲಿ ಇವನದು ಬಹು ಪ್ರಮುಖವಾದ ಪಾತ್ರ ಹಾಗೂ ಇವನು ಜನರಲ್ಲಿ ಶ್ರೀನಿವಾಸ ದೇವರ ಪ್ರಾಮುಖ್ಯತೆಯನ್ನು ಸ್ಪಷ್ಟಪಡಿಸುತ್ತಿದ್ದನು. ಆದ್ದರಿಂದ ಸೋಮನಾಥಪುರವು ಕೇವಲ ಆರಾಧನಾ ಸ್ಥಾನವಾಗಿರದೆ ಶೈಕ್ಷಣಿಕ ಕೇಂದ್ರವಾಗಿಯೂ ಕೂಡ ಆಗಿತ್ತು.

ದೇವಾಲಯ ಸಮುಚ್ಚಯವು ಧಾರ್ಮಿಕ ಆಚರಣೆಗಳ ಸಂದರ್ಭದಲ್ಲಿ ಪುರೋಹಿತರಾಗಿ ಕೆಲಸ ನಿರ್ವಹಿಸಲು ಬ್ರಾಹ್ಮಣರಿಗೆ ಉದ್ಯೋಗ ಅವಕಾಶಗಳನ್ನು ಕಲ್ಪಿಸಿಕೊಡುತ್ತಿತ್ತು. ಕೇಶವ ದೇವಾಲಯದಲ್ಲಿ ಈ ಪುರೋಹಿತರನ್ನು ವೈಷ್ಣವರೆಂದೇ ಸಂಭೋದಿಸಲಾಗುತ್ತಿತ್ತು. ಕೇಶವ ದೇವಾಲಯಕ್ಕೆ ಹೊಂದಿಕೊಂಡಂತೆ ಇಪ್ಪತ್ತು ವೈಷ್ಣವರಿದ್ದರು ಹಾಗೂ ಆರು ನಂಬಿಗಳು ಶಿವದೇವಾಲಯದಲ್ಲಿ ಅರ್ಚಕರಾಗಿ ಸೇವೆ ಸಲ್ಲಿಸುತ್ತಿದ್ದರು. ಎರಡೂ ದೇವಾಲಯಗಳಲ್ಲಿನ ಆಚಾರ್ಯರು ಶ್ರೇಷ್ಠತಮ ಸ್ಥಾನಮಾನಗಳನ್ನು ಅಲಂಕರಿಸಿದ್ದರು ಹಾಗೂ ಪ್ರಾಯಶಃ ಆಗಮ ಶಾಸ್ತ್ರಗಳ ಪ್ರಾಕಾರವಾಗಿ ದೇವಾಲಯ ಆರಾಧನೆಯನ್ನು ನಿರ್ದೇಶಿಸುತ್ತಿದ್ದರು.

ದೇವಾಲಯ ಸಮುಚ್ಚಯವು ಧಾರ್ಮಿಕ ಆಚರಣೆಗಳ ಸಂದರ್ಭದಲ್ಲಿ ಪುರೋಹಿತರಾಗಿ ಕೆಲಸ ನಿರ್ವಹಿಸಲು ಬ್ರಾಹ್ಮಣರಿಗೆ ಉದ್ಯೋಗ ಅವಕಾಶಗಳನ್ನು ಕಲ್ಪಿಸಿಕೊಡುತ್ತಿತ್ತು. ಕೇಶವ ದೇವಾಲಯದಲ್ಲಿ ಈ ಪುಉರೋಹಿತರನ್ನು ವೈಷ್ಣವರೆಂದೇ ಸಂಭೋದಿಸಲಾಗುತ್ತಿತ್ತು. ಕೇಶವ ದೇವಾಲಯಕ್ಕೆ ಹೊಂದಿಕೊಂಡಂತೆ ಇಪ್ಪತ್ತು ವೈಷ್ಣವರಿದ್ದರು ಹಾಗೂ ಆರು ನಂಬಿಗಳು ಶಿವದೇವಾಲಯದಲ್ಲಿ ಅರ್ಚಕರಾಗಿ ಸೇವೆ ಸಲ್ಲಿಸುತ್ತಿದ್ದರು. ಎರಡೂ ದೇವಾಲಯಗಳಲ್ಲಿನ

ಆಚಾರ್ಯರು ಶ್ರೇಷ್ಟತಮ ಸ್ಥಾನಮಾನಗಳನ್ನು ಅಲಂಕರಿಸಿದ್ದರು ಹಾಗೂ ಪ್ರಾಯಶಃ ಆಗಮ ಶಾಸ್ತ್ರಗಳ ಪ್ರಾಕಾರವಾಗಿ ದೇವಾಲಯ ಆರಾಧನೆಯನ್ನು ನಿರ್ದೇಶಿಸುತ್ತಿದ್ದರು.

ಬದಲಾದ ಪರಿಸ್ಥಿತಿಗಳ ಒತ್ತಡದ ಮೇರೆಗೆ ಹಾಗೂ ಸಾಮಾಜಿಕ ಮತ್ತು ಆರ್ಥಿಕ ಅವಶ್ಯಕತೆಗಳ ಕಟ್ಟುಪಾಡುಗಳಿಗೆ ಸಿಲುಕಿ ಅನೇಕ ಬ್ರಾಹ್ಮಣರು ತಮ್ಮ ತಲತಲಾಂತರದಿಂದ ಬಂದ ಬೋಧನಾ ಹಾಗೂ ಪುರೋಹಿತ ವ್ಯಕ್ತಿಯನ್ನು ಅನುಸರಿಸಲಾಗಲಿಲ್ಲ. ಇದರ ಜೊತೆಗೆ ಅನೇಕ ಬ್ರಾಹ್ಮಣರು ಮೇಲಿನ ವೃತ್ತಿಗಳಿಗೆ ಸೂಕ್ತವಾದ ಅರ್ಹತೆಯನ್ನು ಹೊಂದಿರಲಿಲ್ಲ. ಆದ್ದರಿಂದ ಬಹಳ ಮಂದಿ ದೇವಾಲಯ ಸಮುಚ್ಛಯದಲ್ಲಿ ನಾನಾ ಬಗೆಯ ಸಣ್ಣಪುಟ್ಟ ಕಾಯಕಗಳನ್ನೇ ತಮ್ಮ ಕಸುಬನ್ನಾಗಿಸಿಕೊಂಡರು. ಸೋಮನಾಥಪುರ ಶಾಸನದಲ್ಲಿ ದೊರೆತಿರುವ ಪಟ್ಟಿಯಿಂದ ಅನೇಕ ಬ್ರಾಹ್ಮಣರು ದೇವರ ಅಲಂಕಾರಿಕರಾಗಿ, ನೀರಿನ ಸರಬರಾಜುಗಾರರಾಗಿ, ಪೂಜೆಗಾಗಿ ಬೇಕಾದ ಗಂಧದ ಹಿಟ್ಟನ್ನು ತಯಾರಿಸುವವರಾಗಿ ಹಾಗೂ ಚಾಮರ ಬೀಸುವವರಾಗಿ ನೇಮುಕಗೊಂಡಿದ್ದರು ಎಂಬುದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಇವರಲ್ಲಿ ಸ್ಥಾನಿಕರು ಅಥವಾ ವ್ಯವಸ್ಥಾಪಕರು, ಸೇನಾ ಬೋವರು ಅಥವಾ ಲೆಖ್ಖಿಗರ ಬಗ್ಗೆ ಉಲ್ಲೇಖವನ್ನು ನೀಡಬಹುದು ಅಪ್ಪನೇಯವರು ಅಥವಾ ಅಧಿಕಾರಿಗಳು ಹಾಗೂ ಅಡ್ಡಿಕರು ಅಥವಾ ದೇವಾಲಯದ ಮೊಹರಿನ ಅಧಿಕಾರಿಗಳ ಬಗ್ಗೆ ಹೇಳುವುದು ಸಮರ್ಥನೀಯವೆನಿಸುತ್ತದೆ. ಬ್ರಾಹ್ಮಣರು ದೇವಾಲಯ (ಅಡುಗೆ ಮನೆ) ಪಾಕಶಾಲೆ ಗಳಲ್ಲಿ ಭಟ್ಟರಾಗಿ ಅಡುಗೆಯವರುಗಳಾಗಿಯೂ ಕಾರ್ಯ ನಿರ್ವಹಿಸುತ್ತಿದ್ದರು. ಈ ತೆರನಾಗಿ ಸೋಮನಾಥಪುರದ ಬ್ರಾಹ್ಮಣರನ್ನು ಮೂರು ಪಂಗಡಗಳಾಗಿ ವಿಂಗಡಿಸಬಹುದು. 1. ಅತಿ ಮಾನವ ಬ್ರಾಹ್ಮಣರು ಅಥವಾ ಆಚಾರ್ಯರು 2. ಪುರೋಹಿತ ಬೋಧಕ ಬ್ರಾಹ್ಮಣರು 3. ದೇವಾಲಯ ಸಮುಚ್ಛಯದಲ್ಲಿ ಆಡಳಿತಾತ್ಮಕ ಹಾಗೂ ಕೆಳಸೇವೆಗಳಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದವರು.

ಆದಾಗ್ಯೂ ದೇವಾಲಯ ಸಮುಚ್ಛಯದಲ್ಲಿ ಯಾವುದೇ ಶ್ರೇಣಿಯ ಕೆಲಸವನ್ನು ನಿರ್ವಹಿಸುತ್ತಿದ್ದರೂ ಸಮಾಜದಲ್ಲಿ ಅವರಿಗೆ ಉನ್ನತವಾದ ಸ್ಥಾನಮಾನವೂ ಅಭಾದಿತವಾಗಿತ್ತು.

ಸಮಾಜದ ಅತ್ಯಂತ ಮುಖ್ಯವಾದ ಅಂಶಗಳಲ್ಲಿ ಸೋಮನಾಥಪುರದಲ್ಲಿ ಕಂಡುಬಂದಂತೆ ಬ್ರಾಹ್ಮಣರಿಂದ ಮಾಡಲ್ಪಡಬೇಕಾದ ಸಂಸ್ಕಾರಗಳು ಒಂದಾಗಿದ್ದವು. ಆ ಕಾಲದ ಬ್ರಾಹ್ಮಣ ಜನಾಂಗದಲ್ಲಿ ಸಂಸ್ಕಾರಗಳು ಅತ್ಯಂತ ಪ್ರಮುಖವಾದ ಪಾತ್ರವನ್ನು ನಿರ್ವಹಿಸುತ್ತಿದ್ದವು. ಈ

ವೈಶಿಷ್ಟದ ಬಗ್ಗೆ ಕೆಳಗಿನ ಮೂಲಗಳಿಂದ ಪ್ರತ್ಯಕ್ಷ ಹಾಗೂ ಪರೋಕ್ಷವಾದ ಮಾಹಿತಿಯು ನಮಗೆ ದೊರೆಯುತ್ತದೆ. ನಮ್ಮ ಮಾಹಿತಿಯ ಮೂಲವು ವಿಷ್ಣು ಪುರಾಣ, ಇದು ಈ ದೇವಾಲಯ ಸಮುಚ್ಛಯದ ಶ್ರೀನಿವಾಸ ದೇವರ ಸಾಮಾಜಿಕ ಸಂಘಟನೆಯ ಆಧಾರವಾಗಿತ್ತು. ಎರಡನೆಯದಾಗಿ ಕೆಲವು ಸಂಸ್ಕಾರವನ್ನು ವಿವರಿಸುವ ಶಿಲ್ಪಕಲಾ ಪ್ರತಿನಿಧಿತ್ವವೂ ಕೂಡ ದೊರಕಿದೆ. ವಿಶೇಷವಾಗಿ ಸೀಮಂತ, ಜಾತ ಕರ್ಮ, ನಾಮಕರಣ, ಚೂಡಾಕರ್ಮ, ಉಪನಯನ ಹಾಗೂ ವಿವಾಹಗಳು ಪ್ರಮುಖವಾಗಿದೆ. ಮೂರನೆಯದಾಗಿ ದೇವಾಲಯ ಸಂಕೀರ್ಣವು ಪ್ರಾಯಶಃ ವೈಷ್ಣವ ಬಹುಸಂಖ್ಯೆಯನ್ನು ಹೊಂದಿತ್ತೆಂದು ತೋರುತ್ತದೆ. ಏಕೆಂದರೆ ಶಿವನಿಗೆ ಕಟ್ಟಲಾಗಿರುವ ಕಟ್ಟಡಕ್ಕಿಂತ ಕೇಶವ ಹಾಗೂ ಇತರೆ ಸಣ್ಣ ದೇವಾಲಯಗಳ ಕಟ್ಟಡಗಳು ಬಹಳ ದೊಡ್ಡದಾಗಿದೆ. ಆದ್ದರಿಂದ ಟಿ.ಎಂ.ದಯಾಳ್ ಪ್ರಕಾರ ಕ್ರಿ.ಶ. ಒಂದನೇ ಶತಮಾನ ಹಾಗೂ ಕ್ರಿ.ಶ. ನಾಲ್ಕನೆಯ ಶತಮಾನದ ಆರಂಭದ ಭಾಗದ ನಡುವೆ ಈಗಿರುವ ಸ್ವರೂಪದಲ್ಲಿ ಬರೆಯಲಾದ ವಿಷ್ಣು ಪುರಾಣದಲ್ಲಿ ದಾಖಲಾಗಿರುವಂತೆ ಕೆಲವು ಸಂಸ್ಕಾರಗಳನ್ನು ಸಂಕ್ಷಿಪ್ತವಾಗಿ ವಿವರಿಸುವುದು ಈಗ ಬಹಳ ಅವಶ್ಯಕವಾಗಿದೆ. ವಿಷ್ಣು ಪುರಾಣವು ಸಂಸ್ಕೃತ ಭಾಷೆಯಲ್ಲಿ ವಿದ್ವತ್ತನ್ನು ಗಳಿಸಿದ್ದ ಕರ್ನಾಟಕದ ಬುದ್ಧಿಶಾಲಿಗಳಿಗೆ ತಿಳಿದಿದ್ದರೂ ವಿಷ್ಣು ಪುರಾಣವನ್ನು ಆಧರಿಸಿ ಕ್ರಿ.ಶ. ಹನ್ನೆರಡನೆಯ ಶತಮಾನದಲ್ಲಿ ಜಗನ್ನಾಥ ವಿಜಯ ಎಂಬ ಶಿರೋನಾಮೆಯೊಂದಿಗೆ ಕನ್ನಡ ಕಾವ್ಯ ಸಂಜೀವಿನಿಯಾಗಿ ರುದ್ರಭಟ್ಟನಿಂದ ಬರೆಯಲ್ಪಟ್ಟಿತು ಹಾಗೂ ಇದು ಕನ್ನಡಿಗ ಶ್ರೀನಿವಾಸ ಅನುಯಾಯಿಗಳನ್ನು ನಿರ್ದೇಶಿಸಿತು ಎಂಬ ಅಂಶವು ಇಲ್ಲಿ ಗಣನಾರ್ಹವಾಗಿದೆ. ಇದು ಕರ್ನಾಟಕದಲ್ಲಿ ಜೀವಿಸಿದ್ದ ಶ್ರೀನಿವಾಸ ಅನುಯಾಯಿಗಳ ಮೇಲೆ ಎಂತಹ ಪರಿಣಾಮವನ್ನು ಬೀರಿತ್ತು ಎಂಬುದನ್ನು ಸೂಚಿಸುತ್ತದೆ. ಆದ್ದರಿಂದ ವಿಷ್ಣು ಪುರಾಣದಲ್ಲಿ ವಿವರಿಸಲಾಗಿರುವ ಸಾಮಾಜಿಕ ವಿಧಿಗಳು ರೂಢಿ ಆಚರಣೆಗಳು ಹಾಗೂ ಆದರ್ಶಗಳು ಸೋಮನಾಥಪುರದ ಸಾಮಾಜಿಕ ರಚನೆಯ ಮೇಲೆ ಹದಿಮೂರನೇ ಶತಮಾನದಿಂದಲೂ ಪ್ರಭಾವವನ್ನು ಬೀರಿದ್ದವು.

ಸೀಮಂತ ಎಂಬ ಸಂಸ್ಕಾರವನ್ನು ಸ್ತ್ರೀಯೊಬ್ಬಳು ಗರ್ಭವತಿಯಾಗಿದ್ದಾಗ ಆಚರಿಸಲಾಗುತ್ತಿತ್ತು. ಹಾಗೂ ಗರ್ಭದಲ್ಲಿರುವ ಮಗುವನ್ನು ಎಲ್ಲಾ ವಿಧವಾದ ದುಷ್ಟಶಕ್ತಿಗಳಿಂದ ನಿರ್ವಿಘ್ನವಾಗಿರಿಸುವುದು ಇದರ ಪ್ರಮುಖ ಉದ್ದೇಶವಾಗಿತ್ತು. ಗರ್ಭವತಿಯನ್ನು ಜೋಪಾನ ಮಾಡಲು ಹಾಗೂ ಅವಳನ್ನು ಸಂತೋಷದ ಭಾವನೆಯಲ್ಲಿರಲು ಇದನ್ನು ಆಚರಿಸಲಾಗುತ್ತಿತ್ತು.

ಜಾತಕರ್ಮ ಸಂಸ್ಕಾರವು ಮಗುವಿನ ಜನನದ ಸಂದರ್ಭದಲ್ಲಿ ಆಚರಿಸಲಾಗುತ್ತಿದ್ದ ಇನ್ನೊಂದು ಆಚರಣೆಯಾಗಿತ್ತು. ಮಗುವಿನ ನಂತರ ಆಚರಿಸಲಾಗುತ್ತಿದ್ದ ಹಲವಾರು ಆಚರಣೆಗಳನ್ನು ವಿಷ್ಣುಪುರಾಣವು ವಿವರಿಸುತ್ತದೆ. ತಂದೆಯು ಸ್ನಾನ ಮಾಡಿ ನಂದಿಶ್ರಾದ್ಧ ಹಾಗೂ ಜಾತಕ ಕರ್ಮ ವಿಧಿಗಳನ್ನು ಆಚರಿಸಬೇಕಾಗಿತ್ತು. ಈ ಸಂದರ್ಭಕ್ಕಾಗಿ ಆಹ್ವಾನಿಸಲಾಗಿದ್ದ ಬ್ರಾಹ್ಮಣರಿಗೆ ಅನ್ನ ಸಂತರ್ಪಣೆಯಾಗುತ್ತಿತ್ತು. ಶ್ರಾದ್ಧಗಳನ್ನು ದೇವರು ಹಾಗೂ ಪೂರ್ವ ಜನರನ್ನು ತೃಪ್ತಿಪಡಿಸುವ ಉದ್ದೇಶದಿಂದಲೂ ಆಚರಿಸಲಾಗುತ್ತಿತ್ತು.

ನಾಮಕರಣ ಸಂಸ್ಕಾರವನ್ನು ಒಂದು ನಿರ್ದಿಷ್ಟ ಮಂಗಳಕರ ಸಂದರ್ಭದಲ್ಲಿ ಮಗುವಿಗೆ ಹೆಸರನ್ನಿಡಲು ಆಚರಿಸಲಾಗುತ್ತಿತ್ತು. ವಿಷ್ಣು ಪುರಾಣವು ಈ ಸಂಸ್ಕಾರದ ಬಗ್ಗೆ ಕೆಲವು ಮಾಹಿತಿಗಳನ್ನು ಒದಗಿಸಿದೆ. ಮಗುವು ಹುಟ್ಟಿದ ಹತ್ತು ದಿವಸಗಳ ನಂತರ ಹತ್ತನೆಯ ದಿನದಂದು ಆಚರಿಸಲಾಗುತ್ತಿತ್ತು ಹಾಗೂ ಮಗುವಿನ ಹೆಸರನ್ನಿಡುವ ಕಾರ್ಯಕ್ರಮವೂ ಅಂದೇ ಮುಕ್ತಾಯ ವಾಗುತ್ತಿತ್ತು.

ವಿಷ್ಣು ಪುರಾಣದಲ್ಲಿ ತಿಳಿಸಲಾಗಿರುವಂತೆ ಮಗುವಿನ ಮೊದಲ ಹೆಸರು ದೇವರ ಹೆಸರಾಗಿರಬೇಕು. ನಾಲ್ಕು ಜಾತಗಳಿಗಿದ್ದ ಉಪನಾಮಗಳೆಂದರೆ ಕ್ರಮವಾಗಿ ಬ್ರಾಹ್ಮಣರಿಗೆ ಸರ್ಮನ್, ಕ್ಷತ್ರಿಯರಿಗೆ ವರ್ಮನ್, ವೈಶ್ಯರಿಗೆ ಗುಪ್ತ ಎಂದೂ ಹಾಗೂ ಶೂದ್ರರಿಗೆ ದಾಸ ಎಂಬವುಗಳಾಗಿದ್ದವು.

ಚೂಡಕರ್ಮ ಸಂಸ್ಕಾರವು ಮಗುವಿನ ಕೇಶವನ್ನು ಕತ್ತರಿಸುವ ಸಂದರ್ಭದಂದು ಆಚರಿಸಲಾಗುತ್ತಿತ್ತು. ಇದನ್ನು ಸಾಮಾನ್ಯವಾಗಿ ಮೊದಲು ಅಥವಾ ಮೂರನೆಯ ವರ್ಷದಲ್ಲಿ ಆಚರಿಸಲಾಗುತ್ತಿತ್ತು. ಈ ಸಂಸ್ಥಾನದ ಹಿಂದೆ ಇದ್ದ ಉದ್ದೇಶವು ಮಗುವಿನ ಉತ್ತಮ ಆರೋಗ್ಯವನ್ನು ಕಾಪಾಡುವುದಾಗಿತ್ತು.

ಉಪನಯನ ಸಂಸ್ಕಾರವು ವೇದಗಳ ಕಾಲದಿಂದಲೂ ಅಸ್ಥಿತ್ವದಲ್ಲಿದೆ ಹಾಗೂ ಇದರ ಶಿಲ್ಪಕಲಾ ಪ್ರಾತಿನಿಧತ್ವವನ್ನು ಸೋಮನಾಥಪುರದ ಬಳಿಯ ಕೇಶವ ದೇವಾಲಯದಲ್ಲಿ ನೋಡುತ್ತೇವೆ. ಈ ಸಂಸ್ಕಾರವನ್ನು ಬಲರಾಮ, ಕೃಷ್ಣ ಹಾಗಾ ಸಾಗರರು ಕೈಗೊಂಡಿದ್ದನ್ನು ವಿಷ್ಣು ಪುರಣಾವು ಉಲ್ಲೇಖಿಸುತ್ತದೆ. ಈ ಸಂಸ್ಕಾರದಿಂದ ಹುಡುಗನು ಬ್ರಹ್ಮಚರ್ಯಕ್ಕೆ ತನ್ನ ಪ್ರವೇಶ

ಮಾಡುತ್ತಿದ್ದನು ಹಾಗೂ ಇದು ವ್ಯಕ್ತಿಯ ಸಾಂಸ್ಕೃತಿಕ ಪರಂಪರೆಯ ಸದಸ್ಯನಾಗಿ ಹೊಂದಿದ ಆಧ್ಯಾತ್ಮಿಕ ಜನನವಾಗಿತ್ತು. ಈ ಆಚರಣೆಯು ವೇದಗಳು, ಶಾಸ್ತ್ರ, ಪುರಾಣ, ಮಹಾಭಾರತ ಹಾಗೂ ರಾಮಾಯಣಗಳನ್ನು ಅಧ್ಯಯನ ಮಾಡಲು ಸಾಂಕೇತಿಕ ರಹದಾರಿಯಾಗಿ ಪರಿಣಮಿಸಿತ್ತು. ಸೋಮನಾಥಪುರದಲ್ಲಿ ನೆಲೆಸಿದ್ದ ಶ್ರೀ ವೈಷ್ಣವ ಹಾಗೂ ಶೈವ ಬ್ರಾಹ್ಮಣರಿಬ್ಬರಿಗೂ ಈ ಸಂಸ್ಕಾರಗಳು ಸಾಮಾನ್ಯವಾಗಿದ್ದವು. ಮದುವೆ ಆಚರಣೆಗೆ ಸಂಬಂಧಿಸಿದಂತೆ ಯಾವುದೇ ನೇರ ದಾಖಲೆಯು ಲಭ್ಯವಿಲ್ಲ. ಆದರೂ ಕೇಶವ ದೇವಾಲಯದ ಗೋಡೆಗಳ ಮೇಲೆ ವಿವಾಹದ ದೃಶ್ಯಗಳನ್ನು ಕೆತ್ತಲಾಗಿದೆ. ಸಾಮಾನ್ಯ ಪರಿಸ್ಥಿತಿಗಳಲ್ಲಿ ಎಲ್ಲಾ ಬ್ರಾಹ್ಮಣ ಪಂಗಡಗಳೂ ಸಹ ಏಕ ಪತ್ನೀವ್ರತವನ್ನು ಅನುಸರಿಸುತ್ತಿದ್ದರು. ಆದರೆ ಇನ್ನಿತರ ಸಂಸ್ಕಾರಗಳ ವಿಷಯಗಳಲ್ಲಿ ಪುರಾಣಗಳು ಹಾಗೂ ಶಾಸ್ತ್ರಗಳು ಬ್ರಾಹ್ಮಣರಿಗೆ ಬೇಕಾದ ಮಾರ್ಗದರ್ಶನವನ್ನು ನೀಡುತ್ತಿದ್ದವು ಎಂಬ ಅಂತಿಮ ನಿರ್ಧಾರಕ್ಕೆ ಬರಬಹುದು. ಸಂಕ್ಷಿಪ್ತವಾಗಿ ಹೇಳುವುದಾದರೆ ಸೋಮನಾಥಪುರದ ಬ್ರಾಹ್ಮಣರ ಜೀವನವು ಸಾಂಪ್ರದಾಯಿಕ ಸೊಗಡಿನ ಆಸುಪಾಸಿನಲ್ಲೇ ರಚಿತವಾಗಿತ್ತು. ಈ ಪ್ರವೃತ್ತಿಯ ಜೀವಂತ ಸಾಕ್ಷಿ ದೇವಾಲಯ ಕ್ರಿಯಾವಿಧಿಗಳು ಹಾಗೂ ಆಚರಣೆಗಳೇ ಆಗಿವೆ.

ವರ್ಣ ಪದ್ಧತಿಯಲ್ಲಿ ಬ್ರಾಹ್ಮಣರ ನಂತರ ಕ್ಷತ್ರಿಯರು ಎರಡನೇ ಶ್ರೇಣಿಯಲ್ಲಿರುವುದನ್ನು ನಾವು ನೋಡುತ್ತೇವೆ. ಆದರೆ ಸೋಮನಾಥಪುರದ ವಿಷಯದಲ್ಲಿ ಹೇಳುವುದಾದರೆ ಇಂತಹ ನಿರ್ದಿಷ್ಟವಗಿ ಕ್ಷತ್ರಿಯರೆಂದು ಕರೆಯಲ್ಪಡುತ್ತಿದ್ದ ಒಂದು ಸಾಮಾಜಿಕ ಗುಂಪು ಅಸ್ಥಿತ್ವದಲ್ಲಿತ್ತು ಎಂದು ಹೇಳುವುದು ಸಂಶಯಾಸ್ಪದವಾಗಿದೆ. ಈ ಸಾಮಾಜಿಕ ಸಮುದಾಯದ ಅನುಪಸ್ಥಿತಿಗೆ ಕಾರಣವೇನೆಂದರೆ ಸೋಮನಾಥಪುರವೊಂದು ಅಗ್ರಹಾರವಾಗಿತ್ತು ಹಾಗೂ ರಾಜನ ಅಧಿಕಾರಿಗಳು ಮಹಾಜನರ ಅನುಮತಿಯಿಲ್ಲದೆ ಆ ಪ್ರದೇಶದ ಗಡಿಯನ್ನು ಪ್ರವೇಶಿಸುವಂತಿರಲಿಲ್ಲ. ಜೊತೆಗೆ ಇದೊಂದು ಸರ್ವಮಾನ್ಯ ಅಗ್ರಹಾರವಾಗಿತ್ತು ಹಾಗೂ ಯಾವುದೇ ವಿಧವಾದ ತೆರಿಗೆಗಳನ್ನೂ ಸಂಗ್ರಹಿಸಲಾಗುತ್ತಿರಲಿಲ್ಲ. ಆದ್ದರಿಂದ ಬಾಹ್ಯ ಆಡಳಿತದ ಪ್ರದೇಶವು ಸೋಮನಾಥಪುರ ಅಗ್ರಹಾರದಲ್ಲಿ ಅನುಪಸ್ಥಿತಿಯಿಂದ ಕೂಡಿತ್ತು. ಹಾಗೆಯೇ ಈ ಪ್ರದೇಶವು ಹೊಯಸಳರ ಕಾಲದಲ್ಲಿ ಮತ್ತು ತದ ನಂತರ ವಿಜಯನಗರ ಸಾಮ್ರಜ್ಯದ ಅವಧಿಯಲ್ಲಿ ಒಂದು ಸ್ವಾಯುತ್ತ ಪ್ರದೇಶವಾಗಿತ್ತು. ಎಲ್ಲಾ ವಿಷಯಗಳನ್ನು ಮಹಾಜನರೇ ನಿರ್ವಹಿಸುತ್ತಿದ್ದರು. ಆದ್ದರಿಂದ ಕ್ಷತ್ರಿಯರ ಯಾವುದೇ ಪ್ರತ್ಯೇಕ ವರ್ಗವಿರಲಿಲ್ಲ. ಆದರೆ ಸೋಮನಾಥಪುರದಲ್ಲಿ ಇನ್ನೆರೆಡು ಸಾಮಾಜಿಕ ಗುಂಪುಗಳಾದ ವೈಶ್ಯ ಹಾಗೂ ಶೂದ್ರರು ನೆಲೆಸಿದ್ದರು. ವೈಶ್ಯರನ್ನು ಹಿಂದೂ ಸಮಾಜದಲ್ಲಿ ತೃತೀಯ ಜಾತಿಯೆಂದು

ಪರಿಗಣಿಸಲಾಗಿತ್ತು. ಕರ್ನಾಟಕದಲ್ಲಿ ಅವರು ಶೆಟ್ಟಿಗಳು ಅಥವಾ ವರ್ತಕರಾಗಿದ್ದರು. ಈ ಜಾತಿಯ ಬಗ್ಗೆ ಸೋಮನಾಥಪುರ ಶಾಸನಗಳಲ್ಲಾಗಲೀ ಅಥವಾ ದೇವಾಲಯ ಶಿಲ್ಪಗಳಲ್ಲಾಗಲೀ ನಮಗೆ ಹೆಚ್ಚಿನ ಸುಳಿವು ದೊರೆಯುವುದಿಲ್ಲ. ಈ ಬಗೆಯ ಅನುಪಸ್ಥಿತಿಯ ಕಾರಣವು ಸೋಮನಾಥಪುರವು ಹೆಚ್ಚಾಗಿ ಬ್ರಾಹ್ಮಣರಿಂದ ಕೂಡಿದ ಅಗ್ರಹಾರವಾಗಿತ್ತೆಂಬುದೇ ಆಗಿದೆ. ಆದ್ದರಿಂದ ಈ ಶಾಸನಗಳಲ್ಲಿ ವರ್ತಕ ವರ್ಗವು ಹೆಚ್ಚಾಗಿ ಕಂಡುಬರುವುದಿಲ್ಲ. ಆದರೂ ಪರೋಕ್ಷವಾಗಿ ದೇವಾಲಯ ಸಮುಚ್ಛಯದಲ್ಲಿ ವ್ಯಾಪಾರೀ ವೈಶಿಷ್ಟತೆಗಳು ಪ್ರಬಲವಾಗಿ ಕಂಡುಬರುತ್ತಿದ್ದವು ಏಕೆಂದರೆ ಸೋಮನಾಥಪುರದಲ್ಲಿ ಕೃಷಿಯೇತರ ಉತ್ಪನ್ನಗಳಿಗೆ ಬಹಳಷ್ಟು ಪ್ರಮಾಣದ ಬೇಡಿಕೆ ಇತ್ತು. ಸೋಮನಾಥಪುರವು ಈ ಕೃಷಿಯೇತರ ಉತ್ಪನ್ನಗಳನ್ನು ಉತ್ಪಾದಿಸದಿದ್ದರಿಂದ ಇವುಗಳನ್ನು ಸ್ಥಳೀಯ ವರ್ತಕರು ಆಮದು ಮಾಡಿಕೊಂಡಿರಬೇಕು. ಶೆಟ್ಟಿಗಳು ಸೋಮನಾಥಪುರದ ಸಾಮಾಜಿಕ ವ್ಯವಸ್ಥೆಯ ಭಾಗವಾಗಿದ್ದರು ಎಂಬುದು ತುಸು ಸಂಭವನೀಯವಾಗಿದೆ.

ಶೂದ್ರರು ಸಾಮಾನ್ಯವಾಗಿ ಕೇವಲ ಹಿಂದೂ ಸಮಾಜದಲ್ಲಿ ನಾಲ್ಕನೆಯ ಜಾತಿ ಎಂದು ಪರಿಗಣಿತರಾಗಿದ್ದರಲ್ಲದೆ ವಿಶೇಷವಾಗಿ ಸೋಮನಾಥಪುರದಲ್ಲೂ ಕೂಡ ಈ ಅಂಶವು ಸ್ಪಷ್ಟವಾಗಿತ್ತು. ಅಲ್ಲಿ ಬಹಳಷ್ಟು ಉಪಜಾತಿಗಳಿದ್ದವು. ಶೂದ್ರರ ವ್ಯಾಪ್ತಿಯು ಬಹಳಷ್ಟಿತ್ತು. ಈ ಅಂಶದ ಮೇಲೆ ಸೋಮನಾಥಪುರದ ಶಾಸನಗಳು ಬಹಳಷ್ಟು ಬೆಳಕನ್ನು ಚೆಲ್ಲುತ್ತವೆ. ಉದಾಹರಣೆಗೆ ಒಂದು ಶಾಸನವು ಈ ಕೆಳಕಂಡ ಶೂದ್ರ ಜಾತಿಗಳನ್ನು ಉಲ್ಲೇಖಿಸುತ್ತದೆ.

1) ಮಾಲೆ ಅಥವಾ ಹೂ ಹಾರ ತಯಾರಕರು
2) ದೇವಸಿಗರು ಅಥವಾ ಸಂಗೀತಗಾರರು
3) ನಾಗವಾಸ ಅತವಾ ನರ್ತಕರು ಹಾಗೂ ಅವರ ಸಹಕಲಾವಿದರು
4) ಕ್ಷಾರಿಕರು
5) ಕುಂಬಾರರು
6) ಅಕ್ಕಸಾಲಿಗರು
7) ಕಮ್ಮಾರರು
8) ಅಗಸರು
9) ಬಡಗಿಗಳು
10) ಕೊಥಾರಿ ಅಥವಾ ಅಂಗಡಿ ಮಾಲೀಕರು
11) ಕಟ್ಟಡ ಕಾರ್ಮಿಕರು

ಇದರ ಜೊತೆಗೆ ರಂಗವಲ್ಲಿ ಕಾರ್ಮಿಕರು, ಅಂಗರಕ್ಷಕರೂ ಕೂಡ ಶೂದ್ರ ವರ್ಗಗಳಿಗೆ ಸೇರಿದ್ದರೆಂದು ಊಹಿಸಬಹುದು. ಈ ಪಟ್ಟಿಯ ಸೋಮನಾಥಪುರದ ಸಾಮಾಜಿಕ ರಚನೆಯಲ್ಲಿ ಕುಶಲಕರ್ಮಿಗಳು ಹಾಗೂ ಕರಕುಶಲಕರ್ಮಿಗಳಿದ್ದರು ಎಂಬುದನ್ನು ಸೂಚಿಸುತ್ತದೆ. ಕೇಶವ ದೇವಾಲಯದ ಹಲವು ಶಿಲ್ಪಗಳ ಅಡಿ ಬರಹದಲ್ಲಿ ಸೋಮನಾಥಪುರದಲ್ಲಿ ತಾತ್ಕಾಲಿಕವಾಗಿಯೋ ಅಥವಾ ಶಾಶ್ವತವಾಗಿಯೋ ಜೀವಿಸಿದ್ದ ಹಾಗೂ ಈ ಶೂದ್ರ ವರ್ಗಕ್ಕೆ ಸೇರಿದ್ದ ಶಿಲ್ಪಿಗಳ ಹೆಸರುಗಳು ಈ ಕೆಳಕಂಡಂತೆ ಕಂಡು ಬರುತ್ತವೆ.

1) ಮಲ್ಲಿ 2) ಮಲ್ಲಿತಮ್ಮ 3) ಮಸಣಿತಮ್ಮ 4) ಬಾಲಾಯ 5) ಚಾಡಾಯ 6) ಚಾಮಾಯಾ 7) ಭಾರಮಾಯ 8) ನಂಜಾಯ 9) ಭಾರತ 10) ಯಳಮಸಾಯ

ಗೇಣಿ ರೈತರು ಹಾಗೂ ಸ್ವತಂತ್ರ ವ್ಯವಸಾಯಗಾರರನ್ನೂ ಶೂದ್ರರೆಂದು ಪರಿಗಣಿಸಲಾಗಿತ್ತು. ಅವರನ್ನು ಸಾಮೂಹಿಕವಾಗಿ ಒಕ್ಕಲೆಂದು ಕರೆಯಲಾಗುತ್ತಿತ್ತು. ಅವರು ಬ್ರಾಹ್ಮಣರ ಜಮೀನನ್ನು ಸಾಗುವಳಿ ಮಾಡಿ ಅವರಿಗೆ ಸಿದ್ಧಾಯವನ್ನು ನೀಡುತ್ತಿದ್ದರು. ಸಾಮಾಜಿಕವಾಗಿ ಅವರು ಬ್ರಾಹ್ಮಣರಿಂದ ನಿಯಂತ್ರಣಕ್ಕೊಳಪಟ್ಟಿದ್ದರು. ಆದರೆ ವರ್ಣ ವ್ಯವಸ್ಥೆಗೆ ಸೇರಿದ ಅಂತ್ಯಜರು ಅಥವಾ ಅಸ್ಪೃಶ್ಯರ ಬಗ್ಗೆ ನಮಗೆ ಪ್ರತ್ಯಕ್ಷ ಸಾಕ್ಷಿಗಳು ಯಾವುವೂ ಇರುವುದಿಲ್ಲ. ಆದರೆ ದೇವಾಲಯ ಸಮುಚ್ಛಯಕ್ಕೆ ಅವರ ಸೇವೆಯು ಚರ್ಮಕಾರ್ಮಿಕರು ಹಾಗೂ ಕೃಷಿಕಾರ್ಮಿಕರಾಗಿ ಅವಶ್ಯಕವಾಗಿತ್ತು. ಆದ್ದರಿಂದ ಅವರೂ ಕೂಡ ಸೋಮನಾಥಪುರ ಸಾಮಾಜಿಕ ರಚನೆಯ ಭಾಗವಾಗಿದ್ದರು ಎಂದು ಹೇಳಲು ಕಷ್ಟ ಪಡಬೇಕಿಲ್ಲ. ಸಮಾಜದ ಈ ಅಂಶದ ಮೇಲೆ ವಿಷ್ಣುಪುರಾಣವು ಸ್ವಲ್ಪಮಟ್ಟಿನ ಬೆಳಕನ್ನು ಚೆಲ್ಲುತ್ತದೆ. ಇವರನ್ನು ಚಾಂಡಾಲರೆಂದು ಕರೆಯಲಾಗುತ್ತಿತ್ತು ಹಾಗೂ ಸಮಾಜದಲ್ಲಿ ಬಹಳ ನೀಚವಾದ ಸ್ಥಾನಮಾನವನ್ನು ಅವರಿಗೆ ನೀಡಲಾಗಿತ್ತು. ಅವರನ್ನು ಯಾವುದೇ ಧಾರ್ಮಿಕ ಆಚರಣೆಗಳಿಗೂ ಆಹ್ವಾನಿಸುತ್ತಿರಲಿಲ್ಲ. ಆದರೆ ಕರ್ನಾಟಕದ ಸಂದರ್ಭದಲ್ಲಿ ಪುರಾಣದಲ್ಲಿ ವಿವರಿಸಲಾಗಿರುವ ಸೈದ್ಧಾಂತಿಕ ಸ್ಥಾನಮಾನವನ್ನು ಅನುಸರಿಸಲಿಲ್ಲ. ಸ್ವತಃ ರಾಮಾನುಜರೇ ದೇವಾಲಯ ಪ್ರವೇಶ ನಿಯಮಗಳನ್ನು ಸರಳಗೊಳಿಸಿದ್ದರು ಹಾಗೂ ಅಸ್ಪೃಶ್ಯ ಜಾತಿಗಳನ್ನು ವರ್ಷಕ್ಕೊಮ್ಮೆ ಮೇಲುಕೋಟೆಯ ಬಳಿ ಇರುವ ದೇವಾಲಯಕ್ಕೆ ಭೇಟಿ ನೀಡುವ ಅವಕಾಶವನ್ನು ಕಲ್ಪಿಸಿದ್ದರು. ಇದರಿಂದ ಸೋಮನಾಥಪುರವು ಪ್ರಬಲ ವೈಷ್ಣವ ಕೇಂದ್ರವಾಗಿದ್ದುಕೊಂಡು ದೇವಾಲಯ ಪ್ರವೇಶ ಹಾಗೂ ಆರಾಧನೆಗೆ ಸಂಬಂಧಿಸಿದಂತೆ ರಾಮಾನುಜರ ಆದರ್ಶಗಳನ್ನೇ

ಅನುಸರಿಸಿತ್ತು ಎಂಬುದನ್ನು ಇಲ್ಲಿ ವ್ಯಕ್ತಪಡಿಸಬಹುದು. ಬೇರೆ ಮಾತುಗಳಲ್ಲಿ ಹೇಳುವುದಾದರೆ ವೈಷ್ಣವು ಸಮಾಜವು ಸೋಮನಾಥಪುರದ ಬಳಿಯಲ್ಲಿ ಅಷ್ಟು ಕಠಿಣವಾಗಿರಲಿಲ್ಲ.

ಸಮಾಜ ಜೀವನದ ಇನ್ನೊಂದು ಅಂಶವೇನೆಂದರೆ ಅಗ್ರಹಾರದಲ್ಲಿನ ಮಹಿಳೆಯರ ಸ್ಥಾನಮಾನ. ಮೇಲ್ವರ್ಗದ ಮಹಿಳೆಯರು ಸ್ವತಂತ್ರ ವಂಚಿತವಾಗಿರಲಿಲ್ಲ. ಒಂದು ಶಾಸನವು ಹೊಯ್ಸಳರ ರಾಜನೊಬ್ಬನ ಹಿರಿಯ ಪ್ರಧಾನನ ಮಗಳು ದೇವಲಾದೇವಿಯು ಸೋಮನಾಥಪುರ ದೇವಾಲಯಕ್ಕೆ ದಾನ ನೀಡಿದುದರ ಬಗ್ಗೆ ಉಲ್ಲೇಖವನ್ನು ನೀಡುತ್ತದೆ. ಸೋಮನಾಥಪುರದಲ್ಲಿನ ಸಾಂಸ್ಕೃತಿಕ ಪ್ರಾತಿನಿಧತ್ವಗಳು ಸಮಕಾಲೀನ ಮಹಿಳೆಯರ ಸ್ಥಾನಮಾನಗಳ ಒಂದೆರಡು ಅಂಶಗಳ ಮೇಲೆ ಬೆಳಕನ್ನು ಚೆಲ್ಲುತ್ತವೆ. ಅವುಗಳಲ್ಲಿ ಕೇಶ ವಿನ್ಯಾಸ, ಆಭರಣ, ವಸ್ತ್ರಾಭರಣ ವಿನ್ಯಾಸಗಳ ಬಗ್ಗೆ ಉಲ್ಲೇಖವನ್ನು ಮಾಡಬಹುದು.

## ಅಧ್ಯಾಯ 9

**9.1 ಸೋಮನಾಥಪುರ ಶಾಸನಗಳಲ್ಲಿ ಹೇಳಲಾಗಿರುವ ಅಲಂಕಾರಿಕ ವಸ್ತುಗಳು ಈ ರೀತಿ ಇವೆ.**

1) ಪರಿಮಳ 2) ಗಂಧದ ಹಿಟ್ಟು 3) ಕರ್ಪೂರ 4) ಅರಿಶಿನ 5) ಸಾದು ಇವುಗಳನ್ನು ಕೇವಲ ದೇವಾಲಯದಲ್ಲಿ ಮಾತ್ರವಲ್ಲದೆ ಮೇಲ್ವರ್ಗಗಳ ಜನರೂ ಸಹ ಬಳಸುತ್ತಿದ್ದರು.

ವಿನೋದ ಹಾಗೂ ಮನೋರಂಜನೆಗೆ ಸಂಬಂಧಿಸಿದಂತೆ ಕುಸ್ತಿಯನ್ನು ವಿವರಿಸುವ ಹಲವು ಶಾಸನಗಳು ನಮ್ಮೊಂದಿಗಿವೆ. ಸಂಗೀತ ಹಾಗೂ ನೃತ್ಯವು ಸಾಮಾಜಿಕ ಜೀವನದ ಭಾಗವಾಗಿದ್ದವು. ನಾನಾ ಬಗೆಯ ಸಂಗೀತ ಸಾಧನಗಳು ಸ್ತ್ರೀಯರ ನೃತ್ಯಭಂಗಿಗಳು, ದೇವರು ದೇವತೆಗಳ ನೃತ್ಯಭಂಗಿಗಳನ್ನು ವಿವರಿಸುವ ಅಗಾಧ ಪ್ರಮಾಣದ ಶಿಲ್ಪಕಲಾ ಪ್ರಾತಿನಿಧಿತ್ವವನ್ನು ಕಾಣಬಹುದಾಗಿದೆ. ಇದರ ಜೊತೆಗೆ ಇಲ್ಲಿನ ಶಾಸನಗಳು ದೇವಾಲಯ ಸಿಬ್ಬಂದಿಯಲ್ಲಿನ ನರ್ತಕರು ಹಾಗೂ ಸಂಗೀತಗಾರರ ಉಲ್ಲೇಖವನ್ನು ನೀಡುತ್ತದೆ. ರಂಗಭೋಗವು ವಿಶೇಷವಾಗಿ ದೇವರನ್ನು ನರ್ತನ ಹಾಗೂ ಸಂಗೀತದ ಮೂಲಕ ಆರಾಧಿಸುವುದನ್ನು ಸ್ಪಷ್ಟಪಡಿಸುತ್ತದೆ. ದೇವಾಲಯಕ್ಕೆ ಅಂಟಿಕೊಂಡಿರುತ್ತಿದ್ದ ನರ್ತಕಿಯರ ದೇವದಾಸಿ ಪದ್ಧತಿಯು ಶಾಸನಗಳಲ್ಲಿ ಉಲ್ಲೇಖಿತವಾಗಿರದಿದ್ದರೂ ನಾಗವಾಸದವರು ಎಂಬ ಪದವು ಈ ಪದ್ಧತಿಯ ಅಸ್ತಿತ್ವವನ್ನು ಸೂಚಿಸುತ್ತದೆ.

ಸೋಮನಾಥಪುರ ಶಾಸನಗಳಲ್ಲಿ ಕೆಲವು ಆಹಾರ ಪದಾರ್ಥಗಳ ಬಗ್ಗೆ ಉಲ್ಲೇಖವನ್ನು ನೀಡಲಾಗಿದೆ. ಇವುಗಳನ್ನು ಪ್ರಮುಖ ಸಂದರ್ಭಗಳಲ್ಲಿ ಮುಖ್ಯವಾಗಿ ದೇವರಿಗೆ ನೈವೇದ್ಯ ನೀಡಲಾಗುತ್ತಿತ್ತು. ಇವುಗಳಲ್ಲಿ ಹುಗ್ಗಿ, ಹಚ್ಚಂಬಾಳೆ, ಇನ್ನೊಂದು ಅಕ್ಕಿಯ ತಿಂಡಿಯಾದ ತಾಳವಾಳಿಗೆ, ಚಕ್ಕುಲಿ ಹಾಗೂ ಪಾಲವಾಳಿಗೆಗಳನ್ನು ಇಲ್ಲಿ ಹೆಸರಿಸಬಹುದು. ಸೋಮನಾಥಪುರ ದೇವಾಲಯಕ್ಕೆ ಸಂಬಂಧಿಸಿದ ಭಟ್ಟಂಗಳು ಈ ತಿಂಡಿಗಳನ್ನು ತಯಾರಿಸುವುದರಲ್ಲಿ ಬಹುಶಃ ಪ್ರವೀಣರಾಗಿದ್ದರು. ವಾಸ್ತವವಾಗಿ ಕೇಶವ ದೇವಾಲಯಕ್ಕೆ ಹೊಂದಿಕೊಂಡಮತೆ ಒಂದು ಛತ್ರವಿತ್ತು. ಇದರ ವಾರ್ಷಿಕ ನಿರ್ವಹಣೆಗಾಗಿ ಇನ್ನೂರು ಗದ್ಯಾಣಗಳ ಮುಂಗಡ ಹಣಪತ್ರವು ತಯಾರಾಗುತ್ತಿತ್ತು.

ಹದಿಮೂರು ಹಾಗೂ ಹದಿನಾಲ್ಕನೇ ಶತಮಾನಗಳಲ್ಲಿ ಸೋಮನಾಥಪುರ ಪ್ರದೇಶದಲ್ಲಿದ್ದ ಗುಣಮಟ್ಟದ ಜೀವನವನ್ನು ಸ್ಪಷ್ಟವಾಗಿ ಹೇಳುವುದು ಕಷ್ಟವಾಗುತ್ತದೆ. ಆದರೂ ಈ ಸಮಸ್ಯೆಗೆ

ಸಂಬಂಧಿಸಿದಂತೆ ಶಾಸನಗಳ ಅಧ್ಯಯನದಿಂದ ಕೆಲವು ಸಾಮಾನ್ಯ ವಿಚಾರಗಳನ್ನು ತಿಳಿಯಬಹುದು. ವಿಷ್ಣು ದೇವಾಲಯ ಹಾಗೂ ಶಿವ ದೇವಾಲಯ ಸಿಬ್ಬಂದಿಯ ಅಧಿಕಾರಿಗಳ ವರ್ಗದ ಸಂಖ್ಯೆ ಹಾಗೂ ಅವರ ವಾರ್ಷಿಕ ಸಂಬಳದ ಬಗೆಗಿನ ಮಾಹಿತಿಯನ್ನು ನೀಡುವ ಪಟ್ಟಿಗಳನ್ನು ಅಧ್ಯಯನ ಮಾಡುವುದರಿಂದ ಕೆಲವು ಅಭಿಪ್ರಾಯಗಳಿಗೆ ಬರುವುದು ಸಾಧ್ಯವಾಗಿದೆ. ದೇವಾಲಯ ಅಧಿಕಾರಗಳ ಸಂಬಳವು ಅವರ ಶ್ರೇಣಿ, ಸ್ಥಾನಮಾನ ಹಾಗೂ ಜವಾಬ್ದಾರಿಗಳಿಗನುಗುಣವಾಗಿ ಬೇರೆ ಬೇರೆಯಾಗಿತ್ತು. ಉದಾಹರಣೆಗೆ ಆಚಾರ್ಯನೋರ್ವನಿಗೆ ಇಪ್ಪತ್ತು ಗದ್ಯಾಣಗಳು ದೊರೆಯುತ್ತಿದ್ದವು. ಪೌರಾಣಿಕನೋರ್ವನಿಗೆ ಹದಿನಾರು ಗದ್ಯಾಣಗಳನ್ನು ಪಡೆಯುತ್ತಿದ್ದನು. ಇದರಿಂದ ಸೋಮನಾಥ ಪುರದಲ್ಲಿ ಜನರ ಜೀವನ ಮಟ್ಟವು ಅವರ ಆರ್ಥಿಕ ಸಂಪಾದನೆಯ ಆಧಾರದ ಮೇಲೆ ಬದಲಾಗಿತ್ತು ಎಂದು ಹೇಳಬಹುದು ಜೀವನ ಮಟ್ಟದ ದೃಷ್ಟಿಯಿಂದ ಕ್ಷೌರಿಕ ಹಾಗೂ ಅಗಸನೋರ್ವನು ಆಚಾರ್ಯರು, ನಂಬಿಗಳು ಹಾಗೂ ಸ್ಥಾನಿಕರಿಗಿಂತಲೂ ಕೆಳಸ್ಥಾನದಲ್ಲಿ ನಿಲ್ಲಬೇಕು. ಹೊಯ್ಸಳ ಕಾಲದಲ್ಲಿ ಚಲಾವಣೆಯಲ್ಲಿದ್ದ ಗದ್ಯಾಣ ಚಿನ್ನದ ನಾಣ್ಯದ ಕೊಳ್ಳುವ ಶಕ್ತಿಯನ್ನು ನಿರ್ದಿಷ್ಟವಾಗಿ ಲೆಕ್ಕಾಚಾರ ಮಾಡುವುದು ಬಹಳ ಕಷ್ಟವಾದ ಮಾತಾಗುತ್ತದೆ. ಒಂದು ಶಾಸನದಲ್ಲಿ ನಲವತ್ತೊಂದು ಗದ್ಯಾಣಗಳನ್ನು ವಾರ್ಷಿಕವಾಗಿ ವೃತ್ತಿ ಅಥವಾ ಪಾಲನ್ನು ಪಡೆಯುತ್ತ ಒಂದು ಬ್ರಾಹ್ಮಣ ಕುಟುಂಬದ ಬಗ್ಗೆ ನಾವು ಒಂದು ಶಾಸನದಲ್ಲಿ ಮಾಹಿತಿಯನ್ನು ನೋಡುತ್ತೇವೆ. ಇದರಿಂದ ತಿಳಿಯುವ ವಿಚಾರವೆಂದರೆ ಐದು ಸದಸ್ಯರನ್ನೊಳಗೊಂಡ ಒಂದು ಕುಟುಂಬವು ನಲವತ್ತೈದು ಗದ್ಯಾಣಗಳೊಂದಿಗೆ ತನ್ನ ಜೀವನವನ್ನು ಸಾಗಿಸಬಲ್ಲದಾಗಿತ್ತು. ಇದರ ಹೊರತಾಗಿ ಈ ಅಂಶದ ಮೇಲೆ ನಿರ್ದಿಷ್ಟವಾಗಿ ಏನನ್ನೂ ಹೇಳುವುದೂ ಕಷ್ಟವಾಗುತ್ತದೆ.

ಕೇಶವ ದೇವಾಲಯದ ಹೊರಗೋಡೆಯ ಮೇಲಿನ ಶಿಲ್ಪಕಲೆಯ ಆವರಣಗಳಲ್ಲಿ ಕಂಡು ಬಂದಿರುವಂತೆ ಕೆಲವು ವೈಶಿಷ್ಟಗಳನ್ನು ಈ ಕೆಳಗೆ ಗಮನಿಸಬಹುದಾಗಿದೆ. ಮೊದಲನೆಯದಾಗಿ ಒಂದು ಸರಣಿ ಶಿಲ್ಪಕಲೆಗಳು ಜೋಡಿ ರತಿ ಪ್ರೇಮದಲ್ಲಿ ತೊಡಗಿರುವುದನ್ನು ಚಿತ್ರಿಸಿವೆ. ಈಗ ಉದ್ಭವಿಸುವ ಪ್ರಶ್ನೆಯೇನೆಂದರೆ ಆರಾಧನಾ ಸ್ಥಾನ ಹಾಗೂ ಪವಿತ್ರತೆಯ ದ್ಯೋತಕವಾದ ದೇವಾಲಯದ ಗೋಡೆಗಳ ಹೊರ ಆವರಣದ ಮೇಲೆ ಅಂತಹ ಅಶ್ಲೀಲ ದೃಶ್ಯಾವಳಿಗಲನ್ನು ಕೆತ್ತಲಾಗಿದೆ. ಇದಕ್ಕೆ ಕಾರಣವಾದರೂ ಏನೆಂದು ಸಾಮಾಜಿಕ ದೃಷ್ಟಿಕೋನದಿಂದ ಮಾನವರ ಸಮಾಜದಲ್ಲಿನ ನೈತಿಕ ವರ್ತನೆಯ ದುರುಪಯೋಗವು ಖಂಡಿತ ಇದಲ್ಲ. ಹಿಂದೂ ಸಂಪ್ರದಾಯದಲ್ಲಿ ಅಡಕವಾಗಿರುವ ನಾಲ್ಕು ಮಾನವೀಯ ಮೌಲ್ಯಗಳಲ್ಲಿ ಕಾಮವು ಒಂದು ಹಾಗೂ ಧರ್ಮ, ಅರ್ಥ

ಹಾಗೂ ಮೋಕ್ಷ ಮಿಕ್ಕುಳಿದವುಗಳಾಗಿವೆ. ಇದರ ಜೊತೆಗೆ ಮಿಥುನ ಚಿತ್ರಗಳ ಸಂದೇಶವೇನೆಂದರೆ ಪವಿತ್ರ ಸ್ಥಾನವನ್ನು ಪ್ರವೇಶಿಸುವ ಮೊದಲು, ಭಕ್ತನು ತನ್ನ ಎಲ್ಲಾ ನೀಚ ಐಹಿಕ ಭಾವನೆಗಳನ್ನು ಹಾಗೂ ಭಾವಾವೇಶಗಳನ್ನು ತೊರೆದು ಉನ್ನತವಾದ ಮನಸ್ಸಿನಿಂದ ಮುಂದುವರೆಯಬೇಕಾಗಿತ್ತು ಎಂದೂ ಕೂಡ ಅರ್ಥೈಸಿಸಬಹುದಾಗಿದೆ.

ಇಡೀ ದೇಗುಲವನ್ನು ಮನುಷ್ಯನ ದೇಹಕ್ಕೆ ಹೋಲಿಸುತ್ತಿದ್ದುದರ ಸಂಭವವೂ ಕೂಡ ಹೆಚ್ಚು ಬಾಹ್ಯ ಚಟುವಟಿಕೆಗಳು ಆತ್ಮವು ದೇಹದಲ್ಲಿ ಮನೆ ಮಾಡುವಂತೆ, ದೇವಾಲಯದಲ್ಲಿ ಗರ್ಭಗುಡಿ ನೆಲೆಸಿರುವಂತೆ ಆಂತರಿಕ ಶಾಂತಿಯನ್ನು ಕದಡಬಾರದು. ದೇವಾಲಯ ನಿರ್ಮಾಪಕನು ತ್ಯಾಗಮಯ ಜೀವನದ ಅಸಾಮಾನ್ಯ ಸ್ಥಿತಿಗಿಂತ ಒಂದು ಸಮನಾದ ಸಾಮಾಜಿಕ ಜೀವನದ ಸಂದೇಶವನ್ನು ಹರಡುವ ಉದ್ದೇಶವನ್ನು ಹೊಂದಿದ್ದನು.

ಎರಡನೆಯದಾಗಿ ಭೇಟೆಗಾರಳೊಬ್ಬಳು ನಾಯಿಯೊಂದಿಗೆ ಬಿಲ್ಲುಬಾಣವನ್ನು ಹಿಡಿದಿರುವ ಚಿತ್ರವನ್ನು ವಿವರಿಸಲಾಗಿದೆ. ಇದು ಹದಿಮೂರನೆಯ ಶತಮಾನದಲ್ಲಿ ಬುಡಕಟ್ಟು ಸಮಾಜದಲ್ಲಿನ ಮಹಿಳೆಯರು ಪ್ರಾಣಿ ಬೇಟೆಯಾಡುವುದರಲ್ಲಿ ಪಾಲ್ಗೊಳ್ಳುತ್ತಿದ್ದರೆಂಬುದನ್ನು ಸೂಚಿಸುತ್ತದೆ.

ಮೂರನೆಯದಾಗಿ ಒಬ್ಬ ರಕ್ಷಕ ಹಾಗೂ ಅವನೊಂದಿಗೆ ಒಂದು ಖಡ್ಗವನ್ನು ದೇವಾಲಟದ ಒಂದು ಭಾಗದಲ್ಲಿ ತೋರಿಸಲಾಗಿದೆ. ರಾಜರು ಹಾಗೂ ಮಂತ್ರಿ ಮಹೋದಯರ ಮನೆಗಳಿಗೆ ರಕ್ಷಕ ಯೋಧರಿರುತ್ತಿದ್ದರು. ಇವರು ಮನೆಯ ದ್ವಾರದ ಬಳಿ ಇರುತ್ತಿದ್ದರು ಹಾಗೂ ಇಂತಹ ಸ್ಥಳಗಳಲ್ಲಿ ಪ್ರವೇಶವು ನಿರ್ಬಂಧಿತವಾಗಿತ್ತು. ಸ್ತ್ರೀಯೊಬ್ಬಳು ತನ್ನ ಪರಿಚಾರಿಕೆಯರೊಂದಿಗೆ ಸಾಗುತ್ತಿರುವ ದೃಶ್ಯವು ಸಮಾಜದ ಉನ್ನತ ಶ್ರೇಣಿಯನ್ನು ಪ್ರತಿನಿಧಿಸುತ್ತದೆ. ವಿಶೇಷವಾಗಿ ಅರಮನೆಯಲ್ಲಿ ಇದೇ ರೀತಿಯಲ್ಲಿ ವೀಳ್ಯದ ಚೀಲವನ್ನು ಒಯ್ಯುವ ಚಿತ್ರವು ಬಹಳ ಕುತೂಹಲಕಾರಿಯಾಗಿದೆ. ಏಕೆಂದರೆ ವೀಳ್ಯ ಹಾಗೂ ಅಡಿಕೆಯ ಬಳಕೆಯು ಸಮಾಜದ ಉನ್ನತ ಹಾಗೂ ಕೆಲವರ್ಗಗಳೆರಡಲ್ಲೂ ಸಾಮಾನ್ಯವಾಗಿತ್ತು ಎಂಬುದನ್ನು ಸೂಚಿಸುತ್ತದೆ. ಈ ಉದ್ದೇಶಕ್ಕಾಗಿ ಆ ಸ್ಥಾನಗಳಲ್ಲಿ ಪ್ರತ್ಯೇಕವಾದ ಸೇವಕರನ್ನು ನೇಮಕ ಮಾಡಲಾಗುತ್ತಿತ್ತು. ಕೆಲವೊಮ್ಮೆ ನಂತರದ ಸಂಪ್ರದಾಯಗಳು ಹೇಳುವಂತೆ ಸ್ತ್ರೀಯರನ್ನು ಉದ್ದೇಶಕ್ಕಾಗಿ ನೇಮಕ ಮಾಡಲಾಗುತ್ತಿತ್ತು. ಉದಾಹರಣೆಗೆ ಹದಿನೇಳನೆಯ ಶತಮಾನದಲ್ಲಿ ಮೈಸೂರಿನ ಅರಸರಾಗಿದ್ದ ಚಿಕ್ಕದೇವರಾಯ ಒಡೆಯರು ಹೊನ್ನಮ್ಮೆಂಬ

ಸ್ತ್ರೀಯೊಬ್ಬಳನ್ನು ತಮ್ಮ ಆಸ್ಥಾನದಲ್ಲಿ ನೇಮಕ ಮಾಡಿಕೊಂಡಿದ್ದರು. ಆಕೆಯ ಕರ್ತವ್ಯವು ಆಸ್ಥಾನದಲ್ಲಿ ನೆರೆಯುತ್ತಿದ್ದ ಶ್ರೇಷ್ಟ ವ್ಯಕ್ತಿಗಳಿಗೆ ವೀಲ್ಯದೆಲೆ ಹಾಗೂ ಅಡಿಕೆಯನ್ನು ಕೊಡುವುದಾಗಿತ್ತು. ಆದ್ದರಿಂದ ಆಕೆಯನ್ನು ಸಂಚಿ ಹೊನ್ನಮ್ಮ ಅಥವಾ ವೀಳ್ಯದ ಚೀಲವನ್ನು ಒಯ್ಯುವ ಹೊನ್ನಮ್ಮ ಎಂದು ಕರೆಯಲಾಯಿತು ಹಾಗೂ ಈಕೆಯೇ ನಂತರದಲ್ಲಿ ಕವಯತ್ರಿಯಾಗಿ ವಿಖ್ಯಾತಳಾದಳು. ವೀಳ್ಯದೆಲೆಯಲ್ಲಿನ ವ್ಯಾಪಾರ ಹಾಗೂ ವೀಳ್ಯದೆಲೆಯ ಬೆಳೆಯಿಂದಾಗಿ ಹೊಯ್ಸಳ ಸರ್ಕಾರಕ್ಕೆ ಸಾಕಷ್ಟು ದೊಡ್ಡ ಪ್ರಮಾಣದ ಕಂದಾಯವನ್ನು ತಂದುಕೊಟ್ಟಿತು ಎಂಬುದು ಬಹಳ ಕುತೂಹಲಕಾರಿಯಾದ ಅಂಶವಾಗಿದೆ. ವೀಳ್ಯದೆಲೆಯ ಮೇಲೆ ವಿಧಿಸಲಾಗುತ್ತಿದ್ದ ಪನ್ನಾಯ ಎಂಬ ಸುಂಕದ ಉಲ್ಲೇಖವನ್ನು ಹೊಯ್ಸಳ ಶಾಸನಗಳು ಮಾಡುತ್ತವೆ ಪನ್ನಾಯ ಎಂಬ ಪದವನ್ನು ಸಂಸ್ಕೃತದ ಎರಡು ಪದಗಳಾದ ಪಣ ಹಾಗೂ ಆಯ ಎಂಬ ಪದಗಳಿಂದ ಆಯ್ದುಕೊಳ್ಳಲಾಗಿದೆ. ಪರ್ಣವೆಂದರೆ ಎಲೆ ಹಾಗೂ ಆಯ ಎಂದರೆ ಆದಾಯ ಎಂದರ್ಥ. ಇದೇ ರೀತಿಯಾಗಿ ಹೊಯ್ಸಳ ರಾಜ್ಯವು ತೋಟದಲ್ಲಿ ಇದ್ದ ವೀಳ್ಯದ ಬಳ್ಳಿಗಳ ಮೇಲೂ ತೆರಿಗೆಯನ್ನು ಹಾಕುತ್ತಿತ್ತು. ಇದರೊಂದಿಗೆ ಅಡಿಕೆ ತೋಟದ ಮೇಲೂ ಸುಂಕವನ್ನು ಎಂಬ ತೆರಿಗೆಯನ್ನು ವಿಧಿಸಲಾಗುತ್ತಿತ್ತು.

ಜನರು ಧರಿಸುತ್ತಿದ್ದ ಆಭರಣಗಳಿಗೆ ಸಂಬಂಧಿಸಿದಂತೆ ದೇವಾಲಯ ಶಿಲ್ಪಗಳು ನಮಗೆ ಸ್ವಲ್ಪ ಅರಿವನ್ನು ನೀಡುತ್ತದೆ. ಆನರು ಧರಿಸುತ್ತಿದ್ದ ಆಭರಣಗಳಲ್ಲಿ ಹಲವಾರು ವಿಧಗಳಿದ್ದವು. ಕಂಠೀಹಾರಗಳು, ಪದಕಗಳು, ತೋಳ್ಬಂಧಿಗಳು, ಕಾಲಂದಿಗೆ, ಸೊಂಟದಪಟ್ಟಿ (ಡಾಬು) ಕಿವಿಯೋಲೆ, ಉಂಗುರಗಳು ಕೆಲವು ವಿಧಗಳಾಗಿವೆ. ಕಂಠೀಹಾರಗಳು ಹಾಗೂ ಕಿವಿಯೋಲೆಗಳ ಕೆಲವು ವಿನ್ಯಾಸಗಳು ಬಹಳ ಆಕರ್ಷಕವಾಗಿದೆ. ಅವುಗಳಲ್ಲಿನ ಕೆಲವು ವಿನ್ಯಾಸಗಳನ್ನು ಕರ್ನಾಟಕದ ಅಕ್ಕಸಾಲಿಗರು ಇಂದಿಗೂ ಉಪಯೋಗಿಸುತ್ತಿದ್ದಾರೆ. ತಲೆಯುಡಿಗೆ ಹಾಗೂ ಕೇಶವಿನ್ಯಾಸಗಳಿಗೆ ಸಂಬಂಧಿಸಿದಂತೆ ಶಿಲ್ಪಗಳು ಸಾಕಷ್ಟು ಬೆಳಕನ್ನು ಚೆಲ್ಲುತ್ತವೆ.

ಈ ರೀತಿಯಾಗಿ ಮೂಲಗಳಿಂದ ಮೂಡಿಬರುವ ಸಾಮಾಜಿಕ ಚಿತ್ರಣವು ಬಹಳ ವರ್ಣಮಯವೂ ಹಾಗೂ ವೈವಿಧ್ಯತೆಯಿಂದಲೂ ಕೂಡಿದೆ. ಸಾಮಾಜಿಕ ರಚನೆಯು ನಿಸ್ಸಂದೇಹವಾಗಿ ಊಳಿಗಮಾನ್ಯವಾಗಿ ಕಂಡುಬಂದಿತು. ಸಾಮಾಜಿಕ ಸಂಘಟನೆಯ ಮೂಲವು ವರ್ಣ ಅಥವಾ ಜಾತಿ ಪದ್ಧತಿಯಾಗಿತ್ತು ಸೋಮನಾಥಪುರ ಒಂದು ಮಹಾ ಅಗ್ರಹಾರವಾಗಿದ್ದರಿಂದ ಬಹುಶಃ ಸಾಮಾಜಿಕ ಸಂಕೀರ್ಣತೆಯು ಒಂದು ಪ್ರಬಲವಾದ ವೈಶಿಷ್ಟವಾಗಿತ್ತು ಎಂಬುದು ಒಂದು ಸಂಭವನೀಯ

ಅಂಶವಾಗಿದೆ. ಆದರೂ ರಾಮಾನುಜರಿಂದ ಬೋಧಿಸಿ ಅರ್ಥೈಸಲ್ಪಟ್ಟ ಶ್ರೀ ವೈಷ್ಣವ ಧರ್ಮವು ಬಹುಶಃ ಸಾಮಾಜಿಕ ಪದ್ಧತಿಗಳ ಕಠಿಣತೆಯನ್ನು ಕಡಿಮೆ ಮಾಡಿತ್ತು. ಉದಾಹರಣೆಗೆ ರಾಮಾನುಜರು ಅಂತ್ಯಜರಿಗೆ ವರ್ಷಕ್ಕೊಮ್ಮೆ ಮೇಲ್ಕೋಟೆಯ ಬಳಿಯಿರುವ ದೇವರನ್ನು ಭೇಟಿ ಮಾಡಲು ಅಂತ್ಯಜರು ಅಥವಾ ಅಸ್ಪೃಶ್ಯರಿಗೆ ಪ್ರವೇಶ ಅನುಮತಿಯನ್ನು ನೀಡಿದ್ದರು. ಅವರು ಅಂತ್ಯಜರನ್ನು ತಿರುಕ್ಕುಳೂತ್ತೂರ್ ಅಥವಾ ದೇವರ ಮಕ್ಕಳು ಎಂದು ಕರೆಯುತ್ತಿದ್ದರು. ಈ ರೀತಿಯಾದ ಸಂಪ್ರದಾಯವನ್ನು ಸೋಮನಾಥಪುರದ ಬಳಿಯ ಶ್ರೀನಿವಾಸ ದೇವಾಲಯದಲ್ಲಿಯೂ ಕೂಡ ಮುಂದುವರೆದಿರುವುದನ್ನು ಕಾಣಬಹುದು. ಈಗ ನಾವು ಸಮಾಜ ಹಾಗೂ ಆರ್ಥಿಕತೆಯೆರಡರ ಆಧಾರವಾಗಿದ್ದ ದೇವಾಲಯದ ಸಾಂಸ್ಕೃತಿಕ ದೃಷ್ಟಿಕೋನಗಳನ್ನು ಅಧ್ಯಯನ ಮಾಡುವತ್ತ ನಮ್ಮ ಗಮನವನ್ನು ಹರಿಸೋಣ. ಏಕೆಂದರೆ ಮನುಷ್ಯನ ಹುಟ್ಟು ಕೇವಲ ದೈಹಿಕ ಅವಶ್ಯಕತೆಗಳನ್ನು ಪೂರೈಸುವುದು ಮಾತ್ರವಲ್ಲ, ಆದರೆ ಅದಕ್ಕಿಂತ ಹೆಚ್ಚಾಗಿ ಸಾಂಸ್ಕೃತಿಕ ಅವಶ್ಯಕತೆಗಳನ್ನು ಹಾಗೂ ಆದರ್ಶೀಯ ಮೌಲ್ಯಗಳನ್ನು ಪೂರೈಸುವುದೇ ಆಗಿದೆ. ಈ ಸಂಸ್ಕೃತಿಯ ಸಾಂಪ್ರದಾಯಿಕ ಆದರ್ಶಗಳು ಹಾಗೂ ಆಲೋಚನೆಗಳನ್ನು ದೇವಾಲಯ ಸಮುಚ್ಛಯವು ರೂಪಾಂತರಿಸಿ ಸಾಂಸ್ಥೀಕರಿಸಿತು.

### 9.2 ಸಂತೆಗಳು

ಸಂತೆಗಳ ಸ್ಥಾಪನೆ ಪಟ್ಟಣಗಳ ಬೆಳವಣಿಗೆಗೆ ಕಾರಣವಾಯಿತು. ಮಾರುವವರು ಮತ್ತು ಕೊಳ್ಳುವವರು ಒಂದು ಗೊತ್ತಾದ ಸ್ಥಳದಲ್ಲಿ ಗೊತ್ತಾದ ವೇಳೆಯಲ್ಲಿ ಸೇರುವುದಕ್ಕೆ ಸಂತೆ ಎನ್ನಬಹುದು. ಹೀಗೆ ಸಂತೆ ಒಂದು ಮುಖ್ಯ ವ್ಯಾಪಾರ ಕೇಂದ್ರವಾಗಿದ್ದಿತು. ಸಂತೆ ನಡೆಯುತ್ತಿದ್ದ ಪಟ್ಟಣಗಳಲ್ಲಿ ವ್ಯಾಪಾರಿಗಳಿಗೆ ಮತ್ತು ಇತರ ಸಂದರ್ಶಕರಿಗೆ ಒಳ್ಳೆಯ ರಸ್ತೆಗಳು ಮತ್ತು ವಿಶೇಷವಾದ ನೀರು ಮುಂತಾದ ಅನುಕೂಲಗಳನ್ನು ಒದಗಿಸಲಾಗುತ್ತಿತ್ತು. ಸ್ಥಳೀಯ ವರ್ತಕರು ಮತ್ತು ಅವರ ಅಧ್ಯಕ್ಷ ಸಂತೆಯನ್ನು ನಡೆಸುತ್ತಿದ್ದರು. ಅಧ್ಯಕ್ಷನು ಪೌರಸಭಾಧ್ಯಕ್ಷನು ಆಗಿದ್ದನು. ಸಂತೆಗೆ ತಗಲುವ ವೆಚ್ಚವನ್ನು ದಾಸ್ತಾನುಗಳನ್ನು ಮಾರಿದಾಗ ಅಥವಾ ಕೊಂಡಾಗ ವಸೂಲು ಮಾಡುತ್ತಿದ್ದ ಸುಂಕಗಳಿಂದ ನಡೆಸಲಾಗುತ್ತಿತ್ತು. ಈ ಸುಂಕವನ್ನು ನಗದು ಅಥವಾ ಸರಕುಗಳ ರೂಪದಿಂದ ವಸೂಲು ಮಾಡಲಾಗುತ್ತಿದ್ದಿತು. ಸಂತೆಯನ್ನು ನಡೆಸುವುದಕ್ಕೆ ರೈತರು ಮತ್ತು ವರ್ತಕರು ಒಂದಾಗಿ ಅಧ್ಯಕ್ಷನಿಗೆ ಭೂಮಿ ಮತ್ತು ಹಲವು ತೆರಿಗೆಗಳನ್ನು ಕೊಡುತ್ತಿದ್ದರು. ಅನೇಕ ವೇಳೆ ಸಂತೆಯನ್ನು ಸ್ಥಾಪಿಸಲು ಶ್ರೇಣಿಯ ಅಧ್ಯಕ್ಷನಿಗೆ ಭೂಮಿಯನ್ನು ಕೊಡಲಾಗುತ್ತಿತ್ತು. ಸಂತೆ

ನಡೆಯುವ ಸ್ಥಳವನ್ನು ಪೇಟೆಸಂತೆ ಅಥವಾ ಸಂತೇಪೇಟೆ ಎಂದು ಕರೆಯುತ್ತಿದ್ದರು. ನಾಡುಗೌಡ ಅಥವಾ ಮಹಾಮಂಡಲೇಶ್ವರ ಅಥವಾ ಒಬ್ಬ ಮಂತ್ರಿಯ ಆಜ್ಞೆಯ ಮೇರೆಗೆ ಸಂತೆಗಳನ್ನು ಪ್ರಾರಂಭಿಸಲಾಗುತ್ತಿತ್ತು ಅಥವಾ ಮಹಾ ಮಂಡಲೇಶ್ವರ ಅಥವಾ ಒಬ್ಬ ಮಂತ್ರಿಯ ಆಜ್ಞೆಯ ಮೇರೆಗೆ ಸಂತೆಗಳನ್ನು ಪ್ರಾರಂಭೀಸಲಾಗುತ್ತಿತ್ತು ಅಥವಾ ಊರ್ಜಿತಗೊಳಿಸಲಾಗುತ್ತಿತ್ತು. 1) ಕ್ರಿ.ಶ.1382ರ ಬೇಲೂರಿನ ಒಂದು ಶಾಸನವು ನಡೆಯುತ್ತಿದ್ದ 27 ಪಟ್ಟಣಗಳ ಪಟ್ಟಿಯನ್ನು ಕೊಡುತ್ತದೆ. ಅವು ಹೀಗಿದ್ದವು ವಿಜಯನಗರಿ, ಹಸಿನಾವತಿ, ದೋರಸಮುದ್ರ, ಗುತ್ತಿ, ಪೆನುಗೊಂಡ, ಆದವಾನಿ; ಉದಯಗಿರಿ, ಚಂದ್ರಗಿರಿ, ಮುಳವಾಯಿ, ಕಾಂಚಿ, ಪೆಡುವೀಡು, ಚದುರಂಗ ಪಟ್ಟಣ, ಮಂಗಳೂರು, ಭಾರಕೂರು, ಹೊನ್ನಾವರ, ಆರಗ, ಚಂದ್ರಗುತ್ತಿ, ಹುಲಿಕೆರೆ, ನಿಡುಗಲ್ಲು, ತರಿಯಕಲ್ಲು ಮತ್ತು ಸಂಗಪಟ್ಟಣ.[3]

ಶ್ರೇಣಿಗಳ ಮುಖಂಡರು ಸರ್ಕಾರಕ್ಕೆ ಅರ್ಜಿ ಹಾಕಿದಾಗ ಅದು ಹೊಸ ಪಟ್ಟಣಗಳನ್ನು ಕಟ್ಟುವ ಕೆಲಸವನ್ನು ಕೈಗೊಳ್ಳುತ್ತಿತ್ತು. ಅವರು ಜನಸಮುದಾಯದ ಪರವಾಗಿ ವರ್ತಿಸುತ್ತಿದ್ದರು. ಶ್ರೇಣಿಗಳ ಮುಖಂಡರನ್ನು ಸೂಚಿಸಲು 'ಉಭಯನಾನಾದೇಶಿ[4]' 'ಪಟ್ಟಣಸ್ವಾಮಿ[5]' 'ಮಹಾವಡ್ಡ ವ್ಯವಹಾರಿ[6]' 'ವಡ್ಡಮಹಾವರಿ[7]' ಎಂಬ ಪದಗಳನ್ನು ಉಪಯೋಗಿಸಲಾಗುತ್ತಿತ್ತು ಮತ್ತು ಅವರು ಅನೇಕ ವೇಳೆ ಪಟ್ಟಣಗಳ ಮುಖಂಡರು ಆಗಿರುತ್ತಿದ್ದರು. ದೊಡ್ಡ 'ವಡ್ಡವ್ಯವಹಾರಿ' ನಾನಾ ದೇಶಿಗಳ ಮುಖಂಡ ಅರ್ಜುಭಟ್ಟಯ್ಯನ ಮಗ ಮಹಾದೇವಣ್ಣ, ಬುಕ್ಕಣ್ಣ ಒಡೆಯರಿಗೆ ಚಂಗನಾಡಿನ ಲಕ್ಷ್ಮೀಪುರದಲ್ಲಿ ಒಂದು ಸಂತೆಯನ್ನು ಸ್ಥಾಪಿಸಲು ಅರ್ಜಿ ಹಾಕಿದನು. ರಾಜನು ಅವಶ್ಯಕವಾದ ಆಜ್ಞೆಯನ್ನು ಮಾಡಲು ಪ್ರಧಾನಮಂತ್ರಿ, ಸೋರಪ್ಪ ನವಿಲೆ ಹಂದರಗೆ, ಪೊಸನಾಡು ಮತ್ತು ಇದರ ಸ್ಥಳಗಳ ರೈತರ ಸಹಾಯದಿಂದ ಆ ಆಜ್ಞೆಯನ್ನು ಕಾರ್ಯಗತ ಮಾಡಿದನು.

### 9.3 ವ್ಯಾಪಾರ

ಹೊಯ್ಸಳರ ಕಾಲದಲ್ಲಿ ಬಹುತೇಕ ಗ್ರಾಮಗಳ ಪಟ್ಟಣ ಎಂಬ ವಾಣಿಜ್ಯ ಕೇಂದ್ರದೊಂದಿಗೆ ಸಂಬಂಧಪಟ್ಟಿರುತ್ತಿದ್ದವು. ಪಟ್ಟಣ ಎಂಬುದು ಒಂದು ವಾಣಿಜ್ಯ ನಗರ ಕೇಂದ್ರವಾಗಿತ್ತು. ಹಳ್ಳಿ-ಗ್ರಾಮ, ಕಾಲು-ಗ್ರಾಮ. ಕೊಪ್ಪಲು ಮೊದಲಾದ ಕೃಷಿ ಸಮುದಾಯದಿಂದ ಬೇರೆಯಾಗಿತ್ತು. ಅಥವಾ ಒಂದು ಅರ್ಥದಲ್ಲಿ ಊರು ಅಥವಾ ಪುರವಾಗಿತ್ತು. ಬ್ರಾಹ್ಮಣರು ಹೇರಳ ಸಂಖ್ಯೆಯಲ್ಲಿ ವಾಸಿಸುತ್ತಿದ್ದ ಹಳ್ಳಿಗಳನ್ನು ಬ್ರಹ್ಮದೇಯ ಅಗ್ರಹಾರ, ಚತುರ್ವೇದಿ ಮಂಗಲ (ಸೋಮನಾಥಪುರ)

ಎಂದೆಲ್ಲ ಕರೆಯುತ್ತಿದ್ದರು. ಅಂದ ಮಾತ್ರಕ್ಕೆ ಊರು ಅಥವಾ ಪುರ ಅಥವಾ ಬ್ರಹ್ಮದೇಯ ಎಂದು ಕೊನೊಗೊಳ್ಳುವ ಹೆಸರಿನ ಸ್ಥಳವು ನಗರ ಕೇಂದ್ರವಾಗಬಾರದು ನಗರ ಲಕ್ಷಣಗಳನ್ನು ಬೆಳೆಸಿಕೊಳ್ಳ ಬಾರದು ಎಂದೇನೂ ಇರಲಿಲ್ಲ.

ಹೊಯ್ಸಳರ ಶಾಸನಗಳಲ್ಲಿ ಈ ಕೆಳಗಿನ ವ್ಯಾಪಾರಗಳು ಸಾಮಾನ್ಯವಾಗಿ ನಡೆಯುತ್ತಿದ್ದುದನ್ನು ಕಾಣುತ್ತೇವೆ.[8] 1. ಧಾನ್ಯಗಳ ವರ್ತಕರು, 2. ಬಟ್ಟೆಯ ವ್ಯಾಪಾರಿಗಳು, 3. ಆನೆಗಳು, ಕುದುರೆಗಳು ಮತ್ತು ಹಸು-ಕರುಗಳನ್ನು ಮಾರುವವರು, 4. ಆಭರಣ ವ್ಯಾಪಾರಿಗಳು, 5. ಎಣ್ಣೆ ಮಾರುವವರು, 6. ವೀಳ್ಯದೆಲೆ ಮಾರುವವರು, 7. ಕಟ್ಟಿಗೆ ವ್ಯಾಪಾರಿಗಳು, 8. ತಿರುಗು ವ್ಯಾಪಾರಿಗಳು ಹೊಯ್ಸಳ ಶಾಸನಗಳಲ್ಲಿ ಪ್ರಮುಖ ಸೆಟ್ಟಿಯರನ್ನು ಅಥವಾ ವರ್ತಕರ ಉಲ್ಲೇಖವನ್ನು ನೋಡುತ್ತೇವೆ. ಅರಸೀಕೆರೆಯ ಒಂದು ಶಾಸನವು[9] ಕಮ್ಮಟಚಟ್ಟ ಸೆಟ್ಟಿ ಎಂಬುವನು ಹಡಗುಗಳಲ್ಲಿ ಆನೆಗಳು, ಕುದುರೆಗಳು, ಮತ್ತು ಮುತ್ತುಗಳನ್ನು ಆಮದು ಮಾಡಿಕೊಂಡು ಅವುಗಳನ್ನು ರಾಜರಿಗೆ ಮಾರುತ್ತಿದ್ದನು. ಅವನ ಸಹೋದರ ದಾಸಯ್ಯ ಸೆಟ್ಟಿಯು ಸರಕುಗಳನ್ನು ಪೂರ್ವದಿಂದ ಪಶ್ಚಿಮಕ್ಕೂ, ಪಶ್ಚಿಮದಿಂದ ಪೂರ್ವಕ್ಕೂ, ಉತ್ತರದಿಂದ ದಕ್ಷಿಣಕ್ಕೂ, ದಕ್ಷಿಣದಿಂದ ಉತ್ತರಕ್ಕೂ ಸಾಗಿಸುತ್ತಿದ್ದನು ಎಂದು ಹೇಳುತ್ತದೆ. ಕ್ರಿ.ಶ. 1255 ರ ಶಾಸನ ಕುಂಜುನಂಬಶೆಟ್ಟಿಯು ಮಾಳವ ಅರಸರ ಕಳಿಂಗ ಚೋಳ ಮತ್ತು ಪಾಂಡ್ಯ ಅರಸರ ಅಗತ್ಯಗಳನ್ನು ಪೂರೈಸುತ್ತಿದ್ದನು ಎಂದು ಹೇಳಲಾಗಿದೆ.

ಪಟ್ಟಣದಲ್ಲಿ ವರ್ತಕ ಸಂಘಗಳಿದ್ದವು ಮತ್ತು ಒಬ್ಬ ಪಟ್ಟಣ ಸ್ವಾಮಿಯಿದ್ದನು. ಹೊಯ್ಸಳ ಶಾಸನಗಳು ವರ್ತಕರನ್ನು ಪಟ್ಟಣಸ್ವಾಮಿಗಳನ್ನು ಮೂಲಸ್ತಂಭ ಅಥವಾ ರಾಜ್ಯದ ಅಭ್ಯುದಯಕ್ಕೆ ಕಂಬದಂತೆ ಆಧಾರವಾಗಿದ್ದರು ಎಂದು ವರ್ಣಿಸುತ್ತದೆ. ಒಂದು ಪಟ್ಟಣದ ವತ್ಕ ಸಂಘಗಳು ಒಂದು ನಗರ ಕೇಂದ್ರದ ಹಲವು ಸಂಘಗಳಲ್ಲಿ ಒಂದಾಗಿ ಕೆಲಸ ಮಾಡುತ್ತಿದ್ದವು ಅಥವಾ ಕೆಲವೊಮ್ಮೆ ಮುಖ್ಯ ಕೇಂದ್ರಗಳಲ್ಲಿ ಏಕೈಕ ಸಂಘವಾಗಿ ವರ್ತಿಸುತ್ತಿದ್ದವು. ಪಟ್ಟಣವು ವಸ್ತುಗಳ ವಿತರಣೆಯ ಸ್ಥಳವಾಗಿ ಕೆಲಸ ನಿರ್ವಹಿಸುತ್ತಿದ್ದಿತು. ಹೊರಗಿನ ಮೂಲಗಳಿಂದ ಬಂದ ವಸ್ತುಗಳನ್ನು ಸ್ಥಳೀಯ ಗ್ರಾಮಗಳ ಉಪಯೋಗಕ್ಕಾಗಿ ಒದಗಿಸುತ್ತಿದ್ದಿತು. ಸ್ಥಳೀಯ ವಸ್ತುಗಳನ್ನು ಪಟ್ಟಣದ ಸಂತೆ ಸಂತೇಪೇಟೆ ಅಥವಾ ಪೇಟೆ ಎಂದು ಕರೆಯುತ್ತಿದ್ದ ಮಾರುಕಟ್ಟೆ ಪ್ರದೇಶಗಳ ಮೂಲಕ ವರ್ಗಾಯಿಸ

ಲಾಗುತ್ತಿತ್ತು. ಅಲ್ಲಿ ಅವು ಹೊಯ್ಸಳ ರಾಜ್ಯದ ಕರಾವಳಿ ಬಂದರುಗಳಿಗೆ ರವಾನೆಯಾಗಿ ಅಲ್ಲಿಂದ ಹೊರ ಜಗತ್ತಿಗೂ ವಿತರಣೆಯಾಗುತ್ತಿತ್ತು.

**ವ್ಯಾಪಾರದ ಸರಕುಗಳು**

ವ್ಯಾಪಾರ ಮತ್ತು ವಾಣಿಜ್ಯದ ಮೂಲಕ ಹಲವಾರು ವಸ್ತುಗಳ ಆಮದು ಮತ್ತು ರಫ್ತು ಕಾರ್ಯ ನಡೆಯುತ್ತಿತ್ತು. ಆ ಕಾಲದಲ್ಲಿ ಮಾರಾಟ ಮಾಡುತ್ತಿದ್ದ ಸರಕುಗಳೆಂದರೆ ಭತ್ತ, ಜೋಳ, ಎಳ್ಳು, ಕಡಲೆ, ತೊಗರಿ, ಗೋಧಿ, ಉದ್ದು, ಮುಂತಾದ ಧಾನ್ಯಗಳಲ್ಲದೆ ಜೀರಿಗೆ, ಸಾಸುವೆ, ಮೆಣಸು, ಶುಂಠಿ, ಅರಿಶಿನ, ಏಲಕ್ಕಿ, ಈರುಳ್ಳು, ಬೆಳ್ಳುಳ್ಳಿ ಮುಂತಾದ ಸಾಂಬಾರ ಪದಾರ್ಥಗಳು ವೀಳ್ಯದೆಲೆ, ಸುಣ್ಣ, ಅಡಿಕೆ, ಸಕ್ಕರೆ, ಉಪ್ಪು, ಮುಂತಾದ ಸರಕುಗಳು ಹಣ್ಣುಗಳು ಮತ್ತು ಕಾಯಿಪಲ್ಯಗಳು ಮುಖ್ಯ ಮಾರಾಟದ ಸರಕುಗಳಾಗಿದ್ದವು.[10]

**ಸರಕು ಸಾಗಾಣಿಕೆಯ ಸಾಧನಗಳು**

ಸರಕುಗಳನ್ನು ಎತ್ತಿನ ಬಂಡಿಗಳ[11] ಮೇಲೆ ಕತ್ತೆ, ಕೋಣ, ಕುದುರೆ, ಮುಂತಾದ ಪ್ರಾಣಿಗಳ ಮೇಲೆಯೂ ಸಾಮಾನುಗಳನ್ನು ಹೇರಿ ಸಾಗಿಸುತ್ತಿದ್ದರು.[12] ಸಣ್ಣಸಣ್ಣ ವಸ್ತುಗಳನ್ನು ತಲೆಯ ಮೇಲೆ ಹಸುಬೆ ಚೀಲಗಳಲ್ಲಿ ಹೊತ್ತು ವ್ಯಾಪಾರ ಮಾಡುತ್ತಿದ್ದರು ಎಣ್ಣೆಯನ್ನು ಕೊಡಗಳಲ್ಲಿ ತುಂಬಿ ಮಾರುತ್ತಿದ್ದರು.[13]

**9.4 ದೇವಾಲಯ ನಗರವಾಗಿ ಸೋಮನಾಥಪುರ**

ಸೋಮನಾಥಪುರವು ದೇವಾಲಯ ನಗರವಾದ್ದರಿಂದ ಅದರ ಸಾಮಾಜಿಕ ರಚನೆಗೆ ಪೂರ್ವಬಾವಿಯಾಗಿ ದೇವಾಲಯ ಸಂಕೀರ್ಣವು ನಿರ್ಮಾಣವಾಯಿತು. ಸ್ವತಃ ಜೈನನಾಗಿದ್ದ ಮೂರನೇ ನರಸಿಂಹನು ಸುಮಾರು ಕ್ರಿ.ಶ. 1268ರಲ್ಲಿ ವಿಷ್ಣುವಿಗೆ ಒಂದು ದೇವಾಲಯವನ್ನು ಕಟ್ಟಿಸಿದರು. ಈ ನಗರಕ್ಕೆ ಹೆಸರು ಬಂದದ್ದು ಮೂರನೇ ನರಸಿಂಹನ ಸಚಿವನು ಸೇನಾಧಿಪತಿಯು ಆಗಿದ್ದ ಸೋಮ ಯೆಂಬುವನಿಂದ ಅವನು ಶೈವನಾಗಿದ್ದು ಅವನು ದೇವಾಲಯದಲ್ಲಿ ಕೇಶವ ದೇವರನ್ನು ಪ್ರತಿಷ್ಠೆ ಮಾಡಿಸಿದನು. 1269 ಜೂನ್ ತಿಂಗಳಿನಲ್ಲಿ ರಾಜನು ದೇವಾಲಯ ದತ್ತಿಯನ್ನು ಪ್ರಕಟಿಸಿದನು. ಆಮೇಲೆ ಏಳು ವರ್ಷಗಳ ನಂತರ ಕ್ರಿ.ಶ. 1276ರಲ್ಲಿ ಸೋಮಯ್ಯನು ಆಡಳಿತಾಧಿಕಾರಕ್ಕೆ ಸೇರಿದ ಇನ್ನಿಬ್ಬರು ಅಧಿಕಾರಿಗಳು ಸೇರಿ ವಿವರವಾಗಿ ದೇವಾಲಯಕ್ಕೆ ರಾಜ್ಯದ ಬೊಕ್ಕಸದಿಂದ ಸಲ್ಲುವ

ವರಮಾನವನ್ನು ನಿಗದಿಗೊಳಿಸಿದರು.[14] ಅದು 3389 ಗದ್ಯಾಣಗಳು ಮತ್ತು 3 ಹಣ ಹಾಗೂ ವರ್ಷಕ್ಕೆ 2558 1/2 ಗದ್ಯಾಣಗಳು ವೈಷ್ಣವ ಮತ್ತು ಶೈವ ದೇವಾಲಯ ಸಂಕೀರ್ಣಗಳ ಪಾಲನೆಗಾಗಿ ಈ ನಿಗದಿಯಾಯಿತು. ಹೀಗೆ ರಾಜನು ಕೈಗೊಂಡ ಕ್ರಮದಿಂದ ಅಲ್ಲೊಂದು ನಗರ ಕೇಂದ್ರವು ತಲೆ ಎತ್ತಲು ಆಸ್ಪದ ಮಾಡಿಕೊಟ್ಟಿತು. ಅದರ ಸಾಮಾಜಿಕ ರಚನೆಯು ವೇದಾಧಿಕಾರ ಬ್ರಾಹ್ಮಣರ ಮೇಲುಗೈ ಆಚರಣೆಗಳ ಪವಿತ್ರತೆ ಇವುಗಳ ಉತ್ಕಟ ಪ್ರಭಾವದಲ್ಲಿ ಇರುವಂತಾಯಿತು. ವೈಷ್ಣವ ಸ್ಥಲ ಮತ್ತು ಶೈವ ಸ್ಥಳ ಎಂಬ ಎರಡು ಮುಖ್ಯ ಭಾಗಗಳು ಅನೇಕ ಸಮಾಜಿಕ ಮತ್ತು ವೃತ್ತಿನಿರತ ವರ್ಗಗಳಿಗೆ ಜೀವನೋಪಾಯದ ಕೇಂದ್ರಗಳಾದವು. ರಾಜಾದಯದ ನಿಗದಿಯೇ ಸೂಚನೆ ಯಾಗುವುದಾದರೆ ಶೈವಸ್ಥಲಕ್ಕಿಂತ ವೈಷ್ಣವ ಸ್ಥಲವು ಹೆಚ್ಚು ಪಡೆದಿತ್ತು ಎಂದು ತಿಳಿಯುತ್ತದೆ.

ಸೋಮನಾಥಪುರವನ್ನು ಏಕೆ ನಗರ ಕೇಂದ್ರವೆಂದು ಗುರುತಿಸಬಹುದು ಎನ್ನುವುದಕ್ಕೆ ಎರಡು ಮುಖ್ಯವಾದ ಕಾರಣಗಳಿವೆ. ಮೊದಲನೆಯದಾಗಿ ಅದರ ಸಾಮಾಜಿಕ ಆರ್ಥಿಕ ರಚನೆಯು ಕೆಲಸದ ಹಂಚಿಕೆಯನ್ನು ವ್ಯಕ್ತಪಡಿಸಿತು. ರಚನೆಯ ಒಳಗಿನ ತಂಡಗಳು ಮೊದಲಿಗೆ ದೇವಾಲಯವು ಒದಗಿಸಿದ ಅನುತ್ಪಾದಕ ವೃತ್ತಿಗಳಲ್ಲಿ ನಿರತರಾಗಿದ್ದರು. ಅದಕ್ಕೆ ಉತ್ಪಾದಕವಾದ ಆರ್ಥಿಕತೆಯೊಂದರ ಪೋಷಣೆಯಿದ್ದಿತೇನೋ ಹೌದು, ಆದರೆ ನಗರದ ಉದಯಕ್ಕೆ ಅದಷ್ಟೆ ಸಾಲದು ಎರಡನೆಯದಾಗಿ ಒಳ್ಳೆಯ ಮಣ್ಣು ತರಿ ಖುಷ್ಕಿ ತೋಟಗಳು ನೀರಾವರಿ. ಕಾವೇರಿಗೆ ಸಮೀಪದಲ್ಲಿರುವುದು ಹೀಗೆ ಹಿತಕರವಾದ ಕೃಷಿ ಪರಿಸ್ತಿತಿಯಿದ್ದುದಲ್ಲದೆ ಅದರ ಜೊತೆಗೆ ಕೃಷಿಕರು ಬೆಳೆದ ಉತ್ಪನ್ನದ ಒಂದು ಭಾಗವನ್ನು ತಮಗಾಗಿ ಬಳಸಿಕೊಳ್ಳುವ ಒಂದು ಸಾಮಾಜಿಕ ಸ್ಥರವು ರೂಪುಗೊಂಡಿತ್ತು ಅದರ ವಿವರಗಳು ಹೀಗಿವೆ.

| | **ವಿವರಗಳು** | **ಮೊತ್ತ** |
|---|---|---|
| 1 | ಭೂಮಿಯ 14 ವೃತ್ತಿಗಳಿಂದ ವರಮಾನ ದರ ವೃತ್ತಿಗೆ 45 ಗದ್ಯಾಣಗಳಂತೆ | 630 ಗದ್ಯಾಣ |
| 2 | 4 ತೋಟಗಳಿಂದ ಮತ್ತು 4 ಹಳ್ಳಿಗಳಿಂದ ಬಂದ ವರಮಾನ | 80 ಗದ್ಯಾಣ |
| 3 | 200 ಸಲಗೆಗಳಿಂದ ಬಂದ ವರಮಾನ 1 ಸಲಗೆಗೆ 1 ಗದ್ಯಾಣದಂತೆ | 200 ಗದ್ಯಾಣ |

| 4 | ಯಡದೊರೆ ನಾಡಿನ ಹಾದರಿವಾಗಿರಿನಿಂದ ವರಮಾನ | 150 ಗದ್ಯಾಣ |
|---|---|---|
| 5 | ಬಾಡಗೆರೆ ನಾಡಿನ ಮುರೆಯಹಳ್ಳಿಯಿಂದ ಬಂದ ವರಮಾನ | 1997 ಗದ್ಯಾಣ 3 ಹಣ |
| 6 | ಸೀಗಲ ನಾಡಿನ ಮಾರದೇವನು ದಾನ ನೀಡಿದ ಹಗೆಯ ಹಳ್ಳಿ ಮತ್ತು ಮರೆಯ ಹಳ್ಳಿಗಳಿಂದ | 120 ಗದ್ಯಾಣ |
| | **ಒಟ್ಟು** | **3387 ಗದ್ಯಾಣ 3 ಹಣ** |

ಮೂರನೇ ನರಸಿಂಹನು ದೇವಾಲಯ ಸಂಕೀರ್ಣಕ್ಕೆ ಅಂಗಭೋಗ, ರಂಗಭೋಗ, ದಿನನಿತ್ಯದ ಅರ್ಚನೆ ಮತ್ತು ಉತ್ಸವಗಳಿಗಾಗಿ ದುರಸ್ತಿ ಜೀರ್ಣೋದ್ಧಾರಗಳಿಗಾಗಿ 72 ಬಾಹತ್ತರ ನಿಯೋಗಿ ಅಂದರೆ ದೇವಾಲಯದ ನೌಕರರ ಜೀವಕೆಗಾಗಿ ಒಟ್ಟು 3387 ಗದ್ಯಾಣ 3 ಹಣಗಳ ದತ್ತಿ ನೀಡಿದಾಗ ಸಾಮಾಜಿಕ ರಚನೆಯ ಪ್ರಕ್ರಿಯೆಯು ಪ್ರಾರಂಭವಾಯಿತು.

ಆಮೇಲೆ ವಿವಿಧ ವೃತ್ತಿ ಪಂಗಡಗಳು ಸೋಮನಾಥಪುರದಲ್ಲಿ ನೆಲೆಸಿ ಅದಕ್ಕೊಂದು ನಗರದ ರೂಪವನ್ನು ಕೊಟ್ಟರು. ವೇತನ ಮತ್ತು ಸ್ಥಾನಮಾನಗಳಿಗನುಗುಣವಾಗಿ ಅವರನ್ನು ಹೀಗೆ ವರ್ಗೀಕರಿಸಬಹುದು.

1) ಸ್ಥಾನಿಕರು, ಆಚಾರ್ಯರು ನಂಬಿಗಳು, ವೈಷ್ಣವರು ಮತ್ತು ಉಪಾಧ್ಯಾಯರು
2) ದೇವಾಲಯವನ್ನು ಅಲಂಕರಿಸುವವರು ದೇವಳಿಗರೆಂಬ ಸೇವಕರು, ಕೊಠಾರಿಗಳು, (ಉಗ್ರಾಣ ಪಾಲಕರು) ದೇವರುಗಳಿಗೆ ಅಭಿಷೇಕದ ನೀರು ಹೊತ್ತು ತರುವವರು ಹೂಮಾಲೆಗಳನ್ನು ಕಟ್ಟುವವರು, ಸುಗಂಧ ಜಲವನ್ನು ಒದಗಿಸುವವರು ಚೌರಿ ಬೀಸುವವರು, ರಂಗವಲ್ಲಿ ಇಡುವವರು, ಪುರಾಣ ವಾಚಕರು ಮತ್ತು ವ್ಯಾಖ್ಯಾನಕಾರರು ಕರ್ಪೂರದ ಆರತಿಯವರು, ದೇವಾಲಯದ ರಕ್ಷಕರು, ದೇವತಾ ವಿಗ್ರಹಗಳ ಅಂಗರಕ್ಷಕರು.
3) ದೇವಾಲಯ ಸಂಕೀರ್ಣದ ಕಛೇರಿ ಸಿಬ್ಬಂದಿ, ಲೆಕ್ಕ ತಜ್ಞ ಮೊಹರುಗಳ ಅಧಿಕಾರಿ ಮತ್ತು ಕೋಶಾಧ್ಯಕ್ಷ
4) ನರ್ತಕಿಯರು ಮತ್ತು ಗಾಯಕರು ರಂಗಭೋಗದ ನಾಗವಾಸ ಮೊಖಾರಿಗಳು.
5) ಅಕ್ಕಸಾಲಿಗರು, ಬಡಗಿಗಳು, ನಾಯಿಂದರು, ಕುಂಬಾರರು ಮತ್ತು ಅಗಸರು. ಈ ವೃತ್ತಿ ಪಂಗಡಗಳ ಜನರ ವೇತನವನ್ನು ಸಂಸ್ಥೆಯಲ್ಲಿನ ಅದರ ಸ್ಥಾನಮಾನ ಮತ್ತು ಹೊಣೆಗಾರಿಕೆ

ಗಳಿಗೆ ಅನುಗುಣವಾಗಿ ನಿಗದಿ ಪಡಿಸಲಾಗುತ್ತಿತ್ತು. ಉದಾ. ಅನುಸ್ಥಾನಿಕರು, ಆಚಾರ್ಯರು ಮತ್ತು ನಂಬಿಗಳಿಗೆ ಅತಿ ಹೆಚ್ಚು ವೇತನ 12 ಗದ್ಯಾಣ ಒಬ್ಬೊಬ್ಬರಿಗೂ ದೊರಕುತ್ತಿದ್ದಿತು. ಕುಶಲ ಕರ್ಮಿಗಳು ನಾಯಿಂದಿರು ಮತ್ತು ಅಗಸರಿಗೆ ಅತ್ಯಂತ ಕನಿಷ್ಟ ವೇತನ ದೇವಾಲಯ ಸಿಬ್ಬಂದಿಯ ಅನುಕ್ರಮಿಕ ಶ್ರೇಣಿ ಹೀಗಿರುತ್ತಿತ್ತು.

| | **ಹುದ್ದೆ** | **ಸಂಖ್ಯೆ** | **ವೇತನ** |
|---|---|---|---|
| 1 | ವೈಷ್ಣವರು | 20 | 15 ಗದ್ಯಾಣ |
| 2 | ಆಚಾರ್ಯ | 1 | 20 ಗದ್ಯಾಣ |
| 3 | ಪೌರಾಣಿಕ (ಪುರಾಣಗಳನ್ನು ಓದಿ ಅರ್ಥ ವಿವರಿಸುವವನು) | 1 | 16 ಗದ್ಯಾಣ |
| 4 | ನಂಬಿಗಳು | ? | 126 ಗದ್ಯಾಣ |
| 5 | ನಂಬಿ | 1 | 12 ಗದ್ಯಾಣ |
| 6 | ಯೋಗ ನರಸಿಂಹ ದೇವರ ನಂಬಿ | 1 | 4 ಗದ್ಯಾಣ |
| 7 | 5 ಮುಖ್ಯ ದೇವರುಗಳ ಅಲಂಕಾರ | 5 | 20 ಗದ್ಯಾಣ |
| 8 | ಸಹಾಯಕರು (ಒಬ್ಬರಿಗೆ 4 ಗದ್ಯಾಣ) | ? | 42 ಗದ್ಯಾಣ |
| 9 | ಅಪ್ಪಂಚ್ಚಯವರು (ಆಜ್ಞೆ ಪಾಲಿಸುವವರು) | ? | 42 ಗದ್ಯಾಣ |
| 10 | ಹಡಗ | ? | 6 ಗದ್ಯಾಣ |
| 11 | ಕುಡಿಯುವ ನೀರು ಒದಗಿಸುವುದು | ? | 6 ಗದ್ಯಾಣ |
| 12 | ಗಂಧದ ಸೇವೆ | ? | 6 ಗದ್ಯಾಣ |
| 13 | ಚೌರಿ ಚಾಮರ ಹಿಡಿಯುವವರು | 1 | 6 ಗದ್ಯಾಣ |
| 14 | ಸೋಮ ಬೋರ | 1 | 6 ಗದ್ಯಾಣ |
| 15 | ಮುದ್ರೆಯ (ಮೊಹರಿನ ಸೇವೆ) | 2 | 12 ಗದ್ಯಾಣ |
| 16 | ಭಟ್ಟ ಗುಟ್ಟರು | 2 | 12 ಗದ್ಯಾಣ |
| 17 | ಕರ್ಪೂರ ಆರತಿ ಬೆಳಗುವವರು | 2 | 12 ಗದ್ಯಾಣ |
| 18 | ರಂಗವಲ್ಲಿ ಹಿಟ್ಟಿನವರು | 4 | 6 ಗದ್ಯಾಣ |
| 19 | ಅಡಿಗೆಯವರು | 10 1/2 | 42 ಗದ್ಯಾಣ |

| 20 | ಅಪ್ಪಣೆ (ಅಧಿಕಾರಿಗಳು) | 5 | 20 ಗದ್ಯಾಣ |
|---|---|---|---|
| 21 | ಅಡಿಗೆ ಮನೆಯ ಜವಾಬ್ದಾರಿ | ? | 20 ಗದ್ಯಾಣ |
| 22 | ಮಾಲೆ ಜಾತಿಯ ಸೇವಕರು | 5 | 20 ಗದ್ಯಾಣ |
| 23 | ದೇವದಾಸಿಗಳು | 10 | 40 ಗದ್ಯಾಣ |
| 24 | ಗಾರೆಯವರು | 1 | 1 ಗದ್ಯಾಣ 2 ಹಣ |
| 25 | ನಾಗಾದಸ | ? | 300 ಗದ್ಯಾಣ |
| 26 | ಅಂಗರಕ್ಷಕರ ನಾಯಕ | 1 | 10 ಗದ್ಯಾಣ |
| 27 | ಸೇವಕರು 17 (4 ಗದ್ಯಾಣದಂತೆ) | 17 | 68 ಗದ್ಯಾಣ |
| 28 | ನಿರ್ದಿಷ್ಟ ದೇವರ ಅಂಗರಕ್ಷಕರ ನಾಯಕರು | 1 | 6 ಗದ್ಯಾಣ |
| 29 | ಸೇವಕರು | 3 | 12 ಗದ್ಯಾಣ |
| 30 | ಛತ್ರ | | 300 ಗದ್ಯಾಣ |
| 31 | ಅಕ್ಕಸಾಲಿಗ | 1 | 4 ಗದ್ಯಾಣ |
| 32 | ಕುಂಬಾರರು | 3 | 12 ಗದ್ಯಾಣ |
| 33 | ಅಗಸ | 1 | 4 ಗದ್ಯಾಣ |
| 34 | ನಾಯಿಂದ | 1 | 4 ಗದ್ಯಾಣ |

ಆ ನಗರ ಕೇಂದ್ರದ ಉದಯದಿಂದಾಗಿ ವಿವಿಧ ರೀತಿಯ ಆಹಾರ ಮತ್ತು ಆಹಾರೇತರ ವಸ್ತುಗಳಿಗೆ ಒಳ್ಳೆಯ ಮಾರುಕಟ್ಟೆ ದೊರೆಯುವಂತಾಯಿತು. ಆ ವಸ್ತುಗಳನ್ನು ದೇವಾಲಯದ ನಿತ್ಯದ ಆಚರಣೆಗಳಲ್ಲೂ ವಿಶೇಷ ಉತ್ಸವಗಳಲ್ಲೂ ಬಳಸುತ್ತಿದ್ದರು. ವರ್ಷಾದ್ಯಂತ ಬರುವ ಉತ್ಸವಗಳಿಗೆ ಅಗತ್ಯವಾಗುವ ಇಂತಹ ಸಾಮಗ್ರಿಗಳ ವಿವರವು ಸೂಕ್ಷ್ಮವು ಆದ ಲೆಕ್ಕವನ್ನು ಶಾಸನಗಳು ಒದಗಿಸುತ್ತವೆ. ಅಕ್ಕಿ, ಭತ್ತ, ಹಿಟ್ಟು, ಎಣ್ಣೆ, ಎಳ್ಳು, ತುಪ್ಪ, ಮೊಸರು, ಹೆಸರುಕಾಳು, ಉಪ್ಪು, ಮೆಣಸು, ಗೋಧಿ, ಬೆಲ್ಲ, ಕಡಲೆಕಾಳು, ಸೀಗೆಪುಡಿ, ಅಡಿಗೆಮನೆಗೆ, ಸೌದೆ, ಧೂಪ, ಶ್ರೀಗಂಧ, ಕರ್ಪೂರ, ಅರಿಶಿನ, ಏಲಕ್ಕಿ, ವೀಳ್ಯದೆಲೆ, ಅಡಿಕೆ ಬಗೆ ಬಗೆಯ ಬಟ್ಟೆಗಳು ಮತ್ತು ದೇವರುಗಳಿಗೆ ಉಡಿಸಲು ಸೀರೆಗಳು (68 ದೇವರುಗಳಿಗೆ 128 ಸೀರೆಗಳು) ವೈಷ್ಣವ ದೇವಾಲಯ ಸಂಕೀರ್ಣದಲ್ಲಿ ರೇಷ್ಮೆ, ಬಟ್ಟೆ, ಛತ್ರ, ಚೌರಿ, ರೇಷ್ಮೆದಾರ, ಕೇಸರಿ, ಕಸ್ತೂರಿ, ದೀಪದ ಬತ್ತಿಗಳಿಗಾಗಿ ಹತ್ತಿ ಬಿದಿರು ಮುಚ್ಚಳಗಳು, ಬುಟ್ಟಿಗಳು ಚೌಕಾಕಾರದ ಬುಟ್ಟಿಗಳು ಇತ್ಯಾದಿ.

ಸೋಮನಾಥಪುರದಲ್ಲಿ ಈ ಎಲ್ಲ ವಸ್ತುಗಳು ಉತ್ಪಾದನೆಯಾಗುತ್ತಿರಲಿಲ್ಲ ಹಲವನ್ನು ಬೇರೆ ಕಡೆಯಿಂದ ತರಿಸಿಕೊಳ್ಳಬೇಕಾಯಿತು. ಇದರಿಂದಾಗಿ ವರ್ತಕ ವರ್ಗದೊಂದಿಗೆ ಸಂಪರ್ಕವಿರಿಸಿಕೊಳ್ಳ ಬೇಕಾಯಿತು. ಸೋಮನಾಥಪುರಕ್ಕೆ ಸಂಬಂಧಿಸಿದಂತೆ ಲಭ್ಯವಿರುವ ದಾಖಲೆಗಳು ಅಲ್ಲಿ ವರ್ತಕರು ವಾಸವಾಗಿದುದ್ದನ್ನು ಉಲ್ಲೇಖಿಸಿಲ್ಲವಾದರೂ ಅಲ್ಲಿ ವತ್ಕರು ಇದ್ದದ್ದು ಮಾತ್ರವಲ್ಲ ಸಮೀಪದ ತಲಕಾಡಿನಂತಹ ವ್ಯಾಪಾರ ಕೇಂದ್ರದೊಂದಿಗೆ ನಿಕಟವಾದ ಸಂಪರ್ಕವನ್ನು ಇಟ್ಟುಕೊಂಡಿದ್ದಿತು ಎಂದು ಭಾವಿಸುವುದು ವಿಹಿತವಾಗುತ್ತದೆ. ಅಲ್ಲದೆ ಸಂಕ್ರಾಂತಿ, ಶಿವರಾತ್ರಿ, ಶ್ರೀಜಯಂತಿ, ದೀಪಾವಳಿ, ಉತ್ಥಾನ ದ್ವಾದಶಿ ಮೊದಲಾದ ಸಂದರ್ಭಗಳಲ್ಲಿ ನಡೆಯುವ ಉತ್ಸವಗಳು ಮತ್ತು ಜಾತ್ರೆಗಳು (ಶಾಸನಗಳಲ್ಲಿ ಉಲ್ಲೇಖಗೊಂಡಿರುವಂತೆ) ವರ್ತಕರನ್ನು ಅಲ್ಲಿಗೆ ಆಕರ್ಷಿಸುತ್ತಿದ್ದವು.

ನಗರದ ಸ್ವಯಾಧಿಕಾರದ ಲಕ್ಷಣವನ್ನು ಮೂರನೇ ನರಸಿಂಹನ ಒಂದು ಆದೇಶದಿಂದ ತಿಳಿಯಬಹುದು. ಇದರ ಕಾಲ ಕ್ರಿ.ಶ. 1281 ತೆರಿಗೆಗಳನ್ನು ಯಾವುದೇ ರೀತಿಯಲ್ಲಿ ಸಂಗ್ರಹಿಸುವ ಉದ್ದೇಶದಿಂದ ಅಧಿಕಾರಿಗಳು ಆ ಭೂಮಿಗೆ ಹೋಗಬಾರದು ಎಂದು ಆಜ್ಞೆಯು ವಿಧಿಸುತ್ತದೆ.[15] ಈ ಭರವಸೆಯನ್ನು ಸ್ಥಳದ ಆಚಾರ್ಯರಿಗೆ ವೈಷ್ಣವರಿಗೆ ಮತ್ತು ನಂಬಿಗಳಿಗೆ ಕೊಡಲಾಗಿದೆ. ಹಾಗಾಗಿ ಅಲ್ಲಿಯ ರಾಜಕೀಯ ಮತ್ತು ಆಡಳಿತೀಯ ಅಧಿಕಾರಗಳೆಲ್ಲವನ್ನು ಮಹಾಜನರ ಕೈಗೆ ಒಪ್ಪಿಸಲಾಗಿತ್ತು. ಕ್ರಿ.ಶ. 1226 ಒಂದು ಶಾಸನದಲ್ಲಿ ಎರಡು ಬಗೆಯ ಮಹಾಜನಗಳು ಜಮೀನಿನ ಆದಾಯವನ್ನು ಕುರಿತು ಒಪ್ಪಂದ ಮಾಡಿಕೊಂಡುದನ್ನು ನೋಡುತ್ತೇವೆ. ಒಂದು ಗುಂಪಿನವರು ಆರು ತಟ್ಟಿನ ಮಹಾಜನರು ಇನ್ನೊಂದು ವರ್ಗದವರು ವೈಷ್ಣವ ಮಹಾಜನರು[16] ಆರುತಟ್ಟಿನ ಮಹಾಜನರು ಎಂಬ ಮಾತು ನಗರದ ಆರು ಮುಖ್ಯ ಧರ್ಮಗಳ ವೈಷ್ಣವ ಹಾಗೂ ಶೈವ ಪಂಗಡಗಳ ಮಹಾಜನರನ್ನು ಸೂಚಿಸುತ್ತದೆ. ಹದಿನಾಲ್ಕು ವೃತ್ತಿಗಳಲ್ಲಿದ್ದ ವೈಷ್ಣವ ಮಹಾಜನರು ಎಂಬುದು ಸ್ಥಳದ ಜನಸಾಮಾನ್ಯರ ಒಂದು ವರ್ಗವನ್ನು ಸೂಚಿಸುತ್ತದೆ. ಹೊಯ್ಸಳ ಆಡಳಿತದೊಂದಿಗೆ ಆದ ಕರಾರಿನಿಂದ ಕಟ್ಟುನಿಟ್ಟಾಗಿ ದೇವಾಲಯ ಸಂಕೀರ್ಣದ ನಿರ್ವಹಣೆಯನ್ನು ನೋಡಿಕೊಳ್ಳುತ್ತಿದ್ದುದರ ಜೊತೆಗೆ ಮಹಾಜನರು ದೇವಾಲಯಕ್ಕೆ ಸೇರಿದ ಜಮೀನು ನೀರಾವರಿ ಕಾರ್ಯಗಳು ಆ ಪ್ರದೇಶದಲ್ಲಿ ತೆರಿಗೆಯ ವಸೂಲಿ ಈ ಕೆಲಸಗಳನ್ನು ನಿರ್ವಹಿಸುತ್ತಿದ್ದರು. ಸಂಗ್ರಹವಾಗಿ ಹೇಳಬೇಕೆಂದರೆ ಪುರೋಹಿತ ವರ್ಗವು ನಗರ ಕೇಂದ್ರದ ಎಲ್ಲಾ ವ್ಯವಹಾರಗಳಲ್ಲೂ ಪ್ರಧಾನ ಸ್ಥಾನವನ್ನು ಪಡೆದಿದ್ದಿತು.

ಸೋಮನಾಥಪುರದ ಬ್ರಾಹ್ಮಣ ಪಂಡಿತರು ಕಾಲಕ್ರಮದಲ್ಲಿ ಅರಸನ ಕಣ್ಣಿನಲ್ಲಿ ಸ್ಥಳದ ಮಹತ್ವವು ಅತಿಶಯವಾಗುವಂತೆ ಕ್ಷೇತ್ರ ಮಹಿಮೆಯ ಕಥೆಗಳನ್ನು ಕಟ್ಟಿದರು. ಅದು ಪವಿತ್ರ ಕ್ಷೇತ್ರ ಮಾತ್ರವಲ್ಲ, ರಾಮಾಯಣದ ಮಹರ್ಷಿ ವಶಿಷ್ಟರ ಆಶ್ರಮವಾಗಿತ್ತು ಎಂದು ನಂಬಲಾಯಿತು. ಹೀಗೆ ಸ್ಥಳವನ್ನು ಪೌರಾಣಿಕ ವಶಿಷ್ಟ ಪರಿಕಲ್ಪನೆಯೊಂದಿಗೆ ಸಂಬಂಧ ಪಡಿಸಿದುದರಿಂದ ಮುಂದೆ ವಿಜಯನಗರ ಸಂಸ್ಥಾನಕ್ಕೆ ಅವಭಲರಾಜ್ಯಮಾತ್ಯ ಅರಸು ಎಂಬ ಅರವೀಡು ಮನೆತನದ ಮಹಾ ಮಂಡಲೇಶ್ವರನಿಂದ ಸಲ್ಲಿಸಬೇಕಾಗಿದ್ದ ಮೂವತ್ತು ವರಹಗಳ ತೆರಿಗೆಯ ವಿನಾಯಿತಿ ದೊರಕಲು ಸಹಾಯವಾಯಿತು. ಆಗ ಕ್ರಿ.ಶ. 1550 ರಲ್ಲಿ ಅವನು ಶ್ರೀರಂಗಪಟ್ಟಣದಲ್ಲಿದ್ದನು.[17]

ಕೆಲವು ತೀರ್ಮಾನದ ಅಂಶಗಳನ್ನು ಹೀಗೆ ಗಮನಿಸಬಹುದು ಮೊದಲನೆಯದಾಗಿ ಈ ನಗರ ಕೇಂದ್ರವು ಹೊಯ್ಸಳ ಚಕ್ರವರ್ತಿಗಳು ಅನುಸರಿಸುತ್ತಿದ್ದ ಸಾಮಾಜಿಕ ನೀತಿಯ ಫಲವಾಗಿತ್ತು. ಜೈನನಾಗಿದ್ದ ಚಕ್ರವರ್ತಿ ಶೈವನಾಗಿದ್ದ ಅವನ ಮಂತ್ರಿ ಇಬ್ಬರು ಸೇರಿ ಸೋಮನಾಥಪುರದಲ್ಲಿ ಶೈ ವೈಷ್ಣವ ಸ್ಥಳಗಳನ್ನು ನಿರ್ಮಿಸಿದುದು ಅವರ ಜಾತ್ಯಾತೀತ ದೃಷ್ಟಿಯನ್ನು ತೋರಿಸುತ್ತಿತ್ತು. ಅದೇ ರಾಜ್ಯದ ಆಡಳಿತೀಯ ಸ್ಥಿರತೆಗೆ ಕಾರಣವಾಗಿತ್ತು.

ಎರಡನೆಯದಾಗಿ ಭಕ್ತಿಗಿಂತ ಮಿಗಿಲಾಗಿ ಇಡೀ ಪ್ರಕ್ರಿಯೆಯು ಹೇಗೆ ಹೊಯ್ಸಳ ಅರಸರು ಗಂಗವಾಡಿ ಪ್ರದೇಶದಲ್ಲಿ ಬ್ರಾಹ್ಮಣ ವರ್ಗವನ್ನು ಸಮಾಧಾನ ಪಡಿಸಲು ಯತ್ನಿಸಿದ ವಿಚಾರವನ್ನು ಸೂಚಿಸುತ್ತದೆ. ಈ ಕಾರ್ಯದಿಂದ ಹೊಯ್ಸಳ ರಾಜ್ಯಕ್ಕೆ ಬುದ್ಧಿ ಜೀವಿವರ್ಗದ ನಿಷ್ಟೆ ಖಚಿತ ವಾದಂತಾಯಿತು.

ಮೂರನೆಯದಾಗಿ ರಾಜ್ಯದ ವರಮಾನದ ಭಾಗವನ್ನು ದೇವಾಲಯ ಸಂಕೀರ್ಣದ ಕಡೆಗೆ ತಿರುಗಿಸಿದ್ದು ಒಂದು ದೃಷ್ಟಿಯನ್ನು ಬಂಡವಾಳ ಹೂಡಿಕೆಯೇ ಆಯಿತು. ಅದು ಉದ್ಯೋಗಗಳನ್ನು ನಿರ್ಮಿಸಿತು ಗಣನೀಯವಾಗಿ ಇತರ ಆರ್ಥಿಕ ಚಟುವಟಿಕೆಗಳು ಹೆಚ್ಚಿದುವು.

ಕೊನೆಯದಾಗಿ ಸೋಮನಾಥಪುರದಂತಹ ನಗರ ಕೇಂದ್ರಗಳು ಸಮಾಜಕ್ಕೆ ಸಾಮಾಜೀಕರಣ ಅತಿ ಮುಖ್ಯ ಅಂಶಗಳಾಗಿ ವರ್ತಿಸಿದುವು. ನಿವಾಸಿಗಳ ದೈನಂದಿನ ಅಗತ್ಯಗಳನ್ನು ಪೂರೈಸಿದುವು.

## ೯.೫ ಸೋಮನಾಥಪುರದ ಕಲೆ ಮತ್ತು ವಾಸ್ತುಶಿಲ್ಪ

ಮಧ್ಯಯುಗದ ದಕ್ಷಿಣ ಭಾರತದ ರಾಜ್ಯಾಡಳಿತ ಕ್ರಮದಲ್ಲಿ ದೇವಸ್ಥಾನದ ಆಡಳಿತ ಸ್ಥಳೀಯ ಸರ್ಕಾರದ ಒಂದು ಮುಖ್ಯ ಅಂಗವಾಗಿತ್ತು. ದೇವಸ್ಥಾನವು ಸ್ಥಳೀಯ ಪ್ರದೇಶದಲ್ಲಿ ಮತೀಯ ಜೀವನದ ಒಂದು ಮುಖ್ಯ ಕೇಂದ್ರವಾಗಿದ್ದುದಲ್ಲದೆ ಅದು ಸಾಮಾಜಿಕ ಸಂಸ್ಥೆಯು ಆಗಿದ್ದಿತು. ಅದು ಪಟ್ಟಣದ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಚಟುವಟಿಕೆ ಗಳಲ್ಲಿ ಮುಖ್ಯ ಪಾತ್ರ ವಹಿಸುತ್ತಿದ್ದಿತು. ಪ್ರಸ್ತುತ ಸೋಮನಾಥಪುರದ ಬೆಳವಣಿಗೆಯಲ್ಲಿ ದೇವಾಲಯಗಳು ವಹಿಸಿದ್ದ ಪಾತ್ರವನ್ನು ತಿಳಿಯಲು ದೇವಾಲಯದ ಆಡಳಿತವನ್ನು ಅಧ್ಯಯನ ಮಾಡಬಹುದು.

### ಕೇಶವ ದೇವಾಲಯ

ಹೊಯ್ಸಳ ದೇವಾಲಯಗಳ ಇನ್ನೊಂದು ಉತ್ತಮ ಮಾದರಿಯನ್ನು ಸೋಮನಾಥಪುರದ ಕೇಶವ ದೇವಾಲಯದಲ್ಲಿ ಕಾಣುತ್ತೇವೆ. ಹೊಯ್ಸಳ ರಾಜನಾದ ಮೂರನೇ ನರಸಿಂಹನ ಮಂತ್ರಿ ಮತ್ತು ದಂಡನಾಯಕನಾದ ಸೋಮನಾಥನೆಂಬುವನು ಕ್ರಿ.ಶ. 1268 ರಲ್ಲಿ ಸೋಮನಾಥಪುರವನ್ನು ಅಗ್ರಹಾರವನ್ನಾಗಿ ಕಟ್ಟಿಸಿದನು. ಈ ದೇವಾಲಯ ಆ ಅಗ್ರಹಾರಕ್ಕೆ ಸೇರಿದ್ದ ಹಾಗೆ ಕಟ್ಟಿದುದು ಇದು ಮೂರು ಗರ್ಭಗೃಹಗಳನ್ನುಳ್ಳ ತ್ರಿಕೂಟಾಚಲವಾಗಿದೆ. ಇದು 215 ಅಡಿ ಉದ್ದ 117 ಅಡಿ ಅಗಲ ಇರುವ ಅಂಗಳದ ಮಧ್ಯಭಾಗದಲ್ಲಿ ನಿರ್ಮಾಣವಾಗಿದೆ.[18] ಅಂಗಳದ ಒಳಭಾಗದಲ್ಲಿ ಸುತ್ತಲು ಪ್ರಾಕಾರದ ಗೋಡೆಗೆ ಸೇರಿದ ಹಾಗೆ ಅರವತ್ತನಾಲ್ಕು ಅಂಕಣಗಳನ್ನುಳ್ಳ ಕೈಸಾಲೆಯ ಮಂಟಪಗಳಿವೆ.

ತ್ರಿಕೂಟಾಚಲವಾದ ಈ ದೇವಾಲಯ ಚಿಕ್ಕದಾಗಿದ್ದರೂ ಕಲಾದೃಷ್ಟಿಯಿಂದ ಜಗತ್ ಪ್ರಸಿದ್ಧವಾಗಿದೆ. ದೇವಾಲಯದ ಜಗತಿ ಮೂರು ಅಡಿ ಎತ್ತರವಿದ್ದು ಹದಿನಾರು ಕೋನಗಳ ನಕ್ಷತ್ರಾಕಾರವಾಗಿದೆ. ಪೂರ್ವದಿಂದ ಜಗತಿಯ ಮೇಲಕ್ಕೆ ಮೆಟ್ಟಿಲು ಇದೆ. ಈ ಮೆಟ್ಟಿಲು ಪಕ್ಕಗಳಲ್ಲಿ ಎರಡು ಸಣ್ಣಗುಡಿಗಳಿದ್ದವು. ಜಗತಿಯ ನಕ್ಷತ್ರಾಕಾರದ ಒಂದೊಂದು ಕೋನದಲ್ಲೂ ಕಲ್ಲಿನ ಪೀಠವಿದೆ. ಇವುಗಳ ಮೇಲೆ ಕಲ್ಲಿನ ಆನೆ ಮತ್ತು ನಾಗವಿಗ್ರಹಗಳು ಮೊದಲು ಇದ್ದವು ಬಿಟ್ಟು 3 ಗರ್ಭಗುಡಿಗಳ ಸುತ್ತಲು ಹದಿನೈದು ಆನೆಗಳು ಹದಿನಾಲ್ಕು ದೊಡ್ಡ ನಾಗವಿಗ್ರಹಗಳು, ಐವತ್ತೆಂಟು ಸಣ್ಣ ವಿಗ್ರಹಗಳು ಇದ್ದವು.[19]

ದೇವಾಲಯದ ಗೋಡೆಯನ್ನು ಪೀಠಿಕೆ, ಮಧ್ಯಭಾಗ ಮತ್ತು ಮೇಲ್ಭಾಗವೆಂದು ವಿಂಗಡಿಸಬಹುದು. ಪೀಠಿಕೆಯ ಕೆಳಪಟ್ಟಿಯಲ್ಲಿ ಆನೆಯ ಸಾಲು ಇದೆ. ಈ ಪಟ್ಟಿಕೆಗಳು ಆರು ಅಥವಾ ಏಳು ಅಂಗುಲ ಮಾತ್ರ ಅಗಲವಾಗಿರುವುದರಿಂದ ವಿಗ್ರಹಗಳು ಚಿಕ್ಕದಾಗಿವೆ. ಆನೆಗಳಲ್ಲಿ ವೈವಿಧ್ಯತೆಯನ್ನು ತೋರಿಸಿದೆ. ಎರಡನೇ ಪಟ್ಟಿಯಲ್ಲಿ ಅಶ್ವಾರೋಹಕರು ಚಡ್ಡಿ ಮೊಣಕಾಲುವರೆಗೂ ಪಾದರಕ್ಷೆ ಧರಿಸಿ ಭರ್ಜಿ ಕತ್ತಿ ಗುರಾಣಿಗಳನ್ನು ಹಿಡಿದಿರುವರು. ಮಧ್ಯೆ ಮಧ್ಯೆ ಒಂದು ಅಥವಾ ಎರಡು ರಣಭೇರಿಗಳನ್ನು ಯೋಧರನ್ನು ಬೆನ್ನ ಮೇಲೆ ಧರಿಸಿರುವ ಒಂಟೆಗಳಿವೆ.

ಅಲ್ಲಲ್ಲಿ ಇಬ್ಬರು ಯೋಧರು ಅಶ್ವಗಳ ಮೇಲೆ ಕುಳಿತು ಹೊಡೆದಾಡುತ್ತಿರುವರು, ಈ ಕುದುರೆಗಳ ಬಾಲವನ್ನು ಕತ್ತರಿಸಿದಂತೆ ಕಂಡುಬರುತ್ತದೆ. ಕುದುರೆಗಳ ಕಡಿಲಾಣಜೀನು ಸ್ಪಷ್ಟವಾಗಿ ಕಂಡುಬರುತ್ತದೆ. ಇದರ ಮೇಲೆ ಲತಾಪಟ್ಟಿಕೆಯಲ್ಲಿ ಸಿಂಹಮುಖ, ನವಿಲು ಇತ್ಯಾದಿಗಳಿವೆ. ಮುಂದಿನ ಪಟ್ಟಿಕೆಗಳಲ್ಲಿ ಪೌರಾಣಿಕ ಕಥೆಗಳು ಏಳು ಅಂಗುಲ ಅಗಲದಲ್ಲಿ ಚಿತ್ರಿತವಾಗಿದೆ.[20]

ಮೂರು ಗರ್ಭಗುಡಿಗಳ ಹೊರಗೋಡೆಗಳ ಪಟ್ಟಿಕೆಗಳ ಮೇಲೆ ಎರಡು ಅಡಿ ಎತ್ತರದ ದೊಡ್ಡ ವಿಗ್ರಹಗಳು ಪೀಠ ಮತ್ತು ತೋರಣಗಳ ಮಧ್ಯೆ ಇವೆ. ಇವು ಗರ್ಭಗುಡಿಯ ಸುತ್ತಲು ಹೊರಭಾಗದಲ್ಲಿ ಸುಂದರವಾದ ನೂರತೊಂಭತ್ತನಾಲ್ಕು ದೊಡ್ಡ ಶಿಲ್ಪಗಳಿವೆ. ಇವುಗಳಲ್ಲಿ ನರಸಿಂಹ, ವೇಣುಗೋಪಾಲ, ವರಾಹ, ಶಿವ, ಇಂದ್ರ, ಸೂರ್ಯ, ಮಹಿಷಾಸುರಮರ್ಧಿನಿ, ಸರಸ್ವತಿ ಮುಖ್ಯವಾದವು ಈ ವಿಗ್ರಹಗಳ ಪೀಠದ ಮೇಲೆ ಇವುಗಳನ್ನು ಕೆತ್ತಿದ ಮಲ್ಲಿತಮ್ಮ, ಚಾಡಯ್ಯ, ಬಾಲಯ್ಯ, ಮಸಣತಮ್ಮ, ಲೋಹಿತ ಮುಂತಾದ ರೂವಾರಿಗಳ ಹೆಸರುಗಳಿವೆ. ವಿಗ್ರಹಗಳ ಮೇಲಿನ ತೋರಣಗಳಲ್ಲಿ ಲತಾ ಫಲಪುಷ್ಪ ಕೀರ್ತಿಮುಖ ಬಲು ಸೂಕ್ಷ್ಮವಾಗಿ ಶಿಲ್ಪಿತವಾಗಿವೆ. ಈ ವಿಗ್ರಹಗಳ ಮೇಲೆ ಸಣ್ಣ ಪ್ರಮಾಣದ ಶಿಖರಗಳು ಕೆತ್ತಲ್ಪಟ್ಟಿವೆ.[21]

ಈ ದೇವಾಲಯದ ಮುಖ್ಯ ಆಕರ್ಷಣೆಯೆಂದರೆ ಮೂರು ಶಿಖರಗಳು ಹದಿನಾರು ಕೋನಗಳ ನಕ್ಷತ್ರಾಕಾರದ ವಿನ್ಯಾಸದ ಮೇಲೆ ರಚಿತವಾಗಿರುವ ಶಿಖರಗಳು ಮಧ್ಯದಲ್ಲಿ ಬಂದು ಎರಡು ಪಾರ್ಶ್ವಗಳಲ್ಲಿ ಒಂದೊಂದರಂತೆ ಇವೆ. ಇದರಿಂದ ಈ ದೇವಾಲಯ ಸುಂದರವಾಗಿ ಕಾಣುತ್ತದೆ. ಇವು ಜಗತಿಯಿಂದ ಮೂವತ್ತೆರಡು ಅಡಿ ಎತ್ತರದಲ್ಲಿವೆ. ಆಕಾರದಲ್ಲಿ ಗರ್ಭಗುಡಿಯ ಗೋಡೆಯ ಮೇಲೆ ಗೋಡೆಯ ಶೈಲಿಯನ್ನೇ ಅನುಸರಿಸಿ ನಕ್ಷತ್ರಕಾರವಾಗಿ ಮೇಲಕ್ಕೆ ಹೋಗುತ್ತ ಸಣ್ಣದಾಗುತ್ತ

ಹೋಗುತ್ತವೆ. ಇವು ಸುಕನಾಸಿಯ ಮೇಲ್ಭಾಗದಲ್ಲಿ ಸ್ವಲ್ಪ ಮುಂದಕ್ಕೆ ಚಾಚಿಕೊಂಡಿದೆ.[22] ಶಿಖರದ ತುದಿಯಲ್ಲಿ ಭೋಗುಣಿಯಾಕಾರದ ಮೊಗುಚಿ ಹಾಕಿದ ಪದ್ಮವಿದೆ. ಒಟ್ಟಿನಲ್ಲಿ ಹೇಳುವುದಾದರೆ ಈ ಮೂರು ಶಿಖರಗಳ ಹೊಂದಾಣಿಕೆ ಇಷ್ಟು ಮಟ್ಟಿಗೆ ಬೇರೆಯಾದ ಹೊಯ್ಸಳ ದೇವಾಲಯದಲ್ಲೂ ಕಂಡು ಬರುವುದಿಲ್ಲ.

ಮಹಾದ್ವರದ ಮೇಲೆ ಗೋಪುರವಿರಲಿಲ್ಲ. ಇದರ ಮುಂದಿನ ಮಂಟಪದಲ್ಲಿ ಮೊದಲು ಎರಡು ಕಲ್ಲಿನ ಆನೆಗಳಿದ್ದವು. ಈಗಿರುವ ಆನೆಗಳನ್ನು ಜಗತಿಯಿಂದ ತಂದು ಇಟ್ಟಂತೆ ಕಂಡುಬರುತ್ತದೆ. ಮಹಾದ್ವಾರದ ಜಗಲಿಯ ಹತ್ತಿರ ದಕ್ಷಿಣದಲ್ಲಿ ಹನ್ನೊಂದು ಅಡಿ ಉದ್ದ ನಾಲ್ಕಡಿ ಅಗಲವಿರುವ ಶಾಸನದ ಕಲ್ಲಿದೆ. ಇದರ ಮೇಲ್ಭಾಗದಲ್ಲಿ ಜನಾರ್ಧನ ಕೇಶವ ವೇಣುಗೋಪಾಲ ವಿಗ್ರಹಗಳು ಗೋವು, ಚಂದ್ರ, ಗರುಡ, ಸೂರ್ಯ ಇವೆ. ಮಹಾದ್ವಾರದ ಈಶಾನ್ಯದಲ್ಲಿ ಸುಮಾರು ಮೂವತ್ತು ಅಡಿ ಎತ್ತರದ ದೀಪಸ್ತಂಭ ಇದೆ. ಇದು ತಳಭಾಗದಲ್ಲಿ ಚಚ್ಚೌಕವಾಗಿದ್ದು ಅನಂತರ ಅಷ್ಟ ಕೋನವಾಗಿ ಹದಿನಾರು ಮೂಲೆಗಳನ್ನು ಹೊಂದಿದೆ. ಮೇಲ್ಭಾಗದಲ್ಲಿ ಹದಿನಾರು ಅರಗಳುಳ್ಳ ಚಕ್ರ ಅದರ ಮೇಲೆ ಚಚ್ಚೌಕವಾದ ಪೀಠ, ಕಮಲ ಇದ್ದು ಬಹುಶಃ ಹಬ್ಬಗಳಲ್ಲಿ ದೀಪಗಳನ್ನು ಇಡುತ್ತಿದ್ದರು.

ಈ ದೇವಾಲಯ ತ್ರಿಕೂಟಾ ಚಲದ ಮಾದರಿಯ ಚಿಕ್ಕ ಹೊಯ್ಸಳ ದೇವಾಲಯಗಳಲ್ಲಿ ಅತ್ಯುತ್ತಮವಾದುದೆಂದು ಹೇಳಬಹುದು. ಇದರ ಎತ್ತರ ಮೂವತ್ತೆರಡು ಅಡಿಗಳಷ್ಟು ಮಾತ್ರ ಈ ಎತ್ತರಕ್ಕೆ ಮೂರು ಗೋಪುರಗಳಿಂದ ಕೂಡಿದ ಅದರ ಮುಖ ವಿನ್ಯಾಸ ಬಹಳ ಆಕರ್ಷಕವಾಗಿದೆ. ಸುತ್ತಲು ಮರಗಿಡಗಳಿಲ್ಲದಂತೆ ಮೂಡಿರುವ ಒಳಾಂಗಣದಲ್ಲಿ ಇದನ್ನು ನಿರ್ಮಿಸಿ ಇದರ ಸೌಂದರ್ಯ ಎದ್ದು ಕಾಣುವಂತೆ ಶಿಲ್ಪಿಗಳು ತಮ್ಮ ಕುಶಲತೆಯನ್ನು ವ್ಯಕ್ತಪಡಿಸಿದ್ದಾರೆ.

**ಲಕ್ಷ್ಮಿ ನರಸಿಂಹ ದೇವಾಲಯ**

ಕೇಶವ ದೇವಾಲಯದಿಂದ ನೈರುತ್ಯಕ್ಕೆ ಸುಮಾರು ಮೂರು ಫರ್ಲಾಂಗ್‌ಗಳಷ್ಟು ಅಂತರದಲ್ಲಿ ನದಿಯ ದಡದ ಹತ್ತಿರ ಸೋಮನಾಥನಿಂದ ನಿರ್ಮಾಣವಾದ ಲಕ್ಷ್ಮಿ ನರಸಿಂಹ ದೇವಾಲಯವಿದೆ. ಇದೊಂದು ಮಧ್ಯಮ ಗಾತ್ರದ ಕಟ್ಟಡವಾಗಿದ್ದು ಗರ್ಭಗೃಹ, ಸುಕನಾಸಿ, ಒಂಭತ್ತು ಅಂಕಣದ ನವರಂಗ ಜಗತಿ ಇರುವ ಮಂಟಪಗಳಿವೆ. ದೇವಾಲಯದ ಕಂಬಗಳು ಎಲ್ಲವು ದುಂಡಾಕಾರದಿಂದ

ಕೂಡಿವೆ. ಆದರೆ ಇಲ್ಲಿ ಹೆಚ್ಚು ಕೆತ್ತನೆ ಕೆಲಸ ಕಂಡುಬರುವುದಿಲ್ಲ.[23] ಆದರೆ ದ್ವಾರಗಳನ್ನು ಯಾವುದೇ ರೀತಿಯ ಶಿಲ್ಪಗಳು ಆವರಿಸಿಲ್ಲ ಇದರ ಮೂಲವಿಗ್ರಹ ಈಗಿಲ್ಲ. ಆದರೆ ದೇವಾಲಯದ ಮುಂಭಾಗದಲ್ಲೇ ಒಂದು ಸಣ್ಣ ಪ್ರತಿಮೆ ದೇವಾಲಯಕ್ಕೆ ಸೇರಿದ್ದಾಗಿದೆ ಎಂದು ತೋರುತ್ತದೆ. ನವರಂಗದ ಒಳಮಾಳಿಗೆಗಳಲ್ಲಿ ಗುಮ್ಮಟಕಾರವಾಗಿದೆ. ಇದು ಭುವನೇಶ್ವೈಲಿಗಳು ದಿಕ್ಪಾಲಕ, ಯಕ್ಷ ಇತ್ಯಾದಿ ವಿಗ್ರಗಳನ್ನು ಹೊಂದಿದೆ.

**ಪಂಚಲಿಂಗೇಶ್ವರ ದೇವಾಲಯ**

ಕೇಶವ ದೇವಾಲಯಕ್ಕೆ ಈಶಾನ್ಯದಲ್ಲಿ ಸುಮಾರು ಇನ್ನೂರೈವತ್ತು ಮೀಟರ್ ಅಂತರದಲ್ಲಿರುವ ಪಂಚಲಿಂಗೇಶ್ವರ ದೇವಾಲಯ ಐದು ಗರ್ಭಗೃಹಗಳುಳ್ಳ ಪಂಚಕೂಟಚಲವಾಗಿದೆ. ಇವು ಒಂದು ಸಾಲಿನಲ್ಲಿದ್ದು ಅವುಗಳಲ್ಲಿನ ಲಿಂಗಗಳಿಗೆ ಬಿಜ್ಜಳೇಶ್ವರ, ಹೆಮ್ಮೇಶ್ವರ ಅಥವಾ ಪರ್ಗಡೇಶ್ವರ, ರೇವಲೇಶ್ವರ, ಬಯಿರಲೇಶ್ವರ ಮತ್ತು ಸೋಮನಾಥೇಶ್ವರ ಎಂಬ ಹೆಸರಿದೆ. ಈ ದೇವಾಲಯಗಳು ಕಗ್ಗಲಿನಲ್ಲಿ ನಿರ್ಮಾಣವಾಗಿದೆ. ಒಂದೊಂದರಲ್ಲಿಯು ಒಂದು ಗರ್ಭಗೃಹ ಒಂದು ಸುಕನಾಸಿ ಮುಂದೆ ಒಂಭತ್ತು ಅಂಕಣಗಳ ತೆರೆದ ಮಂಟಪಗಳಿವೆ. ಸುಕನಾಸಿಗಳ ಮುಂಭಾಗದ ಒಂದು ಸಾಲು ಅಂಕಣಗಳು ಮಾತ್ರ ಒಂದಕ್ಕೊಂದು ಜೋಡಿಸಲ್ಪಟ್ಟು ಈ ಐದು ದೇವಾಲಯಗಳನ್ನು ಒಂದಾಗಿ ಸೇರಿಸಿರುವ ನೀಳವಾದ ಮೊಗಸಾಲೆಯಾಗಿದೆ. ಉಳಿದಂತೆ ದೇವಾಲಯಗಳು ಬೇರೆ ಬೇರೆಯಾಗಿವೆ. ಈ ದೇವಾಲಯಗಳಿಗೆ ಜಗತಿಯಿಲ್ಲ. ಚೌಕ ವಿನ್ಯಾಸದಲ್ಲಿರುವ ಗರ್ಭಗೃಹಗಳ ಹೊರಗೋಡೆಗಳ ಬುಡದಲ್ಲಿ ಮೂರು ಸರಳವಾದ ಕಾರ್ನೀಸುಗಳು ಗೋಡೆಗಳ ಮೇಲೆ ಅಲ್ಲಲ್ಲಿ ಅರೆಗಂಬಗಳು, ಅರೆಗಂಬದ ನಡುವೆ ದೊಡ್ಡದಾಗಿ ಬಿಡಿಸಿರುವ ಹೂಗಳು, ಗೋಡೆಯ ನಡುವೆ ಅಡ್ಡವಾಗಿ ಮತ್ತೊಂದು ಕಾರ್ನೀಸಿನ ಪಟ್ಟಿಕೆಯು ಇದ್ದು ಈ ಪಟ್ಟಿಕೆಯಿಂದ ಮೇಲೆದ್ದಿರುವ ಅರೆಗಂಬಗಳು, ಗಂಟೆಯ ಆಕೃತಿಯನ್ನು ತಾಳಿ ಮೇಲೆ ಚೌಕ ಬೋದಿಗೆಯನ್ನು ಹೊಂದಿದೆ. ಲೊವೆ ಕಿರಿದಾಗಿದ್ದು ಅದರ ಮೇಲೆ ಅಲ್ಲಲ್ಲಿ ದಂತಕೃತಿಗಳಿವೆ. ಗರ್ಭಗೃಹಗಳ ಮೇಲೆ ಅಂತಸ್ತುಗಳಾಗಿ ಮೇಲೆದ್ದಿರುವ ಚೌಕ ವಿನ್ಯಾಸದ ಗೋಪುಗಳಿವೆ. ಲೋವೆಯ ಮುಂಭಾಗದಲ್ಲಿ ಗೋಪುರದ ಮುಂಚಾಚಿದ ಭಾಗಗಳಲ್ಲಿ ಅಚ್ಚುಪಟ್ಟಿಗಳಿವೆ. ಆದರೆ ಈ ದೇವಾಲಯದ ಯಾವ ಭಾಗದಲ್ಲಿಯೇ ಆಗಲಿ ಮೂರ್ತಿಶಿಲ್ಪಗಳಾಗಲಿ, ಬಳ್ಳಿ ಸುರಳಿಯ ಕೃತಿಗಳಾಗಲಿ ಇಲ್ಲ. ಎಲ್ಲವು ನೇರ ಸರಳ ಮುಂದಣ ತೆರೆದ ಮಂಟಪಗಳು ಒಂದೇ ರೀತಿಯ ಉರುಳೆಯಾಕಾರದ ದಪ್ಪ ಕಂಬಗಳಿಂದ ಕೂಡಿವೆ.[24] ಒಂದೊಂದು ಕಂಬವು ಚೌಕನಾದ ಬುಡ ಅದರ ಮೇಲೆ ಅಷ್ಟಮುಖ ಆನಂತರ

ಹದಿನಾರು ಮುಖಗಳ ಪಟ್ಟಿಕೆಗಳು ಇದ್ದು ಉಳಿದಂತೆ ಉರುಳೆಯಾಕಾರದ ದಿಂಡನ್ನು ಹೊಂದಿದೆ. ಪ್ರತಿ ಅಂಕಣದ ಚಾವಣಿಯು ಎರಡು ವಲಸೆ ಮೂಲೆಗಲ್ಲುಗಳನ್ನು ಸೇರಿಸಿ ಮೇಲೆ ಅರಳಿದ ಕಮಲದಾ ಕೃತಿಯನ್ನು ಕಂಡರಿಸಿರುವ ಮುಚ್ಚೆಕೆಗಳಿಂದ ಕೂಡಿದೆ. ಸುಕನಾಸಿ ಮತ್ತು ಗರ್ಭಗೃಹಗಳ ಚಾವಣಿಯು ಹೀಗೆಯೇ ಅವುಗಳ ಬಾಗಿಲುವಾಡಗಳು ಬಹುಮಟ್ಟಿಗೆ ಸರಳ ಎರಡು ಕಡೆಯ ದ್ವಾರ ಬಂಧಗಳ ಮೇಲೆ ಸರಳವಾದ ಅರೆಗಂಬಗಳು ಮೇಲೆ ಕಾರ್ನೀಸು ಮತ್ತು ಅರೆ ಗೋಪುರಾಕೃತಿ ಗಳಿಗಾಗಿ ಅಲ್ಲಲ್ಲಿ ಅಚ್ಚಾಪಟ್ಟಿಗಳಿವೆ. ಗರ್ಭಗುಡಿಗಳಲ್ಲಿ ಈಗ ಲಿಂಗಗಳಿಲ್ಲ, ಆದರೆ ದುಂಡಾಗಿ ಸುಂದರವಾಗಿ ಕಂಡಿರಿಸಿದ ಪ್ರಾಣಿಪೀಠಗಳು ಬುಡ ಮೇಲಾಗಿ ಬಿದ್ದಿವೆ. ಸುಕನಾಸಿಗಳ ಬಾಗಿಲಿನ ಎಡಭಾಗಕ್ಕೆ ಗೋಡೆಗೆ ಸೇರಿದಂತೆ ಒಂದೊಂದು ವಿಗ್ರಹಗಳ ಪೀಠಗಳು ಇವೆ. ಇವು ಬಹುಶಃ ಶಿವ ಪಂಚಾಯತನ ಮೂರ್ತಿಗಳನ್ನು ಹೊಂದಿದ್ದಿರಬೇಕು. ಆದರೆ ಈಗ ಯಾವ ಮೂರ್ತಿಯು ಉಳಿದು ಬಂದಿಲ್ಲ ಸೋಮ ದಂಡನಾಯಕ ಈ ದೇವಾಲಯಗಳನ್ನು ಕಟ್ಟಿಸುವ ವಿವರಗಳನ್ನು ತಿಳಿಸುವ ದೊಡ್ಡ ಶಾಸನ ದೇವಾಲಯದ ದಕ್ಷಿಣಕ್ಕೆ ನಿಂತಿದೆ. ಪಂಚಲಿಂಗ ಮತ್ತು ಕೇಶವ ದೇವಾಲಯದ ಶಿಲಾಶಾಸನವು ಹೊಯ್ಸಳರ ಶಿಲಾಶಾಸನಗಳಲ್ಲಿ ಅತಿ ಸುಂದರವಾದ ಮಾದರಿಗಳಾಗಿವೆ. ಹೊಯ್ಸಳ ರುವಾರಿಗಳು ವೈವಿಧ್ಯಮಯವಾದ ಅಲಂಕಾರ ತಿಶಯಗಳಿಂದ ತುಂಬಿ ತುಳುಕುವಂತೆ ಅತಿಸೂಕ್ಷ್ಮ ವಾಗಿ ನವುರಾಗಿ ಅತಿಶಯೋಕ್ತಿಯೇನೋ ಎನ್ನುವಷ್ಟು ಮಟ್ಟಿಗೆ ಕಂಡರಿಸಿ ದೇವಾಲಯಗಳನ್ನು ನಿರ್ಮಿಸುವಲ್ಲಿ ನಿಷ್ಣಾತರಾಗಿದ್ದುದನ್ನು ಕೇಶವ ದೇವಾಲಯ ಎತ್ತಿ ತೋರಿಸಿದರೆ ಅತ್ಯಂತ ಸರಳವಾಗಿಯೂ ಆದರೂ ಶ್ಲಾಘ್ಯವಾಗಿಯೂ ಇರುವಂತೆ ದೇವಾಲಯಗಳನ್ನು ನಿರ್ಮಿಸಬಲ್ಲರಾಗಿದ್ದ ರೆಂಬುದಕ್ಕೆ ಈ ಪಂಚಲಿಂಗ ದೇವಾಲಯ ನಿರ್ದಶನವಾಗಿದೆ. ಹೊಯ್ಸಳ ದೇವಾಲಯಗಳಲ್ಲೇ ಇದೊಂದು ಅಪೂರ್ವವಾದ ಮಾದರಿಯಾಗಿದೆ. ಗೋವಿಂದನ ಹಳ್ಳಿಯ ಪಂಚಲಿಂಗ ದೇವಾಲಯವು ಇದರಂತೆಯೇ ಒಂದೇ ಸಾಲಿನಲ್ಲೇ ಐದು ದೇವಾಲಯಗಳಿದ್ದವು ಇದರಲ್ಲಿನ ಸರಳತೆ ಗಾಂಭೀರ್ಯ ಸಮಪ್ರಮಾಣ ಅದರಲ್ಲಿಲ್ಲ.[25]

**ಮಂಟಪ**

ಕೇಸವ ದೇವಾಲಯದ ಪೂರ್ವಕ್ಕೆ ಸುಮಾರು ಒಂದು ನೂರು ಗಜಗಳಷ್ಟು ದೂರದಲ್ಲಿ ಬಹುಶಃ ಉತ್ಸವ ಮಂಟಪವಾದ ಒಂದು ಸಣ್ಣ ಮಂಟಪವು ಕಂಡುಬರುತ್ತದೆ. ಇದು ನಾಲ್ಕು ಕಂಬಗಳನ್ನು ಹೊಂದಿದ್ದು ಅಷ್ಟು ಘನಾಕೃತಿಯ ಬಿಲ್ಲೆಗಳನ್ನು ಹೊಂದಿದೆ. ಇದು ಬಹುಶಃ ಹದಿನಾಲ್ಕನೇ ಶತಮಾನದಲ್ಲಿ ನಿರ್ಮಾಣವಾದುದ್ದಾಗಿದೆ.

### 9.6 ಸೋಮನಾಥಪುರದ ಅವನತಿ

ಉತ್ತರ ಭಾರತವನ್ನೇ ನಡುಗಿಸಿ ಅನೇಕ ಹಿಂದೂ ರಾಜಮನೆತನಗಳನ್ನು ಧೂಳೀಪಟ ಮಾಡಿದ ಮುಸ್ಲಿಮರ ವಕ್ರದೃಷ್ಟಿ ದಕ್ಷಿಣಕ್ಕೂ ಹರಿಯಿತು. ದೆಹಲಿ ಸುಲ್ತಾನನಾದ ಅಲ್ಲಾವುದ್ದೀನ್ ಖಿಲ್ಜಿಯ ದಂಡನಾಯಕನಾದ ಮಲ್ಲಿಕಾಫರ್ ಕ್ರಿ.ಶ. 1311 ರಲ್ಲಿ ಹೊಯ್ಸಳ ಸಾಮ್ರಾಜ್ಯದ ಮೇಲೆ ದಾಳಿ ಮಾಡಿ ಮೂರನೆಯ ಬಲ್ಲಾಳನನ್ನು ಸೋಲಿಸಿ ದ್ವಾರಸಮುದ್ರವನ್ನು ವಶಪಡಿಸಿಕೊಂಡನು. ನಂತರ ಕ್ರಿ.ಶ. 1327 ರಲ್ಲಿ ಮತ್ತೆ ದೆಹಲಿಯಿಂದ ದಾಳಿ ಪ್ರಾರಂಭಿಸಿ ದ್ವಾರಸಮುದ್ರದ ಮೇಲೆ ದಾಳಿ ಮಾಡಿದ್ದನಲ್ಲದೆ ಸೋಮನಾಥಪುರದ ಮೇಲೂ ದಾಳಿ ಮಾಡಿ ಅಲ್ಲಿನ ದೇವಾಲಯವನ್ನು ನಾಶ ಮಾಡಿದಲ್ಲದೆ ಕೆಲವನ್ನು ಅಪವಿತ್ರಗೊಳಿಸಿದನು. ಇವೆಲ್ಲ ಕೃತ್ಯಗಳಿಗೆ ಬಲಿಯಾದ ಕೇಶವ ದೇವಾಲಯ ಇಂದಿಗೂ ಮೂಕ ಸಾಕ್ಷಿಯಾಗಿ ನಿಂತಿದೆ.

ಸೋಮನಾಥಪುರದ ಅವನತಿಯ ಬಗ್ಗೆ ಇರುವ ದಂತಕಥೆಯೆಂದರೆ, ಹೊಯ್ಸಳ ಅರಸನಾದ ಮೂರನೆಯ ನರಸಿಂಹನ ಕಾಲದಲ್ಲಿ ಅಂದು ಸೋಮನಾಥಪುರದಲ್ಲಿ ಪ್ರಮುಖವಾಗಿ ಶೈವರು ಮತ್ತು ವೈಷ್ಣವರು ವಾಸಿಸುತ್ತಿದ್ದರು. ಇವರಿಬ್ಬರ ಮಧ್ಯೆ ಆಗಾಗ್ಗೆ ಅಂತಃಕಲಹಗಳು ಏರ್ಪಡುತ್ತಿದ್ದವು. ಇವರ ಮಧ್ಯೆ ಏರ್ಪಟ್ಟ ಕಲಹಗಳಿಂದ ಕೇಶವ ದೇವಾಲಯ ಮತ್ತು ಪಂಚಲಿಂಗೇಶ್ವರ ದೇವಾಲಯ ನಾಶವಾಗಿ ಅದರ ಜೊತೆಗೆ ಸೋಮನಾಥಪುರವು ಸಹ ನಾಶವಾಯಿತೆಂಬ ನಂಬಿಕೆ ಇದೆ.

ಈಗ ಸೋಮನಾಥಪುರದಲ್ಲಿ ಕೋಟೆ ಗೋಡೆಯ ಅವಶೇಷವನ್ನು ಬಿಟ್ಟರೆ ಮೂಲ ಅಗ್ರಹಾರದ ಯಾವ ಕುರುಹು ಉಳಿದಿಲ್ಲ. ಇಲ್ಲಿ ಕೇಶವ ದೇವಾಲಯವೊಂದನ್ನು ಬಿಟ್ಟರೆ ಉಳಿದ ದೇವಾಲಯಗಳು ಅವನತಿಯ ಹಾದಿಯಲ್ಲಿದೆ.

## ಅಧ್ಯಾಯ ಏಳರಿಂದ ಅಧ್ಯಾಯ ಒಂಭತ್ತರವರೆಗಿನ ಅಡಿಟಿಪ್ಪಣಿಗಳು

1) ಕನ್ನಡ ವಿಷಯ ವಿಶ್ವಕೋಶ 1979 ಪು.1531
2) ಸಂಗಮ ಸ್ಮರಣ ಸಂಚಿಕೆ 1998 ಪು.25
3) E C V BI 75
4) M A R 1919 p 33
5) E C IX Cn 37
6) E C K 1 73
7) E C IX An 64
8) ಎ.ಕ.6 (ಹೊಸ ಸರಣಿ) ಕೆ.ಆರ್. ಪೇಟೆ, 37 ಕ್ರಿ.ಶ. 1095-96
9) ಎ.ಕ. 4 ಕೆ.ಆರ್. ಪೇಟೆ 78 ಸು.ಕ್ರಿ.ಶ. 1130
10) ಹೊಯ್ಸಳ ಸಂಪದ-ಹೊಯ್ಸಳ ಸಾಮ್ರಾಜ್ಯ ಸಾಮಾಜಿಕ ಮತ್ತು ಆರ್ಥಿಕ ಚಿಂತನೆ ಪು.274
11) E C V BI 117, 1136. A.D
12) I A X IV P 15, 1182 A. D. K. I. 1, 25. 1186 A.D.
13) E C XI Cd 34 1123 A D\
14) ಎ.ಕ.5 (ಹೊಸ ಸರಣಿ) ತಿ.ನ. 88 ಕ್ರಿ.ಶ. 1276
15) ಅದೇ ತಿ.ನ. 91 ಕ್ರಿ.ಶ. 1550
16) ಅದೇ ತಿ.ನ. 99 ಕ್ರಿ.ಶ. 1550
17) ಅದೇ ತಿ.ನ. 100 ಕ್ರಿ.ಶ. 1551
18) ಡಾ.ಎಚ್. ತಿಪ್ಪೇರುದ್ರಸ್ವಾಮಿ – ಕರ್ನಾಟಕ ಸಂಸ್ಕೃತಿ ಸಮೀಕ್ಷೆ 1968 ಪು 593
19) ಶ್ರೀಕಂಠಶಾಸ್ತ್ರಿ ಎಸ್ – ಹೊಯ್ಸಳ ವಾಸ್ತುಶಿಲ್ 1965 ಪು. 52
20) ಶ್ರೀಕಂಠಶಾಸ್ತ್ರಿ ಎಸ್ – ಅದೇ 1965 ಪುಟ 53
21) ಸಂಗಮ ಸ್ಮರಣ ಸಂಚಿಕೆ 1968 ಪು.27
22) ಮುದ್ದಾಚಾರಿ ಬಿ. – ದಕ್ಷಿಣ ಭಾರತದ ಇತಿಹಾಸ 1975 ಪು. 338
23) ಶ್ರೀಕಂಠಶಾಸ್ತ್ರಿ ಎಸ್ – ಅದೇ 1965 ಪು.58
24) ಶ್ರೀಕಂಠಶಾಸ್ತ್ರ ಎಸ್ – ಅದೇ 1965 ಪು.59
25) ಕನ್ನಡ ವಿಷಯ ವಿಶ್ವಕೋಶ 1979 ಪು.1535

# ಅಧ್ಯಾಯ 10
# ಉಪಸಂಹಾರ

ಪ್ರಸ್ತುತ ನಗರ ಕೇಂದ್ರಗಳ ಅಧ್ಯಯನವು ಹೊಯ್ಸಳ ಸಾಮ್ರಾಜ್ಯದ ಸುಮಾರು ಕ್ರಿ.ಶ. ಹತ್ತರಿಂದ ಹದಿಮೂರನೇ ಶತಮಾನದಲ್ಲಿನ ವಿಶೇಷವಾಗಿ ಕರ್ನಾಟಕಕ್ಕೇ ಸಂಬಂಧಿಸಿದಂತೆ ನಗರೀಕರಣದ ಪ್ರಮುಖ ಅಂಶಗಳನ್ನು ಒಳಗೊಂಡಿದೆ. ಹಲವು ಮುಖಗಳಾದ ಪಟ್ಟಣಗಳ ಹುಟ್ಟು ಹಾಗೂ ಬೆಳವಣಿಗೆ ಹಾಗೂ ರಚನೆ ಮತ್ತು ಪಟ್ಟಣಗಳಲ್ಲಿನ ಆಡಳಿತ, ಆರ್ಥಿಕ ಹಾಗೂ ಸಾಮಾಜಿಕ ಜೀವನಗಳನ್ನು ಅಧ್ಯಯನ ಮಾಡಲಾಗಿದೆ. ಪಟ್ಟಣಗಳು ಹಳ್ಳಿಗಳಿಗಿಂತ ಭಿನ್ನವಾಗಿದ್ದವು ಹಾಗೂ ಹಳ್ಳಿಗಳಿಗೆ ಹೋಲಿಸಿದರೆ ಅಲ್ಲಿನ ಜೀವನ ಹೆಚ್ಚು ಸಂಕೀರ್ಣವು ಹಾಗೂ ವೈವಿಧ್ಯಮಯ ವಾಗಿತ್ತು ಎಂಬ ಅಂಶವನ್ನು ಮಹಾಪ್ರಬಂಧದಲ್ಲಿ ಎತ್ತಿ ಹಿಡಿಯಲಾಗಿದೆ.

ಪಟ್ಟಣಗಳ ಉದಯಕ್ಕೆ ಕಾರಣವಾಗುವ ಅಂಶಗಳ ಚರ್ಚೆಯೊಂದಿಗೆ ಸಂಶೋಧನೆ, ಪ್ರಾರಂಭಗೊಂಡಿದೆ. ಇದಕ್ಕೆ ಹೊಂದಿಕೊಂಡಂತೆ ನಗರ ಕೇಂದ್ರಗಳ ಬೆಳವಣಿಗೆ ಹಾಗೂ ವಿಸ್ತರಣೆಯು ಕಂಡುಬರುತ್ತದೆ. ಪಟ್ಟಣಗಳ ಬೆಳವಣಿಗೆಯನ್ನು ಚರ್ಚಿಸುವಾಗ ವಿವಿಧ ರೀತಿಯ ಪಟ್ಟಣಗಳನ್ನು ವರ್ಗೀಕರಿಸುವ ಹಾಗೂ ಅವುಗಳ ಸ್ವರೂಪವನ್ನು ನಿರ್ಧರಿಸುವ ಒಂದು ಪ್ರಯತ್ನವನ್ನು ಮಾಡಲಾಗಿದೆ. ಪಟ್ಟಣಗಳ ಉಗಮ ಹಾಗೂ ಬೆಳವಣಿಗೆಯಿಂದಾಗಿ ಪಟ್ಟಣಗಳಲ್ಲಿ ಒಂದು ರೀತಿಯ ವಾತಾವರಣವು ಸೃಷ್ಟಿಯಾಯಿತು. ಪಟ್ಟಣಗಳು ಭೌತಿಕ ಅಂಗಗಳಾಗಿ ಹೊರಹೊಮ್ಮಿದವು. ಇದರ ಜೊತೆಗೆ ಈ ಅಧ್ಯಯನವು ಪಟ್ಟಣಗಳಲ್ಲಿನ ಆಡಳಿತ ಹಾಗೂ ನಗರ ಆರ್ಥಿಕ ಜೀವನದ ಒಂದು ಪರಿಶೀಲನೆಯನ್ನು ಒಳಗೊಂಡಿದೆ.

ಪ್ರಸ್ತುತ ಸಂಶೋಧನೆಯಲ್ಲಿ ಅಳವಡಿಸಿಕೊಂಡಿರುವ ವಿಧಾನ ಹಾಗೂ ಆರಿಸಿಕೊಂಡಿರುವ ಮಾರ್ಗವು ಪರಿಮಾಣಾತ್ಮಕತೆಗಿಂತ ಹೆಚ್ಚು ಗುಣಾತ್ಮಕವಾಗಿದೆ. ಏಕೆಂದರೆ ಪರಿಮಾಣಾತ್ಮಕತೆಯು ವಸ್ತು ವಿಷಯ ಹಾಗೂ ಅಧ್ಯಯನದ ಕಾಲಕ್ಕೆ ಅಷ್ಟಾಗಿ ಸರಿ ಬರುವುದಿಲ್ಲ. ಆದರೆ ಗುಣಾತ್ಮಕ ಅಧ್ಯಯನವು ಹೆಚ್ಚು ಸೂಕ್ತವಾಗಿದೆ. ಪಟ್ಟಣಗಳನ್ನು ವಿಶೇಷವಾಗಿ ಅವುಗಳ ಬೆಳವಣಿಗೆಯನ್ನು ವಿಶ್ಲೇಷಿಸುವಾಗ ಅವುಗಳ ಹಂಚಿಕೆಯ ವಿಧಾನವನ್ನು ವಿವರಿಸುವಾಗ ಪಟ್ಟಣಗಳನ್ನು ವರ್ಗೀಕರಿಸುವಾಗ ಹಾಗೂ ಅವುಗಳ ಸ್ವರೂಪವನ್ನು ನಿರ್ಧರಿಸುವಾಗ ಅವುಗಳು ನಿರ್ವಹಿಸಿದ ಪಾತ್ರ ಹಾಗೂ ಕಾರ್ಯಗಳನ್ನು ಗಮನಕ್ಕೆ ತೆಗೆದುಕೊಳ್ಳಲಾಗಿದೆ. ಪರಿಮಾಣಾತ್ಮಕ ಮಾಹಿತಿಯ ಅನುಪಸ್ಥಿತಿ ಯಿಂದಾಗಿ ಗುಣಾತ್ಮಕ ವಿಶ್ಲೇಷಣೆಯನ್ನು ಮಾಡಲಾಗಿದೆ.

ಮೊದಲನೆಯದಾಗಿ ಪಟ್ಟಣಗಳ ಉದಯದ ಕೆಲವು ಅಂಶಗಳನ್ನು ಅಧ್ಯಯನ ಮಾಡಲಾಗಿದೆ. ನಗರ ಕೇಂದ್ರಗಳ ಉದಯಕ್ಕೆ ಕಾರಣವಾದ ವಿವಿಧ ಅಂಶಗಳ ಪರಿಶೀಲನೆಯನ್ನು ಮಾಡಲಾಗಿದೆ. ನಗರೀಕರಣದ ಪ್ರಕ್ರಿಯೆಯು ಹಲವಾರು ಅಂಶಗಳ ಪರಸ್ಪರ ಒಂದನ್ನೊಂದರ ಪರಿಣಾಮ ಎಂದು ತೋರಿಸಲಾಗಿದೆ. ವಿದ್ವಾಂಸರು ನಗರ ಕೇಂದ್ರಗಳ ಉದಯ ಹಾಗೂ ಬೆಳವಣಿಗೆಗೆ ರಾಜಕೀಯ, ಆರ್ಥಿಕ, ಇಲ್ಲವೇ ಸಾಮಾಜಿಕ ಅಂಶಗಳು ಕಾರಣವಾಗಿದ್ದವು ಎಂದು ಹೇಳಿದರೂ ಪ್ರಸ್ತುತ ಅಧ್ಯಯನವು ನಗರೀಕರಣದ ಪ್ರಕ್ರಿಯೆಯ ಹಲವಾರು ಅಂಶಗಳ ಫಲ ಎಂಬುದನ್ನು ಸ್ಪಷ್ಟಪಡಿಸಿದೆ. ಈ ಅಂಶಗಳು ಆವುಗಳ ಕಾರ್ಯ ಹಾಗೂ ಪರಿಣಾಮಗಳಲ್ಲಿ ಭಿನ್ನವಾಗಿದ್ದವು.

ನಗರೀಕರಣದ ಪ್ರಮುಖ ಅಂಶಗಳಲ್ಲಿ (ಮಿಗುತೆ ಮಾರಲು ಅವಕಾಶವಿರುವ ಹೆಚ್ಚುವರಿ ಉತ್ಪಾದನೆ) ಒಂದಾಗಿತ್ತು. ಪಟ್ಟಣಗಳ ಉದಯದಲ್ಲಿ ಇದು ಪ್ರಧಾನ ಕಾರಣವಾಗಿತ್ತು. ಹೊಯ್ಸಳರ ಕಾಲದಲ್ಲಿ ಮಿಗುತೆಯು ಹೆಚ್ಚಿನ ಪ್ರಮಾಣದಲ್ಲಿತ್ತು. ದೊರೆಯುತ್ತಿದ್ದ ಮಿಗುತೆಯನ್ನು ವಿವಿಧ ಮೂಲಗಳಿಂದ ಬಳಕೆ ಮಾಡಲಾಗುತ್ತಿತ್ತು. ಇದು ನಗರೀಕರಣಕ್ಕೆ ದಾರಿಯನ್ನುಂಟು ಮಾಡಿತು. ಕೃಷಿ ಪದಾರ್ಥಗಳಲ್ಲಿ ಮಿಗುತೆಯು ಸಂಭವಿಸಿತು. ಶಾಸನಗಳಲ್ಲಿ ಸಂತೆಗೆ ಆಹಾರ ಧಾನ್ಯಗಳು ಬರುತ್ತಿದ್ದುದರ ಉಲ್ಲೇಖವು ಇರುವುದರಿಂದ ರೈತನ ಸ್ವಂತ ಅಗತ್ಯವನ್ನು ಪೂರೈಸಿದ ನಂತರ ಉಳಿದ ಹೆಚ್ಚುವರಿ ಆಹಾರಧಾನ್ಯವು ಮಾರುಕಟ್ಟೆಗೆ ಬರುತ್ತಿದ್ದಿತು ಎಂದು ಹೇಳಬಹುದು. ಇದರಿಂದ ಅರಸರ ಭಂಡಾರಕ್ಕೆ ಅಧಿಕ ಆದಾಯ ಬರುತ್ತಿತ್ತು. ಹಾಗಾಗಿ ವಾಣಿಜ್ಯದ ಅಗತ್ಯ ಮತ್ತು ಹೆಚ್ಚುವರಿ ಇದ್ದುದು ಈ ಕಾರಣಗಳಿಂದ ಹೊಯ್ಸಳ ಯುಗದಲ್ಲಿ ಹಲವು ನಗರಕೇಂದ್ರಗಳು ಉದಯಿಸಲು ಅವಕಾಶವಾಯಿತು.

ಮಿಗುತೆಯ ಜೊತೆಗೆ ನಗರೀಕರಣದ ಪ್ರಕ್ರಿಯೆಗೆ ಇತರೆ ಅಂಶಗಳು ಸಹಾಯಕವಾದವು. ಉದಾಹರಣೆಗೆ ಒಂದು ಪ್ರದೇಶದ ಭೌಗೋಳಿಕ ವ್ಯವಸ್ಥೆ ನಗರೀಕರಣಕ್ಕೆ ಅನುಕೂಲಕಾರಿಯಾದ ಅಂಶವಾಗಿ ಪರಿಣಮಿಸಿತು. ದಕ್ಷಿಣ ಭಾರತದ ಪರ್ವತ ಗುಡ್ಡಗಳು ನೈಸರ್ಗಿಕ ಕೋಟೆಯನ್ನು ನಿರ್ಮಿಸಿದ್ದವು ಹಾಗೂ ಕೋಟೆ ಕೊತ್ತಲಗಳನ್ನು ನಿರ್ಮಿಸಲು ಹೆಚ್ಚು ಅವಕಾಶ ಕಲ್ಪಿಸಿಕೊಟ್ಟವು ಮುಂದೆ ಈ ಕೋಟೆಗಳೇ ಪಟ್ಟಣಗಳಾಗಿ ಬೆಳೆದವು. ದಕ್ಷಿಣ ಭಾರತದ ಪೂರ್ವ ಪಶ್ಚಿಮ ತೀರಗಳೆಂದು ಹೆಸರಾಗಿದ್ದ ತೀರ ಪ್ರದೇಶಗಳು ಅವುಗಳ ಹೊರಜಗತ್ತಿನೊಂದಿಗಿನ ಜಲಸಾರಿಗೆ

ಸಂಪರ್ಕದಿಂದಾಗಿ ವ್ಯಾಪಾರ ಮತ್ತು ವಾಣಿಜ್ಯವನ್ನು ಉಂಟು ಮಾಡಿದವು. ಇದರ ಫಲವಾಗಿ ಪಟ್ಟಣಗಳ ಬೆಳವಣಿಗೆಯಾಯಿತು. ಪಟ್ಟಣಗಳನ್ನು ನಿರ್ಮಿಸುವಾಗ ಆ ಸ್ಥಳದ ನಕಾಶೆಯು ಪರಿಗಣನಾತ್ಮಕವಾಗಿತ್ತು.

ನಗರೀಕರಣದ ಮತ್ತೊಂದು ಪ್ರಮುಖ ಅಂಶವೆಂದರೆ ಆರ್ಥಿಕ ಅಂಶವಾಗಿದೆ. ಪಟ್ಟಣಗಳ ಬೆಳವಣಿಗೆಯಲ್ಲಿ ವ್ಯಾಪಾರವು ಪ್ರಮುಖವಾದ ಅಂಶವಾಗಿತ್ತು. ವ್ಯಾಪಾರದಿಂದಾಗಿ ಮಾರುಕಟ್ಟೆಯು ಅಸ್ತಿತ್ವಕ್ಕೆ ಬಂದಿತು ಹಾಗೂ ಮಾರುಕಟ್ಟೆಯು ಹೆಚ್ಚು ಕಡಿಮೆ ಎಲ್ಲಾ ನಗರ ಕೇಂದ್ರಗಳಲ್ಲೂ ಕಂಡು ಬರುತ್ತಿತ್ತು. ಉತ್ತಮ ಸಾರಿಗೆ ಸಂಪರ್ಕದಿಂದಾಗಿ ನಗರೀಕರಣ ತೀವ್ರಗೊಂಡಿತು. ವ್ಯಾಪಾರ ಮಾರ್ಗಗಳಲ್ಲಿ ಹಲವಾರು ನಗರ ಕೇಂದ್ರಗಳು ತಲೆ ಎತ್ತಿದವು. ಉತ್ತಮವಾದ ಸಾರಿಗೆ ವ್ಯವಸ್ಥೆಯು ಪಟ್ಟಣಗಳ ಬೆಳವಣಿಗೆಗೆ ಸಹಕಾರಿಯಾಯಿತು. ಇದರ ಜೊತೆಗೆ ಸಾಮ್ರಾಜ್ಯದಲ್ಲಿ ಹಲವಾರು ವಿಧದ ಕೈಗಾರಿಕೆಗಳು ಅಸ್ತಿತ್ವಕ್ಕೆ ಬಂದು, ಆರ್ಥಿಕ ಅಂಶವಾಗಿ ನಗರೀಕರಣವನ್ನು ಪ್ರೇರೇಪಿಸಿದವು. ಆ ಕಾಲದ ಪ್ರಮುಖ ಅಂಶಗಳಲ್ಲಿ ಸಂತೆಗಳನ್ನು ಸ್ಥಾಪಿಸಿದ್ದು ಒಂದಾಗಿತ್ತು. ಇದರಿಂದಾಗಿ ಪಟ್ಟಣಗಳು ಬೆಳೆದವು ಸಂತೆಗಳನ್ನು ಪ್ರಾರಂಭಿಸಿದರಿಂದ ಹೊಸ ಪಟ್ಟಣಗಳು ಅಸ್ತಿತ್ವಕ್ಕೆ ಬಂದವು.

ಎರಡನೆಯದಾಗಿ ಪಟ್ಟಣಗಳ ಬೆಳವಣಿಗೆಗೆ ರಾಜಕೀಯ ಅಂಶಗಳು ಸಹಕಾರಿಯಾಗಿದ್ದವು ಮಿಗುತೆಯ ನಿರ್ವಹಣೆ ಹಾಗೂ ಅದರ ಸಮರ್ಥ ನಿಭಾಯಿಸುವಿಕೆಯು ರಾಜಕೀಯ ಅಂಶವಾಗಿತ್ತು. ಹೊಯ್ಸಳ ಅರಸರು ರಾಜಕೀಯ ಸ್ಥಿರತೆ ಹಾಗೂ ಸುವ್ಯವಸ್ಥೆಯನ್ನು ಸ್ಥಾಪಿಸಿ ಕೃಷಿ ಹಾಗೂ ಕೈಗಾರಿಕೆಯನ್ನು ಪ್ರೋತ್ಸಾಹಿಸುವ ಮೂಲಕ ಹಾಗೂ ವ್ಯಾಪಾರ ಮತ್ತು ವಾಣಿಜ್ಯಕ್ಕೆ ಗಮನ ನೀಡುವುದರ ಮೂಲಕ ನಗರ ಬೆಳವಣಿಗೆಗೆ ಅನುಕೂಲಕಾರಿಯಾದ ಸನ್ನಿವೇಶವನ್ನು ಸೃಷ್ಟಿಸಿದರು. ಹೊಯ್ಸಳ ಅರಸರು ಉದಾರ ನೀತಿಯಿಂದ ವ್ಯಾಪಾರ ಮತ್ತು ವಾಣಿಜ್ಯವನ್ನು ಪ್ರೋತ್ಸಾಹಿಸಿದರು ಹಾಗೂ ಅದಕ್ಕೆ ರಕ್ಷಣೆ ಮತ್ತು ಭದ್ರತೆಯನ್ನು ಒದಗಿಸಿದರು. ಪಟ್ಟಣಗಳ ನಿರ್ಮಾಣ ಹಾಗೂ ಬೆಳವಣಿಗೆಯಲ್ಲಿ ಉತ್ತೇಜನ ನೀಡಿದ ರಾಜರು, ಮಂತ್ರಿಗಳು, ದಂಡನಾಯಕರು, ಅಧಿಕಾರಿಗಳು ಇತರೆ ವ್ಯಕ್ತಿಗಳ ನಿದರ್ಶನಗಳಿದ್ದವು. ಇವೆಲ್ಲರೂ ಹಲವು ವಿಧದಲ್ಲಿ ನಗರ ಚಟುವಟಿಕೆಯನ್ನು ಪ್ರೋತ್ಸಾಹಿಸಿದರು. ರಾಜಕೀಯ ಅಂಶಕ್ಕೆ ಅಧೀನವಾಗಿ ಯುದ್ಧವು ಸಹ ನಗರೀಕರಣದ ಅಂಶವಾಗಿ ಪರಿಗಣಿಸಲ್ಪಟ್ಟಿದೆ. ಆದರೆ ಅದು ಸಕಾರಾತ್ಮಕವಾಗಿರುವುದಕ್ಕಿಂತ ಹೆಚ್ಚಾಗಿ ನಕಾರಾತ್ಮಕವಾಗಿ ಕಂಡು ಬಂದಿತು.

ಪಟ್ಟಣಗಳ ಬೆಳವಣಿಗೆಗೆ ಧಾರ್ಮಿಕ ಅಂಶಗಳುಕೂಡ ಸಹಕಾರಿಯಾಗಿದ್ದವು. ಧಾರ್ಮಿಕ ಸಂಸ್ಥೆಗಳಾದ ದೇವಾಲಯಗಳು ಮಠಗಳು ಹಾಗೂ ಆಶ್ರಮಗಳು ಪಟ್ಟಣಗಳ ಬೆಳವಣಿಗೆಗೆ ಸಹಕಾರಿಯಾಗಿದ್ದವು. ಈ ಧಾರ್ಮಿಕ ಸಂಸ್ಥೆಗಳು ಜನರನ್ನು ತಮ್ಮ ಕಡೆಗೆ ಆಕರ್ಷಿಸಿದವು. ಆರ್ಥಿಕ ಚಟುವಟಿಕೆಗಳು ದೇವಾಲಯಗಳ ಸುತ್ತಮುತ್ತ ಬೆಳೆದವು. ಇದರ ಜೊತೆಗೆ ಧಾರ್ಮಿಕ ಕೇಂದ್ರಗಳಾಗಿ ಜನರನ್ನು ತಮ್ಮ ಕಡೆಗೆ ಸೆಳೆದವು. ಇದರಿಂದಾಗಿ ಪಟ್ಟಣಗಳು ದೇವಾಲಯಗಳ ಸುತ್ತಮುತ್ತ ಬೆಳೆದವು.

ಹೊಯ್ಸಳರ ಸಾಮ್ರಾಜ್ಯದಲ್ಲಿ ಹಳ್ಳಿಗಳನ್ನು ಪುರಗಳು ಅಥವಾ ಪಟ್ಟಣಗಳಾಗಿ ಪರಿವರ್ತಿಸಿದ ಹಲವಾರು ನಿದರ್ಶನಗಳಿದ್ದವು. ಇದು ಅನೇಕ ಪಟ್ಟಣಗಳು ಬೆಳೆಯಲು ಕಾರಣವಾಯಿತು. ಅವುಗಳಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿದರು. ಇದರಿಂದ ಇವುಗಳು ಪಟ್ಟಣಗಳಾಗಿ ಪರಿವರ್ತನೆಯಾದವು. ಹೊಯ್ಸಳ ಅರಸರು ಹೊಸ ಪಟ್ಟಣಗಳ ರಚನೆಯ ಜೊತೆಗೆ ಅನೇಕ ಉಪಪಟ್ಟಣಗಳನ್ನು ನಿರ್ಮಿಸಿದರು. ಹೊಸದಾಗಿ ನಿರ್ಮಿಸಿದ ಪಟ್ಟಣಗಳ ಹೊರತಾಗಿ ಬೆಳವಣಿಗೆಯ ಹಂತದಲ್ಲಿದ್ದ ಹಲವಾರು ಪಟ್ಟಣಗಳಿದ್ದವು. ಈ ಪಟ್ಟಣಗಳು ನಿರ್ವಹಿಸಿದ ಪಾತ್ರ ಪ್ರಮುಖವಾಗಿತ್ತು. ಇವುಗಳು ಬೇರೆ ಪಟ್ಟಣಗಳಿಗಿಂತ ಭಿನ್ನವಾಗಿದ್ದವು ಹಾಗೂ ಅವುಗಳನ್ನು ಪ್ರತ್ಯೇಕವಾಗಿ ವರ್ಗೀಕರಿಸಬಹುದಾಗಿತ್ತು. ಅವುಗಳನ್ನು ರಾಜಕೀಯ, ಆರ್ಥಿಕ ಮತ್ತು ಧಾರ್ಮಿಕ ಸ್ವರೂಪದ ಪಟ್ಟಣಗಳು ಎಂದು ಗುರುತಿಸಬಹುದು.

ಆರ್ಥಿಕ ಸ್ವರೂಪದ ಪಟ್ಟಣಗಳು ವ್ಯಾಪಾರ ಹಾಗೂ ವಾಣಿಜ್ಯವನ್ನು ತಮ್ಮ ನೆಲೆಯನ್ನಾಗಿ ಮಾಡಿಕೊಂಡಿದ್ದವು. ಕ್ರಮೇಣವಾಗಿ ಮಧ್ಯಕಾಲೀನ ಪಟ್ಟಣಗಳ ಅನೇಕ ಆಸ್ತಿಗಳಾದ ಮಾರುಕಟ್ಟೆಗಳು, ದೇವಾಲಯಗಳು ಮುಂತಾದವುಗಳನ್ನು ಅವುಗಳು ಬೆಳೆಸಿದವು. ಈ ಪಟ್ಟಣ ಗಳಲ್ಲಿ ವರ್ತಕರು ಕುಶಲಕರ್ಮಿಗಳು ಹಾಗೂ ವೈವಿಧ್ಯಮಯ ಗುಂಪುಗಳಿದ್ದವು. ಸಾಮಾನ್ಯವಾಗಿ ಈ ರೀತಿಯಾದ ಪಟ್ಟಣಗಳು ಸಮುದ್ರ ತೀರಗಳ ಬಳಿ ಕಂಡುಬರುತ್ತಿದ್ದವು. ಈ ಅಂಶವನ್ನು ಸ್ಪಷ್ಟಪಡಿಸಲು ಕೆಲವು ಉದಾಹರಣೆಗಳನ್ನು ಕೊಡಬಹುದು. ವಾಣಿಜ್ಯ ಪಟ್ಟಣಗಳ ಬೆಳವಣಿಗೆಗೆ ಒಂದು ಫಲವತ್ತಾದ ಪ್ರದೇಶವೆಂದರೆ ಅದು ಪಶ್ಚಿಮ ತೀರವಾಗಿದ್ದಿತು. ಹೆಚ್ಚು ಸಂಖ್ಯೆಯ ಪಟ್ಟಣಗಳನ್ನು ದಕ್ಷಿಣ ಹಾಗೂ ಉತ್ತರ ಕನ್ನಡ ತೀರಗಳ ಮೇಲೆ ನೋಡಬಹುದು. ಶಾಸನಗಳು ಈ ಪಟ್ಟಣಗಳಲ್ಲಿನ ಆರ್ಥಿಕ ಹಾಗೂ ವಾಣಿಜ್ಯ ಚಟುವಟಿಕೆಗಳ ಬಗ್ಗೆ ತಿಳಿಯಲು ಸಹಕಾರಿಯಾಗಿವೆ.

ರಾಜಕೀಯ ಸ್ವರೂಪದ ನಗರಕೇಂದ್ರಗಳು ರಾಜಕೀಯ ಚಟುವಟಿಕೆಗಳ ಕೇಂದ್ರಗಳಾಗಿದ್ದವು. ಅವುಗಳು ಸಾಮ್ರಾಜ್ಯದ ರಾಜಧಾನಿಗಳು, ಪ್ರಮುಖ ಕೇಂದ್ರಗಳು ಹಾಗೂ ಕೋಟೆಗಳು ಆಡಳಿತ ಕೇಂದ್ರಗಳು ಮತ್ತು ಸೇನಾ ಮುಖ್ಯ ನೆಲೆಗಳಾಗಿದ್ದವು.

ಮಧ್ಯಕಾಲೀನ ಯುಗದಲ್ಲಿ ಕೋಟೆಗಳು ಪ್ರಮುಖವಾಗಿದ್ದವು ಹಾಗೂ ಅವುಗಳು ಕೊಟೆಯ ಪಟ್ಟಣಗಳಾಗಿ ಉದಯಿಸಿದವು. ಅವುಗಳ ಆಯಕಟ್ಟಿನ ನೆಲೆ ಹಾಗೂ ಶಕ್ತಿಯಿಂದಾಗಿ ಸಮಕಾಲೀನ ಯುಗದಲ್ಲಿ ಒಂದು ಪ್ರಮುಖವಾದ ಪಾತ್ರವನ್ನು ವಹಿಸುವಂತೆ ಮಾಡಿದವು.

ಧಾರ್ಮಿಕ ಸ್ವರೂಪದ ನಗರಕೇಂದ್ರಗಳು ದೇವಾಲಯಗಳಾಗಿದ್ದು ದೊಡ್ಡ ಮೂರ್ತಿಗಳು (ದೇವತೆಗಳು) ಮಠಗಳು ಹಾಗೂ ಆಶ್ರಮಗಳ ಆಶ್ರಯ ಸ್ಥಾನಗಳಾಗಿದ್ದವು. ಇವುಗಳು ಯಾತ್ರಾ ಸ್ಥಳಗಳು ಆಗಿದ್ದವು. ನಗರ ಚಟುವಟಿಕೆಗಳಲ್ಲಿ ಧರ್ಮದ ಪಾತ್ರವೂ ಪ್ರಮುಖವಾಗಿತ್ತು ಹಾಗೂ ನಗರ ಬೆಳವಣಿಗೆಯಲ್ಲಿ ಧಾರ್ಮಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ಮಹತ್ವವಾದ ಪಾತ್ರವನ್ನು ವಹಿಸಿದವು.

ಮೂರನೆಯದಾಗಿ ನಗರ ಬೆಳವಣಿಗೆಯಿಂದಾಗಿ ವಿವಿಧ ರೀತಿಯ ಹಾಗೂ ವೈವಿಧ್ಯಮಯ ವಾದ ನಗರಕೇಂದ್ರಗಳು ಹೆಚ್ಚಿನ ಸಂಖ್ಯೆಯಲ್ಲಿ ಕಾಣಿಸಿಕೊಂಡವು. ಆದರೆ ಆ ಬೆಳವಣಿಗೆಯು ಸಮಾನವಾಗಿರಲಿಲ್ಲ. ಅದು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಭಿನ್ನವಾಗಿತ್ತು. ಈ ಭಿನ್ನತೆಯು ಪ್ರಮಾಣ ಹಾಗೂ ಗಾತ್ರಗಳೆರಡರಲ್ಲೂ ಕಂಡುಬರುತ್ತಿತ್ತು. ಗಾತ್ರದಲ್ಲಿನ ಭಿನ್ನತೆಯು ಸಾಮ್ರಾಜ್ಯದುದ್ದಕ್ಕೂ ಹರಡಿದ್ದ ಪಟ್ಟಣಗಳಲ್ಲಿನ ಒಂದು ಜೋಡಣೆ ಅಥವಾ ಹಂಚಿಕೆಯ ವಿಧಾನವನ್ನು ತೋರಿಸುತ್ತಿತ್ತು. ಇದನ್ನು ನಗರ ರಚನೆಯೊಂದು ಹೇಳಬಹುದು. ಈ ನಗರ ರಚನೆಯು ಎರಡು ಹಂತಗಳಲ್ಲಿತ್ತು ಇದರ ಅಧ್ಯಯನವು ಎರಡು ದೃಷ್ಟಿಕೋನಗಳನ್ನು ಹೊಂದಿದೆ. ಒಂದು ಸಾಮ್ರಾಜ್ಯದ ವಿವಿಧ ಪ್ರದೇಶಗಳಲ್ಲಿದ್ದ ವಿವಿಧ ಗಾತ್ರಗಳ ಪಟ್ಟಣಗಳ ಹಂಚಿಕೆ ಎರಡನೆಯದೆಂದರೆ ಪಟ್ಟಣವೊಂದರ ಒಳರಚನೆ, ಅಂದರೆ ಒಂದು ಪಟ್ಟಣವು ದೇವಾಲಯಗಳು, ಅರಮನೆಗಳು, ಮಾರುಕಟ್ಟೆ, ರಸ್ತೆಗಳು, ಮನೆಗಳ ಸಾಲುಗಳು ಹಾಗೂ ಅದರೊಳಗಿನ ಕಟ್ಟಡಗಳು ಪಟ್ಟಣದ ಒಳಭಾಗದಲ್ಲಿ ಅದೊಂದು ರೀತಿಯ ಜೋಡಣೆ ಅಥವಾ ರಚನಾ ವಿಧಾನವಾಗಿತ್ತು.

ಒಂದು ಪಟ್ಟಣದ ಗಾತ್ರವನ್ನು ನಿರ್ಧರಿಸುವಲ್ಲಿ ಒಂದು ನಿರ್ದಿಷ್ಟ ಪಟ್ಟಣವನ್ನು ಅಭ್ಯಸಿಸಿ ಅದರ ಆಧಾರದ ಮೇಲೆ ಮಾಡಿದ ಅಭಿಪ್ರಾಯಗಳ ಮಾದರಿಯ ಅಧ್ಯಯನವು ಗುಣಾತ್ಮಕವಾಗಿದೆ. ಈ ಅಭಿಪ್ರಾಯವು ಸ್ವಲ್ಪಮಟ್ಟಿಗೆ ಅಮೂರ್ತವಾಗಿ ತೋರುತ್ತದೆ. ಇದರ ಜೊತೆಗೆ ಈ ಒಂದು ಅಧ್ಯಯನದಲ್ಲಿ ಪಟ್ಟಣಗಳು ನಿರ್ವಹಿಸಿದ ಪಾತ್ರ ಹಾಗೂ ಅವುಗಳು ಮಾಡಿದ ಕಾರ್ಯಗಳು ಹಾಗೂ ಕಾರ್ಯಾಚರಣೆಯ ಸಾಂಧ್ರತೆಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ.

ಹೊಯ್ಸಳರ ಸಾಮ್ರಾಜ್ಯದಲ್ಲಿ ನಗರ ರಚನೆಯು ವಿವಿಧ ಸ್ಥರಗಳಲ್ಲಿ ವಿವಿಧ ಗಾತ್ರದ ಮನೆಗಳನ್ನು ಹೊಂದಿತು. ಕೆಳವಲಯದಲ್ಲಿ ಸಣ್ಣಗಾತ್ರದ ನಗರ ಕೇಂದ್ರಗಳಿದ್ದವು. ಈ ವಸಾಹತುಗಳು ದೊಡ್ಡ ಹಳ್ಳಿಗಳಿಗಿಂತ ದೊಡ್ಡದಾಗಿರದಿದ್ದರು ಅವು ನಗರ ಲಕ್ಷಣಗಳನ್ನು ಹೊಂದಿದ್ದವು. ಈ ಪಟ್ಟಣಗಳು ಗ್ರಾಮೀಣ ಪರಿಸರದ ಮಧ್ಯೆ ಇದ್ದರು ಬಹಳ ವಿಶಿಷ್ಟವಾಗಿದ್ದವು. ಈ ರೀತಿಯ ವಸಾಹತುಗಳು ನಗರ ಕೇಂದ್ರಗಳಾಗಿ ಬೆಳೆದ ಮೇಲೆ ವಿಸ್ತರಣೆಯ ಲಕ್ಷಣಗಳನ್ನು ತೋರಿಸಲಿಲ್ಲ. ಈ ರೀತಿಯ ನಗರ ಕೇಂದ್ರಗಳು ಹೆಚ್ಚಿನ ಪಾತ್ರಗಳನ್ನು ಹೊಂದಿದ್ದವು. ಅವುಗಳು ಹೆಚ್ಚಿನ ಕಾರ್ಯಗಳನ್ನು ನಿರ್ವಹಿಸುತ್ತಿದ್ದವು. ಮಧ್ಯಕಾಲೀನ ಪಟ್ಟಣಗಳು ವೈಶಿಷ್ಟತೆಗಳನ್ನು ಹೊಂದಿದ್ದವು. ಪಟ್ಟಣಗಳ ಕಾರ್ಯಕ್ಷೇತ್ರವು ಕೇವಲ ಸುತ್ತಮುತ್ತಲಿನ ಪ್ರದೇಶಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಅವುಗಳು ನಿರ್ವಹಿಸುತ್ತಿದ್ದ ವಿವಿಧ ಕಾರ್ಯಗಳ ಜೊತೆಗೆ ಕೆಲವು ಪಟ್ಟಣಗಳು ರಾಜಕೀಯ, ಆರ್ಥಿಕ, ಧಾರ್ಮಿಕ ಪಾತ್ರಗಳನ್ನು ನಿರ್ವಹಿಸುತ್ತಿದ್ದವು. ಇವುಗಳ ಸಂಖ್ಯೆ ಕಡಿಮೆ ಇದ್ದರೂ ಇವುಗಳ ಕಾರ್ಯ ಬಹಳ ಪ್ರಮುಖವಾಗಿತ್ತು. ಈ ರೀತಿಯ ಪಟ್ಟಣಗಳನ್ನು ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ಕಾಣಬಹುದಾಗಿತ್ತು.

ಮಧ್ಯಕಾಲೀನ ಪಟ್ಟಣದ ಪ್ರಮುಖ ವೈಶಿಷ್ಟತೆಯೇನೆಂದರೆ ಕೋಟೆಯಾಗಿದೆ ಆಗ ಪಟ್ಟಣಗಳ ಸುತ್ತ ಕೋಟೆಯನ್ನು ನಿರ್ಮಿಸಲಾಗುತ್ತಿತ್ತು ಅಥವಾ ನೈಸರ್ಗಿಕ ರಕ್ಷಣೆ ದೊರೆಯುವಂತಹ ಸ್ಥಳಗಳಲ್ಲಿ ಪಟ್ಟಣಗಳನ್ನು ನಿರ್ಮಿಸಲಾಗುತ್ತಿತ್ತು. ಕೃತಕ ಹಾಗೂ ನೈಸರ್ಗಿಕ ಕೋಟೆಗಳೆರಡನ್ನು ರಕ್ಷಣೆಯ ದೃಷ್ಟಿಯಿಂದ ನಿರ್ಮಿಸಲಾಗಿತ್ತು. ಸಾಮ್ರಾಜ್ಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದ ಕೋಟೆಗಳೇ ಇದಕ್ಕೆ ಸಾಕ್ಷಿಯಾಗಿವೆ. ಹಳೇಬೀಡು ಕೋಟೆಯ ಸುತ್ತ ಬೆಳೆದಿತು. ಹಳೇಬೀಡಿನ ಒಳರಚನೆಗೆ ಸಂಬಂಧಿಸಿದಂತೆ ಕೋಟೆಯ ಹೊರಪದರದಿಂದ ಹಿಡಿದು ಅದರ ಕೇಂದ್ರ ಸ್ಥಾನದವರೆಗೂ ಹಲವಾರು ರೀತಿಯ ಕಟ್ಟಡಗಳನ್ನು ಹೊಂದಿತ್ತು. ಅವುಗಳೆಂದರೆ ರಾಜರ ಅರಮನೆ,

ಮಾರುಕಟ್ಟೆಯ ಸ್ಥಳ, ರಸ್ತೆಗಳು, ಮನೆಗಳ ಸಾಲುಗಳು, ದೇವಾಲಯ ಹಾಗೂ ಅನೇಕ ಭವ್ಯವಾದ ಕಟ್ಟಡಗಳಿದ್ದವು.

ನಾಲ್ಕನೆಯದಾಗಿ ವಿವಿಧ ರೀತಿಯ ಹಾಗೂ ವಿವಿಧ ಗಾತ್ರಗಳ ಪಟ್ಟಣಗಳು ಉತ್ತಮವಾದ ಆಡಳಿತವನ್ನು ಹೊಂದಿದ್ದವು ಹಾಗೂ ನಿರ್ವಹಣೆಯನ್ನು ಹೊಂದಿದ್ದವು. ಅಧ್ಯಯನದ ಈ ಅಂಶವು ಪಟ್ಟಣ ಸಭೆಯ ಅಧಿಕಾರ ಹಾಗೂ ಕರ್ತವ್ಯಗಳು ಮತ್ತು ಅದರ ಅಧಿಕಾರಗಳನ್ನೊಳಗೊಂಡಿದೆ. ಪಟ್ಟಣಗಳು ತಮ್ಮದೇ ಆದ ಸಭೆಗಳನ್ನು ಹೊಂದಿದ್ದವು. ಈ ಸಭೆಗಳು ಅವುಗಳ ಪ್ರತಿನಿಧಿಗಳು ಹಾಗೂ ಸದಸ್ಯರ ಮುಖಾಂತರ ಕಾರ್ಯ ನಿರ್ವಹಿಸುತ್ತಿದ್ದವು.

ಪುರಸಭೆಗಳು ನಗರ ಸಭಾ ಕಾರ್ಯಗಳನ್ನು ನಿರ್ವಹಿಸುತ್ತಿದ್ದವು. ಅವುಗಳಿಗೆ ವಿಶೇಷ ಹಕ್ಕು ಬಾಧ್ಯತೆಗಳಿದ್ದವು. ಈ ಸಭೆಗಳೊಂದಿಗೆ ಪಟ್ಟಣಗಳ ಆಡಳಿತವನ್ನು ನಿರ್ವಹಿಸಲು ಹಲವಾರು ಅಧಿಕಾರಿಗಳಿದ್ದರು. ದಕ್ಷಿಣ ಕನ್ನಡದ ಕೆಲವು ಪಟ್ಟಣಗಳ ಅಧ್ಯಯನದಿಂದ ಅವುಗಳನ್ನು ಹಲವು ಕೇರಿಗಳಾಗಿ ವಿಂಗಡಿಸಲಾಗಿತ್ತು ಎಂಬ ಅಂಶ ತಿಳಿದು ಬರುತ್ತದೆ.

ಪಟ್ಟಣಗಳ ಆಡಳಿತಕ್ಕೆ ಸಂಬಂಧಿಸಿದಂತೆ ಪಟ್ಟಣಸ್ವಾಮಿಯೆಂಬ ಪ್ರಮುಖ ಅಧಿಕಾರಿ ಯಿದ್ದನು. ಅವನು ಪಟ್ಟಣದ ಪಾಲಕನಾಗಿದ್ದನು. ಸಾಮಾನ್ಯವಾಗಿ ವೃತ್ತಿದ ಸಂಘದ ಪ್ರಮುಖ ಸದಸ್ಯನನ್ನು ಪಟ್ಟಣಸ್ವಾಮಿಯಾಗಿ ಆಯ್ಕೆ ಮಾಡಲಾಗುತ್ತಿತ್ತು. ಪಟ್ಟಣಸ್ವಾಮಿಯ ಹುದ್ದೆಯು ವಂಶಪಾರಂಪರ್ಯವಾಗಿದ್ದರು. ಕೆಲವು ವೇಳೆ ಆಯ್ಕೆಯ ಮುಖಾಂತರ ನಡೆಯುತ್ತಿತ್ತು. ಹೊಯ್ಸಳ ಶಾಸನಗಳು ಪಟ್ಟಣಸ್ವಾಮಿಗಳನ್ನು ಮೂಲಸ್ಥಂಭ ಅಥವಾ ರಾಜ್ಯದ ಅಭ್ಯುದಯಕ್ಕೆ ಕಂಬದಂತೆ ಆಧಾರವಾಗಿರುವವರು ಎಂದು ವರ್ಣಿಸುತ್ತವೆ. ಪಟ್ಟಣಸ್ವಾಮಿಯು ಕಾರ್ಯಾಂಗ ಹಾಗೂ ನ್ಯಾಯಾಂಗದ ಎರಡು ಕಾರ್ಯಗಳನ್ನು ನಿರ್ವಹಿಸುತ್ತಿದ್ದನು. ಅವನು ನಿರ್ವಹಿಸುತ್ತಿದ್ದ ಕರ್ತವ್ಯಗಳಿಗೆ ಸಂಭಾವನೆಯನ್ನು ಪಡೆಯುತ್ತಿದ್ದನು.

ಐದನೆಯದಾಗಿ ಪಟ್ಟಣಸ್ವಾಮಿಯ ಅಧಿಕಾರ ಮತ್ತು ಸ್ಥಾನಮಾನಗಳು ಹಾಗೂ ಪಟ್ಟಣ ಆಡಳಿತದಲ್ಲಿ ಅವನ ಪಾತ್ರವು ಪಟ್ಟಣಗಳ ಆರ್ಥಿಕ ಪ್ರಾಮುಖ್ಯತೆಯನ್ನು ತೋರಿಸುತ್ತದೆ. ನಗರಳು ಉತ್ಪಾದನೆ ಹಾಗೂ ಹಂಚಿಕೆಯ ಕೇಂದ್ರಗಳಾಗಿದ್ದವು. ವ್ಯಾಪಾರ ಮತ್ತು ವಾಣಿಜ್ಯ ಕೈಗಾರಿಕೆ ಪಟ್ಟಣ

ವಾಸಿಗಳ ಪ್ರಮುಖ ಕಸುಬುಗಳಾಗಿದ್ದವು. ಕೈಗಾರಿಕೆಗಳ ಬೆಳವಣಿಗೆ ವ್ಯಾಪಾರದ ವಿಸ್ತರಣೆ ಹಾಗೂ ವಾಣಿಜ್ಯದ ವಿಸ್ತರಣೆಯು ನಗರಗಳ ಬೆಳವಣಿಗೆಗೆ ದಾರಿಯಾಯಿತು.

ಕೃಷಿಕೈಗಾರಿಕೆಗಳು, ಗಣಿಗಾರಿಕೆ ಹಾಗೂ ಕಲ್ಲಿದ್ದಲು, ಕರಕುಶಲ ಕೈಗಾರಿಕೆ, ಜವಳಿ ಉದ್ಯಮ ಹಾಗೂ ಮೀನುಗಾರಿಕೆಯಂತಹ ಹಲವು ಕೈಗಾರಿಕೆಗಳು ಈ ಕಾಲದಲ್ಲಿ ಅಭಿವೃದ್ಧಿ ಹೊಂದಿದವು. ಇದರ ಜೊತೆಗೆ ಹಲವಾರು ಅಂಶಗಳಿಂದಾಗಿ ಆಂತರಿಕ ಹಾಗೂ ಬಾಹ್ಯ ವ್ಯಾಪಾರ ಗಳೆರಡು ವಿಸ್ತಾರವಾದವು.

ಪಟ್ಟಣಗಳಲ್ಲಿನ ಆರ್ಥಿಕ ಜೀವನಕ್ಕೆ ಸಂಬಂಧಿಸಿದಂತೆ ಮತ್ತೊಂದು ಪ್ರಮುಖ ಅಂಶವೆಂದರೆ ವೃತ್ತಿ ಸಂಘದ ಅಸ್ಥಿತ್ವವಾಗಿತ್ತು. ಪಟ್ಟಣಗಳಲ್ಲಿನ ಆರ್ಥಿಕ ಚಟುವಟಿಕೆಗಳು ಈ ವೃತ್ತಿ ಸಂಘಗಳನ್ನು ಅವಲಂಬಿಸಿದವು. ಆಗ ಎರಡು ರೀತಿಯ ವೃತ್ತಿ ಸಂಘಗಳಿದ್ದವು. ಅವುಗಳೆಂದರೆ ವೃತ್ತಿ ಸಂಘ ಹಾಗೂ ವರ್ತಕ ಸಂಘ.

ಮಧ್ಯಕಾಲೀನ ಯುಗದಲ್ಲಿ ಪಾಂಚಾಲರು ಅಥವಾ ವೀರ ಪಾಂಚಾಲರು ಕೈಕೋಳರು ಗಾಣಿಗರು, ಕುಂಬಾರರು ಮುಂತಾದ ಅನೇಕ ವೃತ್ತಿ ಸಂಘಗಳಿದ್ದವು. ನಗರೀಕರಣದ ಪರಿಣಾಮವಾಗಿ ವೃತ್ತಿಸಂಘಗಳು ಪ್ರಾಮುಖ್ಯತೆಯನ್ನು ಗಳಿಸಿದವು. ಹಾಗೂ ಕುಶಲಕರ್ಮಿಗಳು ತಮ್ಮ ಸ್ಥಾನಮಾನ ಗಳನ್ನು ಉತ್ತಮ ಪಡಿಸಿಕೊಂಡರು. ಅವರು ಆಡಳಿತ ವರ್ಗದವರಿಂದ ಬಿರುದು ಬಾವಲಿಗಳು ಮತ್ತು ಹಕ್ಕುಬಾಧ್ಯತೆಗಳನ್ನು ಪಡೆದರು. ಕೆಲವು ಬಾರಿ ಧಾರ್ಮಿಕ ಪಂಥಗಳ ಮುಖ್ಯಸ್ಥರು ಅವರಿಗೆ ಕೆಲವು ವಿಶೇಷ ಸವಲತ್ತುಗಳನ್ನು ಹಾಗೂ ಹಕ್ಕುಗಳನ್ನು ನೀಡುತ್ತಿದ್ದರು.

ಆ ಕಾಲದಲ್ಲಿ ಆರ್ಥಿಕ ಜೀವನದಲ್ಲಿ ವೃತ್ತಿ ಸಂಘಗಳ ಪಾತ್ರಕ್ಕಿಂತ ವ್ಯಾಪಾರಿಗಳ ಪಾತ್ರ ಪ್ರಮುಖವಾಗಿತ್ತು. ಆಗ ಹಲವಾರು ಅಂಶಗಳು ವರ್ತಕ ಸಂಘಗಳ ರಚನೆಗೆ ಕಾರಣವಾಗಿತ್ತು.

ದಕ್ಷಿಣ ಕನ್ನಡವು ಸಾಮ್ರಾಜ್ಯದ ಅತ್ಯಂತ ಹೆಚ್ಚು ನಗರೀಕರಣ ಪ್ರದೇಶಗಳಲ್ಲಿ ಒಂದಾಗಿತ್ತು. ಇದು ಹಲವು ವರ್ತಕ ಸಂಘಗಳ ಚಟುವಟಿಕೆಯ ಕೇಂದ್ರವಾಗಿತ್ತು. ಅಲ್ಲಿದ್ದ ವರ್ತಕ ಸಂಘಗಳು ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದವು.

ಈ ರೀತಿಯಾಗಿ ವೃತ್ತಿ ಹಾಗೂ ವರ್ತಕ ಸಂಘಗಳೆರಡು ಆ ಕಾಲದ ಪಟ್ಟಣಗಳ ಆರ್ಥಿಕ, ಸಾಮಾಜಿಕ ಜೀವನದಲ್ಲಿ ಪ್ರಬಲ ಶಕ್ತಿಗಳಾಗಿದ್ದವು. ಅವುಗಳು ಪೌರ ವಿಷಯಗಳಲ್ಲಿ ಅಂದರೆ ಆಡಳಿತ ಹಾಗೂ ಆರ್ಥಿಕ ಚಟುವಟಿಕೆಗಳಲ್ಲಿ ಬಹಳ ಪ್ರಬಲವಾಗಿದ್ದವು. ಆ ಕಾಲದ ಸಾಮಾಜಿಕ ಮತ್ತು ರಾಜಕೀಯ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಇವುಗಳು ಹಲವಾರು ಕಾರ್ಯಗಳನ್ನು ನಿರ್ವಹಿಸುತ್ತಿದ್ದವು.

ಆರನೆಯದಾಗಿ ನಗರ ಅಧ್ಯಯನಕ್ಕೆ ಸಂಬಂಧಿಸಿದ ಮತ್ತೊಂದು ಪ್ರಮುಖ ಅಂಶವೆಂದರೆ ನಗರ ಸಾಮಾಜಿಕ ರಚನೆಯು ವಿಶ್ಲೇಷಣೆಯಾಗಿದೆ. ನಗರವು ವೈವಿಧ್ಯಮಯ ಸಾಮಾಜಿಕ ಲಕ್ಷಣಗಳನ್ನು ಹೊಂದಿದ್ದರಿಂದ ಅದರ ಸ್ವರೂಪವು ಸಂಕೀರ್ಣವಾಗಿತ್ತು. ನಗರ ಸಂಯೋಜನೆಯು ವಿವಿಧ ಗುಂಪುಗಳು ಜಾತಿಗಳು ಹಾಗೂ ವರ್ಗಗಳನ್ನು ಹೊಂದಿತ್ತು. ಇದರ ಜೊತೆಗೆ ನಗರ ಸಮಾಜವು ಮುಕ್ತವು ಹಾಗೂ ಸಡಿಲವು ಆಗಿದ್ದರಿಂದ ನಗರಗಳಲ್ಲಿ ಒಂದು ರೀತಿಯ ಸ್ಥಿತಿಸ್ಥಾಪಕತೆ ಸಾಧ್ಯವಿತ್ತು.

ಪಟ್ಟಣದ ಜನ ಸಂಯೋಜನೆಯು ಉನ್ನತ ಶ್ರೇಣಿ ಹಾಗೂ ಇನ್ನಿತರ ಸಾಮಾಜಿಕ ನಿರ್ಬಂಧಗಳು ಸಡಿಲಗೊಳ್ಳತೊಡಗಿದವು. ಇದಕ್ಕೆ ಕಾರಣವೇನೆಂದರೆ ವಸತಿಯಾಗಿತ್ತು. ಆ ಕಾಲದಲ್ಲಿ ಬಹಳಷ್ಟು ಗುಂಪುಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಾಮಾಜಿಕ ಹಾಗೂ ಆರ್ಥಿಕ ಕಾರಣಗಳಿಂದ ವಲಸೆ ಹೋಗುತ್ತಿದ್ದವು. ಇದರಿಂದಾಗಿ ನಗರದ ಜನಸಂಖ್ಯೆಯು ತ್ವರಿತವಾಗಿ ಬೆಳೆಯುತ್ತ ಹೋಯಿತು.

ನಗರ ಸಮಾಜದ ಸಡಿಲ ಸ್ವರೂಪವು ಒಂದು ನಿರ್ದಿಷ್ಟ ಜಾತಿ ವರ್ಗ ಅಥವಾ ಗುಂಪಿನ ಜನರ ಸಾಮಾಜಿಕ ಸ್ಥಾನಮಾನಗಳು ಸುಧಾರಿಸಿದುದರ ಮೂಲಕವಾಗಿ ಕಂಡುಬಂದಿತು. ಆ ಕಾಲದಲ್ಲಿ ಅನೇಕ ಕೆಳಜಾತಿಗಳು ಸಾಮಾಜಿಕ ಶ್ರೇಣಿಯ ಹಲವಾರು ಸ್ಥರಗಳನ್ನು ಹತ್ತುವ ಪ್ರಯತ್ನ ಮಾಡಿದರು. ಇದು ಸಂಘರ್ಷ ಹಾಗೂ ಗಲಭೆಗೆ ಅವಕಾಶವನ್ನುಂಟು ಮಾಡಿತು. ಏಕೆಂದರೆ ನಗರೀಕರಣ ಪ್ರವೃತ್ತಿಯು ಅವ್ಯಾಹತವಾಗಿ ಸಾಗಿತ್ತು. ಆಗ ಅರಸರು ಸಮಾಜದಲ್ಲಾಗುತ್ತಿದ್ದ ಮಾರ್ಪಾಡುಗಳಿಗೆ ಸ್ಪಂದಿಸಬೇಕಾಯಿತು. ಹಾಗೂ ವಿಶೇಷ ಹಕ್ಕುಬಾಧ್ಯತೆಗಳು ರಿಯಾಯಿತಿಗಳು, ಸವಲತ್ತುಗಳು ಮತ್ತು ಗೌರವಾಧಾರಗಳನ್ನು ನೀಡಬೇಕಾಗಿ ಬರುತ್ತಿತ್ತು. ಆ ಕಾಲದಲ್ಲಿ ಕೆಲವು ಕೆಳಜಾತಿಗಳು ಸಮನಾದ ಸವಲತ್ತುಗಳನ್ನು ಪಡೆದಿದ್ದವು.

# ಗ್ರಂಥಸೂಚಿ
## ಮೂಲ ಆಧಾರಗಳು


**Epigraphy**

- Annual Reports of the Archaeological Survey of India 1887 onwards
- Annual Reports of the Archaeological Department 1906 onwards
- Annual Reports of Indian Epigraphy 1964 onwards
- Annual Reports of South Indian Epigraphy 1887 onwards
- Annual Reports of Epigraphy Madras
- Andhra Pradesh Government Archaeological Series Hyderabad Select Stone Inscriptions
- Corpus Inscriptions Indiacarum Vol. IV (Ed) by Mirashi V.V.Ootacamund 1955
- Desai P.B. (Ed) A Corpus of Inscriptions in the Kannada Districts of Hyderabad State, Hyderabad 1958. Desai P.B. (Ed) Sasana Parichaya.
- Descriptive list of Kannada Stone Inscriptions Examined by Research Institute (Ed) by Annigeri A.M. and Joshi B.R. Dharwar 1961.
- Desai P.B. Jainism in South India and some Jaina Epigraphy – Sholapur, 1957.
- Epigraphia Carnatica Vols 1 to 16 Bangalore 1980 onwards.
- Epigraphica Carnatica (Revised Edition) volumes 1 to 9 Kannada Adhyana University of Mysore 1892 onwards.

**Epigraphia India**

- Elliot Sir. Walter Collection of South Indian Inscriptions Vol. 11 Kannada and Other Dynastics.

- Fleet John Faithfull. Pali Sanskrit and Old Canarese Inscriptions from the Bombay Presidency, etc. London 1878.
- Hyderabad Archaeologial Reports Indian Antiquary Bombay 1872-1923.
- Karnataka Inscriptions Vol. 1 to 3 (Ed) R.S. Panchamukhi Vol. 4, (Ed) A.M. Annigeri Vol.5, (Ed) P.B. Desai Vol.6 (Ed) Gopal, Dharwar, 1941, 1961.
- Kundangar K.G. (Ed) Inscriptions in Northern Karnataka and Kolhapur State, Kolhapur 1939.
- Rangacharya V.A. Topographical List of the Inscription of Southern India Vols. 1 to 3. Madras, 1919.
- South Indian Inscriptions Archaeological Survey of India Vols. III, VII, VIII, IX, XV, XX, 1890 onwards.
- Srikanta Sastry S. Sources of Karnataka History Vol.1 Mysore, 1946.


## ಇಂಗ್ಲಿಷ್ ಪುಸ್ತಕಗಳು


- Appadoraj A. – Economic Conditions in Southern India, Madras, 1936.
- Basavaraja K.R. – History and Culture of Karnataka Dharwar, 1984.
- Bhandarkar R.G. – Early History of the Deccan 3rd Edition, Calcutta, 1928.
- Bulher G. – Indian Palaeography Calcutta, 1959.
- Chidananda Murthy M. – Kannada Sasanagala Samskritika Adhyayana (A.d. 450-1150), Mysore 1966
- Chandrasekhara Sastri – Economic Conditions under the Hoysalas, Half Yearly Journal of the Mysore University Vol. 11, No.2, Mysore, 1928.

- Coelho, William-Hoysalavamsa Bombay, 1950.
- Karmarkar A.P. – Administrative Machinery in Medieval Karnataka QJMS XXX VIII PP. 435-52, Bangalore 1941.
- Krishna Rao M.V. – The Gangas of Talkad, Madras 1936.
- Krishna Rao M.V. and Keshava Bhat M. – Karnataka Itihasa Darshana, Bangalore, 1970.
- Krishna Sastri H. – The Hoysalas in and beyond Mysore. QJMS Vol. II, Madras, 1911.
- Krishna Swamy Aiyangar S. Rajendra – Hindu State in Southern India CH XVIII or Vol. III of the Cambridge History of India Cambridge, 1928.
- Kuppaswamy G.R. – Economic Conditions in Karnataka, Dharwar, 1975.
- Kuppuswamy Aiyangar, G.R. – Kalachuryas of Kalyani and their Times Unpublished Thesis, Mysore University, 1955.
- Leela Shantakumari S. – History of the Agraharas of Karnataka, Madras.
- Mahalingam T.V. – South Indian Polity Madras, 1955.
- Mahalingam T.V. – The Banas in South Indian History JIH for 1951 Trivandrum 1951.
- Mastivenkatesha Aiyangar – Popular Culture in Karnataka, 1937.
- Mugali R.S. – The Heritage of Karnataka, Bangalore, 1946.
- Nanjundayya H.V. and Anantha Krishna Iyet, - The Mysore Tribes and Castes Vol. II, 1928.
- Narasimhamurthy A.V. – The Coins of Karnataka, Mysore 1975.
- Nagaraja Rao C.K. – Pattamahadevi Shanthale, Bangalore.
- Nagaraja Rao C.K. – Veera Ganga Vishnuvardhana, Bangalore, 1992.
- Nilakanta Sastri K.A. – A History of South India Madras, 1955, (Revised Edn), 1965.

- Nilakanta Sastri K.A. – The Cholas (2nd Edn) Madras, 1955.
- Panchamukhi Vidyartna R.S. and Lakshminarayana Rao N – Dynastics of Karnataka Dharwar, 1946.
- Panchmuki, R.S. – Archaeology of Karnataka, Dharawar, 1953.
- Panukkar K.M. – Essential Features of Indian Culture, Bombay, 1964.
- Ramesh K.V. – History of South Kanara, Dharwar, 1970.
- Rice B. Lewis – Mysore and Coorg. Gazetter, Bangalore 1876-78.
- Rice – Mysore Gazateer. West Minister, 1897.
- Seletore B.A. – Ancient Karnataka Vol. I History of Tuluva, Poona, 1963.
- Saletore B.A. – Ancient Indian Political Thought and Institutions, Bombay, 1963.
- Settar S. – The Hoysala Temples, Dharwar, 1992.
- Setter S. – Inviting Death, Dharwar, 1986.
- Sircar D.C. – Studies in the Geography of Ancient and Medieval India, New Delhi.
- Srikantaiya S. – The Hoysala Empire QJMS Vol. VII PP. 292-310 and Vol VIII PP. 61-76, Bangalore 1917.
- Srikantasastry S. – Sources of Karnataka, History Vol. I Mysore, 1940.
- Shivanna K.S. – A Critique of Hoysal Polity, Mysore 1988.
- Sheik Ali B (Ed) – The Hoysala Dynasty, Mysore, 1972.
- Venkataraman, K.R. – The Hoysalas in the Tamil Country.
- Yazdani G. (Ed) – The Early History of Deccan Voes, 1-2, Bombay, 1960.

# ಕನ್ನಡ ಆಧಾರ ಗ್ರಂಥಗಳು


- ಅಣ್ಣಿಗೇರಿ ಎಂ.ಎಂ. ಮತ್ತು ಮೇವುಂಡಿ ಮಲ್ಲಾರಿ - ಶಾಸನ ಸಾಹಿತ್ಯ ಸಂಚಯ, ಧಾರವಾಡ -1956.
- ಅಣ್ಣಿಗೇರಿ ಎಂ.ಎಂ. ಮತ್ತು ಆರ್. ಶೇಷಶಾಸ್ತ್ರಿ- ಕನ್ನಡ ಶಾಸನ ಸಂಗ್ರಹ, ಬೆಂಗಳೂರು-1975.
- ಕರ್ನಾಟಕ ಪರಂಪರೆ - ಸಂ-1 ದಿವಾಕರ್.ಆರ್.ಆರ್. ಮೈಸೂರು ರಾಜ್ಯ ಸರ್ಕಾರ-1970.
- ಕರ್ನಾಟಕ ವಿಷಯ ವಿಶ್ವಕೋಶ – ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ-1977.
- ಡಾ॥ ಕೃಷ್ಣ ಎಂ.ಎಚ್. – ಕನ್ನಡ ನಾಡಿನ ಚರಿತ್ರೆ – 1977 (ಸಂ-3) ಬೆಂಗಳೂರು.
- ಕೃಷ್ಣರಾವ್ ಎಂ.ವಿ. ಮತ್ತು ಕೇಶವ ಭಟ್ಟ – ಕರ್ನಾಟಕ ಇತಿಹಾಸ ದರ್ಶನ – ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಬೆಂಗಳುರು-1970.
- ಚಿದಾನಂದ ಮೂರ್ತಿ ಎಂ. – ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ.
- ಜಯಪ್ಪಗೌಡ ಡಿ.ಎಸ್. – ಕರ್ನಾಟಕದ ಕಡಲಾಚೆಯ ಸಂಪರ್ಕಗಳು ಶುಭೋಧಯ ಪ್ರಕಾಶನ, ಮೈಸೂರು-1983.
- ಜೋಶಿ ಎಸ್.ಬಿ. – ಕನ್ನಡ ನೆಲೆ, ಧಾರವಾಡ-1952.
- ತಿಪ್ಪೇರುದ್ರಸ್ವಾಮಿ ಎಚ್ – ಕರ್ನಾಟಕದ ಸಂಸ್ಕೃತಿ ಸಮೀಕ್ಷೆ, ಮೈಸೂರು -1961.
- ಡಾ.ದೇಸಾಯಿ ಪಾಂಡುರಂಗರಾಯರು - ಶಾಸನ ಪರಿಚಯ, ಧಾರವಾಡ-1956.
- ನರಸಿಂಹಚಾರ್.ಆರ್ - ಶಾಸನ ಪದ್ಯಮಂಜರಿ (ಕ್ರಿ.ಶ. 700-1465) ಬೆಂಗಳೂರು-1923.
- ನೇಮಿಚಂದ್ರ - ಲೀಲಾವತಿ ಪ್ರಬಂಧಮಂ - ಶಾರದಾ ಮಂದಿರ, ಮೈಸೂರು-1966.
- ಪಂಚಮುಖಿ ಆರ್.ಎಸ್. - ಕರ್ನಾಟಕದ ಶಿಲಾ ಶಾಸನಗಳು, ಧಾರವಾಡ-1953.
- ಪಂಚಮುಖಿ ಆರ್.ಎಸ್. – ಕರ್ನಾಟಕ ಹರಿದಾಸ ಸಾಹಿತ್ಯ, ಬೆಂಗಳೂರು- 1952.

- ಪಂಚಮುಖಿ. ಆರ್.ಎಸ್. ಮತ್ತು ಲಕ್ಷ್ಮಿ ನಾರಾಯಣರಾವ್ – ಕರ್ನಾಟಕದ ಅರಸು ಮನೆತನಗಳು ಸಂ–I, ಧಾರವಾಡ – 1946.
- ಮೇವಾಡಿ ಮಲ್ಲಾರಿ – ಕನ್ನಡ ಶಾಸನ ಸಂಗ್ರಹ, ಬೆಂಗಳೂರು – 1975.
- ಮುಗುಳಿ ಆರ್.ಎಸ್ – ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು – 1960.
- ರಮೇಶ್ ಕೆ.ವಿ. – ತುಳುನಾಡಿನ ಶಾಸನಗಳೂ – 1978.
- ರಮೇಶ್ ಕೆ.ವಿ. – ಕರ್ನಾಟಕ ಶಾಸನ ಸಂಹಿತೆ, ಬೆಂಗಳೂರು– 1971.
- ರಘುನಾಥ ಭಟ್ಟ ಎಚ್.ಆರ್. (ಸಂ) – ಕರ್ನಾಟಕದ ಶಾಸನಕಲೆ - ಭಾರತೀ ಪ್ರಕಾಶನ, ಮೈಸೂರು–1977.
- ಶಾಮಶಾಸ್ತ್ರಿ ಆರ್. – ಕರ್ನಾಟಕದ ವೀರಗಲ್ಲುಗಳು, ಬೆಂಗಳೂರು–1982.
- ಶ್ರೀಕಂಠಶಾಸ್ತ್ರಿ.ಎಸ್–ಹೊಯ್ಸಳ ವಾಸ್ತುಶಿಲ್ಪ ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ–1965.
- ಶ್ರೀಕಂಠಶಾಸ್ತ್ರಿ ಎಸ್ - ಭಾರತೀಯ ಸಂಸ್ಕೃತಿ, ಮೈಸೂರು 1975.
- ಶ್ರೀನಿವಾಸ ಮೂರ್ತಿ ಎಂ.ಆರ್. - ಭಕ್ತಿ ಭಂಡಾರಿ ಬಸವಣ್ಣನವರು, ಬೆಂಗಳೂರು–1936.
- ಹಿರೇಮಠ ಬಿ.ಆರ್. ಶಾಸನಗಳಲ್ಲಿ ಕರ್ನಾಟಕದ ವರ್ತಕರು ಪ್ರಸಾರಾಂಗ ಕರ್ನಾಟಕ ವಿಶ್ವವಿದ್ಯಾನಿಲಯ, ಧಾರವಾಡ–1936.
- ಡಾ. ಹಿರೇಮಠ ಆರ್.ಸಿ. ಮತ್ತು ಪ್ರೊ.ಎಂ.ಎಂ.ಕಲಬುರ್ಗಿ – ಕನ್ನಡ ಶಾಸನ ಸಂಪದ, ಧಾರವಾಡ–1968.

## ಗೆಜಟಿಯರ್ ಮತ್ತು ನಿಘಂಟುಗಳು


ಹಯವದನರಾವ್, ಮೈಸೂರು ಗೆಜಟಿಯರ್ ಸಂ 1 ರಿಂದ 5.1930.

Epigraphia Glossary – Sircar. D.C.

ಸೂರ್ಯನಾಥ ಕಾಮತ್. ಸಂ. ಕರ್ನಾಟಕ ರಾಜ್ಯ ಗೆಜಟಿಯರ್.

ಭಾಗ 1 : ಕರ್ನಾಟಕ ಸರ್ಕಾರ

ಭಾಗ 2 : 1982

ಕಿಟಲ್ – A Kannada English Dictionary Mangalore, 1984

ಕಿಟಲ್ – Kannada English Dictionary, Vol. I to IV, Madras, 1968

ಕನ್ನಡ ನಿಘಂಟು – ಕರ್ನಾಟಕ ಸಾಹಿತ್ಯ ಪರಿಷತ್, ಬೆಂಗಳೂರು (1970–80)

ಬಿ.ಎಲ್.ರೈಸ್. ಮೈಸೂರು ಗೆಜಟಿಯರ್ 1987.

ಇಂಗ್ಲೀಷ್ – ಕನ್ನಡ ನಿಘಂಟು ಮೈಸೂರು ವಿಶ್ವವಿದ್ಯಾನಿಲಯ – 1994


## JOURNALS


Annuals of Bhandarkar Oriented Research Institute, Poona

Half Yearly Journals of the Mysore University, Indian Antiquary.

Indian Historical Quarterly

Indian History Congress (Proceedings) Journal of Indian History

Journal of Bombay Branch of Royal Asciatic Society

Journal of Karnataka University Humanities and Social Sciences, Number.

Journal of Historical Studies

Journal of Historical Society University of Mysore

Journal of Indian Research Institute

Journal of Modern Review

Quarterly Journal of Mythic Society, Bangalore

Quarterly Journal of Andhra Historical Society

# ಹೊಯ್ಸಳರ ವಂಶಾವಳಿ

- ಸಳ
  - ನೃಪಕಾಮ (ಕ್ರಿ.ಶ. 1000–1045)
    - ವಿನಯಾದಿತ್ಯ (ಕ್ರಿ.ಶ. 1045–1098)
      - ಎರೆಯಂಗ (ಕ್ರಿ.ಶ. 1098–1100)
        - ಒಂದನೇ ಬಲ್ಲಾಳ (ಕ್ರಿ.ಶ. 1100–1108)
        - ವಿಷ್ಣುವರ್ಧನ (ಕ್ರಿ.ಶ. 1108–1152)
          - ಬಲ್ಲಾಳದೇವ
          - ಒಂದನೆಯ ನರಸಿಂಹ (ಕ್ರಿ.ಶ. 1152–1173)
            - ಎರಡನೆಯ ಬಲ್ಲಾಳ (ಕ್ರಿ.ಶ. 1173–1220)
              - ಎರಡನೆಯ ನರಸಿಂಹ (ಕ್ರಿ.ಶ. 1220–1235)
                - ಸೋಮೇಶ್ವರ (ಕ್ರಿ.ಶ. 1235–1253)
                  - ಮೂರನೆಯ ನರಸಿಂಹ (ಕ್ರಿ.ಶ. 1253–1292)
                    - ಮೂರನೆಯ ಬಲ್ಲಾಳ (ಕ್ರಿ.ಶ. 1292–1342)
                      - ವಿರೂಪಾಕ್ಷ ನಾಲ್ಕನೆಯ ಬಲ್ಲಾಳ (ಕ್ರಿ.ಶ. 1342–1346)
                  - ರಾಮನಾಥ (ಕ್ರಿ.ಶ. 1253–1295)
        - ಉದಯಾದಿತ್ಯ

## KEY TO ABBREVIATIONS

**A. Books and Journals**

| | | |
|---|---|---|
| E.C. | - | Epigraphica Carnatica |
| E.I. | - | Epigraphia Indica |
| I.A. | - | Indian Antiguary |
| J.I.H. | - | Journal of Indian History |
| M.A.R. | - | Mysore Archaeological Reports |
| Q.J.M.S. | - | Quarterly Journal of Mythic Society |
| S.I.I. | - | South Indian Inscriptions |

**B. Taluqs**

| | | |
|---|---|---|
| A.G. | - | Arkalgud |
| A.K. | - | Arsikere |
| Bl | - | Belur |
| Bn | - | Bangalore |
| BP | - | Bowringpet |
| Cd | - | Chitradurga |
| Cg | - | Coorg |
| Ch | - | Chamarajanagar |
| Ci | - | Chikkanayakanahalli |
| Cm | - | Chikkamagalur |
| Cn | - | Channaraya Pattana |
| Cp | - | Channapatna |
| Db | - | Doddaballapur |
| Gu | - | Gundlupet |
| Hd | - | Heggadadevanakote |
| Hi | - | Honnalli |
| Hn | - | Hassan |
| Hr | - | Hiriyur |

| | | |
|---|---|---|
| Kd | - | Kadur |
| Ki | - | Kolar |
| Kn | - | Kanakanahalli |
| Kr | - | Krishnaraja Pet |
| Md | - | Mandya |
| Ng | - | Nagamangala |
| Nj | - | Nanjangud |
| Nl | - | Nelamangala |
| Sa | - | Sagar |
| Sb | - | Sorab |
| Sb | - | Shravanabelagola |
| Sh | - | Shimoga |
| Si | - | Sira |
| Sr | - | Srirangapatna |
| Tk | - | Tarikere |
| Tm | - | Tumkur |
| Tn | - | T.Narasipur |
| Tp | - | Tiptur |
| Yd | - | Yedatore |
| Yi | - | Yalandur |



ಸೋಮನಾಥಪುರದ ರಸ್ತೆ